ಕಾಳಿದಾಸನ

# ರಘುವಂಶ

(ಒಂದನೆಯ ಮತ್ತು ಹತ್ತನೆಯ ಸರ್ಗ ಸೇರಿಸಿದ ಸಂಸ್ಕರಣ)

(ಸ್ವಯಂಬೋಧಿನಿ)



ಲೇಖಕರು

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು



ಅಧ್ಯಾತ್ಮಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ - 573 211

ದೂರವಾಣಿ: 08175 273820

www.adhyatmaprakasha.org.

e-mail: secretary@adhyatmaprakasha.org.

## ಕೆಲವು ಸಂಸ್ಕೃತ ಗ್ರಂಥಗಳು

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಸಂಸ್ಕೃತ ಗ್ರಂಥಾವಳಿಗಳು ಮತ್ತು ಮಾಸಪತ್ರಿಕೆಯ ಲೇಖನಗಳ ರೂಪದಲ್ಲಿ ಸಂಸ್ಕೃತಭಾಷಾಭ್ಯಾಸಕ್ಕೆ ಅಪರಿಮಿತವಾದ ಸಾಹಿತ್ಯವನ್ನು ಪರಮಕರುಣೆಯಿಂದ ಕನ್ನಡಿಗರಿಗೆ ನೀಡಿದ್ದಾರೆ. ಚತುರ್ವಿಧ ಪುರುಷಾರ್ಥವೂ, ಬಾಳಿಗೆ ಬೆಳಕಾಗುವ ಮಹಾತ್ಮರ ಚರಿತ್ರೆಯೂ ಈ ಭಾಷೆಯಲ್ಲಿರುವದು ಒಂದು ವೈಶಿಷ್ಟ್ಯ. ಇದರ ಪರಿಚಯಕ್ಕಾಗಿ **ಸ್ವಯಂಬೋಧಿನೀ ಗ್ರಂಥಮಾಲಾ** ಮತ್ತು **ಸಂಸ್ಕೃತಭಾಷಾಭ್ಯಾಸ ಗ್ರಂಥಮಾಲಾ** ಎಂಬ ಎರಡು ಗ್ರಂಥಸರಣಿಗಳನ್ನು ಶ್ರೀಶ್ರೀಗಳವರು ನಾಡಿನ ಜನತೆಗೆ ನೀಡಿದ್ದಾರೆ. ಸಂಸ್ಕೃತವನ್ನು ಯಾವ ಆಯಾಸವೂ ಇಲ್ಲದೆ ಸುಲಭವಾಗಿ ಕಲಿಯುವದಕ್ಕೆಂದು ಈ ಗ್ರಂಥಾವಳಿಯನ್ನು ಏರ್ಪಡಿಸಿದೆ. ಕನ್ನಡಭಾಷೆಯ ಪರಿಚಯವಿರುವವರಿಗೆಲ್ಲ ಇದು ಅತ್ಯುತ್ತಮಸಾಧನವಾಗಿರುತ್ತದೆ.

## ಸ್ವಯಂಬೋಧಿನೀ ಗ್ರಂಥಮಾಲಾ

### 1. ಸಂಸ್ಕೃತಪ್ರವೇಶಃ

ಈ ಪ್ರವೇಶಪುಸ್ತಕದಲ್ಲಿ ಪ್ರತಿಯೊಂದು ಪಾಠದಲ್ಲಿಯೂ ಇರುವ ಮಾತುಗಳಿಗೆ ಕೆಳಗೆ ಅದೇ ಕ್ರಮದಲ್ಲಿ ಪೂರಾ ಅರ್ಥವನ್ನು ಕೊಟ್ಟಿರುತ್ತದೆಯಾದ್ದರಿಂದ ಗ್ರಂಥವು ಉಪಾಧ್ಯಾಯರ ಸಹಾಯವಿಲ್ಲದೆಯೇ ಓದುವವರಿಗೂ ಅನುಕೂಲವಾಗುವಂತಿದೆ; ಆದರೆ ಉಪಾಧ್ಯಾಯರಿದ್ದರೆ ಪಾಠವು ಬೇಗ ಸಾಗುವದು. ಕೆಲವು ಶಬ್ದಗಳೂ ವಾಕ್ಯಗಳೂ ಬಂದಮೇಲೆಯೇ ವ್ಯಾಕರಣವನ್ನು ವಿದ್ಯಾರ್ಥಿಗಳು ಕಲಿಯುವದೇ ಸರಿಯಾದ ದಾರಿಯೆಂಬ ಅಭಿಪ್ರಾಯದಿಂದ ಈ ಪಾಠಾವಳಿಯನ್ನು ಬರೆದಿರುತ್ತದೆ. ಆದ್ದರಿಂದ ಇಲ್ಲಿ ವ್ಯಾಕರಣದ ನಿಯಮಗಳನ್ನು ಹೆಚ್ಚಾಗಿ ತಗಲಿಸಿಲ್ಲ; ವಿಷಯದ ಕಡೆಗೇ ಲಕ್ಷ್ಯವಿಟ್ಟು ಮಾತುಗಳನ್ನು ಜೋಡಿಸಿರುತ್ತದೆ; ಮತ್ತೆ ಮತ್ತೆ ಅಭ್ಯಾಸದಿಂದ ಶಬ್ದರೂಪಗಳು ಅನಾಯಾಸವಾಗಿ ಓದುವವರ ಮನಸ್ಸಿನಲ್ಲಿ ನೆಡುವಂತೆ ಏರ್ಪಡಿಸಿರುತ್ತದೆ. **(ಎರಡನೆಯ ಮುದ್ರಣ: 2011) ಕ್ರೌನ್ 1/8 ಪು.61**

### 2. ಸಂಸ್ಕೃತಪ್ರಥಮಪುಸ್ತಕಮ್

ಇಲ್ಲಿ ಪಾಠದ ಅಡಿಯಲ್ಲಿ ಮುಖ್ಯವಾದ ಸಂಧಿಗಳನ್ನು ಬಿಡಿಸಿ ತೋರಿಸಿರುತ್ತದೆ; ಇದರ ಜೊತೆಗೆ ವಾಕ್ಯಗಳ ಅನ್ವಯವನ್ನು ಕೊಟ್ಟಿರುತ್ತದೆ. ವರ್ಣನೆ, ಸಂಭಾಷಣೆ, ಕಥೆ, ಕಾಗದ ಬರೆಯುವಿಕೆ – ಈ ರೂಪದಲ್ಲಿ ಪಾಠಗಳನ್ನು ಕೊಟ್ಟಿರುತ್ತದೆ. ಅಲ್ಲಲ್ಲಿಗೆ ಕೆಲವು ಸುಲಭವಾದ ಪದ್ಯಗಳನ್ನೂ ಜೋಡಿಸಿರುತ್ತದೆ. ಮುಖ್ಯವಾದ ಶಬ್ದಗಳ ರೂಪಾವಳಿಯನ್ನೂ ಈ ಪುಸ್ತಕದಲ್ಲಿ ಬರುವ ಕ್ರಿಯಾಪದಗಳ ರೂಪಾವಳಿಯನ್ನೂ ಪುಸ್ತಕದ ಕೊನೆಯಲ್ಲಿ ಕೊಟ್ಟಿರುತ್ತದೆ.

**(ಮೂರನೆಯ ಮುದ್ರಣ: 2000) ಡೆಮ್ಮಿ 1/8 ಪು.102**

### 3. ಕಾಳಿದಾಸನ ರಘುವಂಶ

ರಘುವಂಶವನ್ನು ಅಭ್ಯಾಸಮಾಡುವವರಿಗೆ ಅನುಕೂಲವಾಗುವಂತೆ ಬರೆದಿರುವ ಸಂಸ್ಕೃತವ್ಯಾಖ್ಯಾನಗಳೂ ಕನ್ನಡವಿವರಣೆಗಳೂ ಇದ್ದೇ ಇವೆಯಾದರೂ ಸ್ವತಂತ್ರವಾಗಿ ಓದಿಕೊಳ್ಳುವವರಿಗೂ ಉಪಯೋಗವಾಗುವಂತೆ ಅವರ ಕಷ್ಟವನ್ನೇ ಲಕ್ಷ್ಯದಲ್ಲಿಟ್ಟು ಅವರಿಗೆ ಬೇಕಾಗಬಹುದಾದ ಎಲ್ಲಾ ವಿಷಯಗಳನ್ನು ಅಡಕಮಾಡಿ ನಿಃಸಂದೇಹವಾಗಿ ತಿಳಿಯುವಹಾಗೆ ವಿಷಯ ವಿಭಾಗವನ್ನು ಮಾಡಿಕೊಂಡು ಬರೆದಿರುವಗ್ರಂಥ. ಇದರಲ್ಲಿ ವಿದ್ಯಾರ್ಥಿಗಳಿಗೆ ಮುಖ್ಯವಾಗಿ ತಿಳಿಯಬೇಕಾದ ಅನ್ವಯ, ಪ್ರತಿಪದಾರ್ಥ, ತಾತ್ಪರ್ಯ, ವಿಗ್ರಹವಾಕ್ಯ, ವ್ಯಾಕರಣ ವಿಶೇಷ, ಶಬ್ದರೂಪ, ಕ್ರಿಯಾಪದ ರೂಪಗಳು ಛಂದೋವಿಚಾರ ಇವುಗಳನ್ನು ಜೋಡಿಸಿರುತ್ತದೆ. ಹೆಚ್ಚಿನ ಸಂಸ್ಕೃತ ಅಧ್ಯಯನ ಮಾಡುವವರಿಗೆ ಅತ್ಯುತ್ತಮ ಸೋಪಾನವಾಗಿರುತ್ತದೆ. **(ಎರಡನೆಯ ಮುದ್ರಣ: 2013) ಡೆಮ್ಮಿ 1/8 ಪು.240**

ಜಯ ರಘುವೀರ ಸಮರ್ಥ

ಕಾಳಿದಾಸನ

# ರ ಘು ವಂ ಶ

(ಒಂದನೆಯ ಮತ್ತು ಹತ್ತನೆಯ ಸರ್ಗ ಸೇರಿಸಿದ ಸಂಸ್ಕರಣ)

(ಸ್ವಯಂಬೋಧಿನಿ)

ಅನ್ವಯ, ಪ್ರತಿಪದಾರ್ಥ, ತಾತ್ಪರ್ಯ, ವಿಗ್ರಹವಾಕ್ಯ, ವ್ಯಾಕರಣವಿಶೇಷ, ವಿಶೇಷವಿಚಾರ, ಶಬ್ದರೂಪಗಳು, ಕ್ರಿಯಾಪದರೂಪಗಳು, ಕಥಾಸಂದರ್ಭ, ಛಂದೋವಿಚಾರ ಮುಂತಾದ ವಿಷಯಗಳಿಂದ ಕೂಡಿದ ಗ್ರಂಥ.

ಲೇಖಕರು

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳು

ಕ್ರಮಾಂಕ 255

ಅಧ್ಯಾತ್ಮಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ–ಹಾಸನಜಿಲ್ಲೆ: 573211

ದೂ: 08175-273820

www.adhyatmaprakasha.org

2013

Raghuvamsha of Kalidasa, with commentary "Svayambodhini" written by Shri Satchidanandendra Saraswathi Swamiji. Published by AdhyatmaPrakasha Karyalaya (Public Charitable Trust), Holenarasipura-573211, Ph:08175-273820. website:adhyatmaprakasha.org

ಒಂದನೆಯ ಮುದ್ರಣ - 1930 1000 ಪ್ರತಿಗಳು

ಎರಡನೆಯ ಮುದ್ರಣ - 2013 1000 ಪ್ರತಿಗಳು

ಪುಟಗಳು 10 + **230** = **240**

**ಬೆಲೆ: ರೂ. 60**



ಅಕ್ಷರ ಜೋಡಣೆ

**ಶ್ರೀರಂಗ ಡಿಜಿಟಲ್ ಸಾಫ್ಟ್‌ವೇರ್ ಟೆಕ್ನಾಲಜೀಸ್ ಪ್ರೈ. ಲಿ.,**

ಜೈನಬಸದಿ ಹಿಂಭಾಗ, ಮೊದಲನೆಯ ಕ್ರಾಸ್,

ರಂಗನಾಥ ನಗರ

ಶ್ರೀರಂಗಪಟ್ಟಣ: 571438

**ದೂ: 08236-292432**

http://www.srirangadigital.com

ಮುದ್ರಣಸ್ಥಾನ:

ಶ್ರೀ ರಾಮ ಪ್ರಿಂಟರ್ಸ್

ನಂ. ೨೫, ೧೫ನೇ ಕ್ರಾಸ್

ಶ್ರೀನಿಧಿ ಲೇಔಟ್, ಬೆಂಗಳೂರು-೬೨

ಮೊ: 98453 46197

# ಪ್ರಕಾಶಕರ ಬಿನ್ನಹ

ಕಾಳಿದಾಸ ಅವನ ಕಾವ್ಯಗಳು ಸಂಸ್ಕೃತವಾಙ್ಮಯದಲ್ಲಿ ಹಾಸುಹೊಕ್ಕಾಗಿದೆ. ಅದರಲ್ಲಿಯೂ ರಘುವಂಶದ ಜನಪ್ರಿಯತೆ ಸುಪ್ರಸಿದ್ಧ. ಇದರ ರಸಾಸ್ವಾದನೆ ಸಂಸ್ಕೃತ ಬಲ್ಲವರಿಗೆ ಮಾತ್ರ ಸಾಧ್ಯ. ಈ ಸ್ವಾದವನ್ನು ಕನ್ನಡಬಲ್ಲವರೂ ಸವಿಯಬೇಕು ಕಲಿಯಬೇಕು ಎಂಬ ಮಹದುದ್ದೇಶದಿಂದ ಪೂಜ್ಯ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ಪೂರ್ವಾಶ್ರಮದಲ್ಲಿಯೇ 'ಪುರುಷಾರ್ಥಗ್ರಂಥಾವಳಿ'ಯ ಮೂಲಕ ಪ್ರಕಾಶಿಸಿರುತ್ತಾರೆ.

ರಘುವಂಶವನ್ನು ಸ್ವತಂತ್ರವಾಗಿ (ಸ್ವಯಂಬೋಧಿನಿ) ಅಧ್ಯಯನ ಮಾಡುವವರಿಗೆ ಸಹಾಯವಾಗಲೆಂದು ಅನ್ವಯ, ಪ್ರತಿಪದಾರ್ಥ, ತಾತ್ಪರ್ಯ, ವಿಗ್ರಹವಾಕ್ಯ, ವ್ಯಾಕರಣವಿಶೇಷಗಳು, ವಿಶೇಷವಿಚಾರ, ಶಬ್ದರೂಪಗಳು, ಕ್ರಿಯಾಪದರೂಪಗಳು, ಕರ್ತರಿ-ಕರ್ಮಣಿ ಪ್ರಯೋಗಗಳು, ಕಥಾಸಂದರ್ಭ, ಛಂದೋವಿಚಾರ, ಮಾದರಿ ಪ್ರಶ್ನೆಗಳು ಮುಂತಾದ ಅನುಕೂಲಗಳೊಡನೆ ಗ್ರಂಥಶರೀರದಲ್ಲಿ ವಿಸ್ತರಿಸಿರುತ್ತಾರೆ. ಆದರೆ 'ಪಾಲಿಗೆ ಬಂದದ್ದೇ ಪಂಚಾಮೃತ' ಎಂಬಂತೆ ಒಂದು ಮತ್ತು ಹತ್ತನೇ ಸರ್ಗದ ಆಸ್ವಾದದಿಂದಲೇ ನಾವುಗಳು ತೃಪ್ತಿಪಡಬೇಕಾಗಿದೆ.

ಶ್ರೀ ಶ್ರೀಗಳವರು ಮೊದಲನೇ (೧೯೩೦) ಮುದ್ರಣದಲ್ಲಿ ಒಂದು ಮತ್ತು ಹತ್ತನೇ ಸರ್ಗಗಳನ್ನು ಬೇರೆಬೇರೆಯ ಪುಸ್ತಕವಾಗಿ ಮುದ್ರಿಸಿದ್ದರು. ಈಗ ಶ್ರೀಶ್ರೀಗಳವರ ಶಿಷ್ಯರ-ಭಕ್ತರ ಅಪೇಕ್ಷೆಯಂತೆ ಒಂದು ಮತ್ತು ಹತ್ತನೆಯ ಸರ್ಗಗಳನ್ನು ಒಂದೇ ಪುಸ್ತಕವಾಗಿ ಪ್ರಕಾಶಿಸುತ್ತಿದ್ದೇವೆ. ತಪ್ಪುಗಳನ್ನು ತಿದ್ದುಪಡಿಮಾಡಿ ಒಂದನೆಯ ಸರ್ಗಕ್ಕೆ ಅನ್ವಯವನ್ನು ಮತ್ತು ಪರಾಮರ್ಶಿಕೆಗಳ ಪುಟದ ಸಂಖ್ಯೆಯನ್ನು ನೀಡಿರುತ್ತೇವೆ. ಒಂದನೆಯ ಮತ್ತು ಹತ್ತನೆಯ ಸರ್ಗದ ಶ್ಲೋಕಗಳನ್ನು ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇವೆ.

ಈ ಗ್ರಂಥಪ್ರಕಟನೆಗೆ ಕೆಳಕಂಡ ಭಕ್ತಾದಿಗಳು ಉದಾರವಾಗಿ ಸಹಾಯ ಮಾಡಿರುತ್ತಾರೆ.

೧. ಪೂಜ್ಯ ಭಗವತ್ಪಾದರು, ಕುರುಡಿ ೫೦೦೦ರೂ.

೨. ಅನಂತರಾಮಯ್ಯ, ಬೆಂ. ೫೦೦೦ರೂ.

೩. ಶ್ರೀಮತಿ ಅನುಪಮ ಹೆಗ್ಡೆ, ಬೆಂ. ೫೦೦೦ರೂ.

೪. ಹೆಚ್.ಎಸ್.ಎನ್. ಎಲ್. ಮೂರ್ತಿ, ಬೆಂ. ೫೦೦೦ರೂ

೫. ಶ್ರೀಮತಿ ನಾಗರತ್ನಮ್ಮ, ತಿಪಟೂರು ೧೦೦೦ರೂ.

ಉದಾರವಾಗಿ ಸಹಾಯ ಮಾಡಿದ ಎಲ್ಲಾ ಭಕ್ತಾದಿಗಳಿಗೂ ಕೃತಜ್ಞತಾ ಪೂರ್ವಕವಾದ ವಂದನೆಗಳು.

ಸುಂದರವಾಗಿ ಅಕ್ಷರ ಜೋಡನೆಯನ್ನು ಮಾಡಿರುವ 'ಶ್ರೀರಂಗ ಡಿಜಿಟಲ್ ಸಾಫ್ಟ್‌ವೇರ್ ಟೆಕ್ನಾಲಜೀಸ್ ಪ್ರೈ.ಲಿ. ಇವರಿಗೂ, ಕರಡು ತಿದ್ದಲು ಸಹಾಯಮಾಡಿದ ಅಧ್ಯಾತ್ಮಬಂಧುಗಳಿಗೂ, ಅಂದವಾಗಿ ಮುದ್ರಿಸಿಕೊಟ್ಟ 'ಶ್ರೀರಾಮ ಪ್ರಿಂಟರ್ಸ್' ರವರಿಗೂ

ಶ್ರೀದಿಗ್ವಿಜಯರಾಮ ಹಾಗು ಶ್ರೀಶ್ರೀಗಳವರ ಅನುಗ್ರಹ ಸದಾ ಇರಲಿ ಎಂದು ಪ್ರಾರ್ಥಿಸುತ್ತೇವೆ.

ವಾಚಕಮಹೋದಯರು ಎಂದಿನಂತೆ ಈ ಪುಸ್ತಕವನ್ನು ಬರಮಾಡಿಕೊಂಡು ಓದಿ, ಆಸ್ವಾದಿಸಿ, ಉಪಯೋಗವನ್ನು ಪಡೆದು ಕೃತಾರ್ಥರಾದರೆ ಕಾರ್ಯಾಲಯದ ಶ್ರಮ ಸಾರ್ಥಕವಾಗುವದು. ಸತತವಾಗಿ ಮುದ್ರಣ ಮತ್ತು ಮರುಮುದ್ರಣವಾಗಿ ನಡೆಯುತ್ತಿರುವ ಗ್ರಂಥಪ್ರಕಾಶನಕ್ಕೆ ಪ್ರೋತ್ಸಾಹಿಸಬೇಕಾಗಿ ವಿನಂತಿ.

ವಿಜಯಸಂವತ್ಸರ
ಆಷಾಢ ಬಹುಳ ತ್ರಯೋದಶಿ
ಭಾನುವಾರ
ದಿ|| ೪-೮-೨೦೧೩

**ಪ್ರಕಾಶಕರು**

## ವಿಜ್ಞಾಪನೆ

ರಘುವಂಶವನ್ನು ಅಭ್ಯಾಸಮಾಡುವವರಿಗೆ ಅನುಕೂಲವಾಗುವಂತೆ ಬರೆದಿರುವ ಸಂಸ್ಕೃತವ್ಯಾಖ್ಯಾನಗಳೂ ಕನ್ನಡದ ವಿವರಣೆಗಳೂ ತಕ್ಕ ಮಟ್ಟಿಗೆ ಇದ್ದೇ ಇವೆಯಾದರೂ ಸ್ವತಂತ್ರವಾಗಿ ಓದಿಕೊಳ್ಳುವವರಿಗೂ ಉಪಯೋಗವಾಗುವಂತೆ ಅವರ ಕಷ್ಟವನ್ನೇ ಲಕ್ಷ್ಯದಲ್ಲಿಟ್ಟು ಅವರಿಗೆ ಬೇಕಾಗಬಹುದಾದ ಎಲ್ಲಾ ವಿಷಯಗಳನ್ನೂ ಅಡಕಮಾಡಿ ನಿಃಸಂದೇಹವಾಗಿ ತಿಳಿಯುವ ಹಾಗೆ ವಿಷಯವಿಭಾಗವನ್ನು ಮಾಡಿಕೊಂಡು ಬರೆದಿರುವ ಗ್ರಂಥಗಳಿಲ್ಲವೆಂದು ಕೆಲವರು ಅಭಿಪ್ರಾಯಪಟ್ಟದ್ದರಿಂದ ಈ ಕನ್ನಡಟೀಕೆಯನ್ನು ಬರೆಸಿರುತ್ತದೆ.

ಇದರಲ್ಲಿ ವಿದ್ಯಾರ್ಥಿಗಳಿಗೆ ಮುಖ್ಯವಾಗಿ ತಿಳಿಯಬೇಕಾದ ಅರ್ಥ, ತಾತ್ಪರ್ಯ, ವಿಚಾರ- ಇವುಗಳನ್ನು ದಪ್ಪಕ್ಷರದಲ್ಲಿಯೂ ವ್ಯಾಕರಣವಿಷಯಗಳನ್ನು ಸಣ್ಣಕ್ಷರದಲ್ಲಿಯೂ ಬರೆದಿರುತ್ತದೆ. ಗ್ರಂಥದ ಕೊನೆಯಲ್ಲಿ ಪರೀಕ್ಷೆಯ ಪ್ರಶ್ನೆಗಳ ಸಮೇತ ಹೆಚ್ಚಿಗೆಯ ವಿಚಾರದ ಪರಿಶಿಷ್ಟವನ್ನೂ ಕಾಳಿದಾಸನ ವಿಚಾರದಲ್ಲಿ ಬರೆದಿರುವ ಪ್ರಸ್ತಾವನೆಯನ್ನೂ ಸೇರಿಸಿದೆ.

ಈ ಗ್ರಂಥದಲ್ಲಿರುವ ಕುಂದುಕೊರತೆಗಳನ್ನು ತಿಳಿಸಿದರೆ ಕೃತಜ್ಞತೆಯಿಂದ ಆ ಸೂಚನೆಯನ್ನು ಸ್ವೀಕರಿಸಿ ಎರಡನೆಯ ಮುದ್ರಣದಲ್ಲಿ ಸರಿಪಡಿಸುವೆವು. ಇದೇ ಮಾದರಿಯಲ್ಲಿ ಬೇರೆ ಕೆಲವುಗ್ರಂಥಗಳನ್ನು ನಾವು ಪ್ರಕಾಶಪಡಿಸಬೇಕೆಂದಿರುವದರಿಂದ ವಿಷಯವನ್ನು ಸುಲಭವಾಗಿ ಮಾಡುವದಕ್ಕೆ ಇನ್ನೂ ಯಾವ ಯಾವ ಮಾರ್ಪಾಡುಗಳು ಆವಶ್ಯಕವೆಂಬುದನ್ನು ಮಹನೀಯರು ತಿಳಿಸಬೇಕಾಗಿ ಪ್ರಾರ್ಥನೆ.

ಚಾಮರಾಜಪೇಟೆ
ಬೆಂಗಳೂರು.
-೧೯೩೦

**ಪ್ರಕಾಶಕರು**

# ಪೀಠಿಕೆ

## ಕಾಳಿದಾಸನ ವಿಚಾರ

### ೧ ಅವನ ಜೀವನ ಚರಿತ್ರೆ

ಕಾಳಿದಾಸನು ಭರತಖಂಡದ ಕವಿಗಳಲ್ಲೆಲ್ಲ ಶ್ರೇಷ್ಠನೆಂದು ನಾಗರಿಕಪ್ರಪಂಚದವರೆಲ್ಲರೂ ಒಪ್ಪಿರುತ್ತಾರಷ್ಟೆ. ಈ ಮಹನೀಯನ ಜೀವನಚರಿತ್ರೆಯು ಒಂದಿಷ್ಟೂ ಗೊತ್ತಿಲ್ಲದೆ ಇರುವದು ತುಂಬ ಶೋಚನೀಯವಾದ ಸಂಗತಿಯಾಗಿರುತ್ತದೆ. ಈ ದೇಶದಲ್ಲಿ ಚರಿತ್ರೆಯನ್ನು ಬರೆಯುವ ವಾಡಿಕೆಯು ಪೂರ್ವದಲ್ಲಿ ಬಳಕೆಯಲ್ಲಿರಲ್ಲಿವಾದ್ದರಿಂದ ಜನರು ಈ ಕವಿಯ ವಿಷಯದಲ್ಲಿ ಬಗೆಬಗೆಯಾಗಿ ಕಥೆಗಳನ್ನು ಕಟ್ಟಿರುತ್ತಾರೆ. ಇವನು ಶುದ್ಧಮೂರ್ಖನಾಗಿ ಹುಟ್ಟಿದನೆಂದೂ ಕಾಳಿಯಾನುಗ್ರಹದಿಂದ ದೊಡ್ಡಪಂಡಿತನಾದ್ದರಿಂದ ಇವನಿಗೆ ಕಾಳಿದಾಸನೆಂಬ ಹೆಸರಾಯಿತೆಂದೂ ಕೆಲವರು ಹೇಳುವರು; ವೇಶ್ಯಾಲಂಪಟನಾಗಿದ್ದು ಸಿಂಹಳದ್ವೀಪದಲ್ಲಿಯಾವಳೋ ಒಬ್ಬ ಸೂಳೆಯಿಂದ ಹತನಾದನೆಂದು ಇನ್ನು ಕೆಲವರು ಆಡಿಕೊಳ್ಳುವರು; ವಿಕ್ರಮಾದಿತ್ಯನೆಂಬ ರಾಜನ ಸಭೆಯಲ್ಲಿ ನವರತ್ನಗಳೆಂಬ ಒಂಬತ್ತು ಜನ ವಿದ್ವಾಂಸರಿದ್ದರೆಂದೂ ಕಾಳಿದಾಸನು ಅವರಲ್ಲಿ ಒಬ್ಬನೆಂದೂ ಮತ್ತೆ ಕೆಲವರು ಹೇಳಿಕೊಳ್ಳುತ್ತಿರುವರು. ಧಾರಾನಗರದ ಭೋಜರಾಜನ ಆಸ್ಥಾನಕವಿಯಾಗಿದ್ದನೆಂದು ಭೋಜಪ್ರಬಂಧವೆಂಬ ಒಂದು ಗ್ರಂಥದಲ್ಲಿ ವರ್ಣಿಸಿರುತ್ತದೆ.

ಕಾಳಿದಾಸನು ವಿಕ್ರಮಾದಿತ್ಯರಾಯನ ಸಭೆಯಲ್ಲಿ ಆಸ್ಥಾನಕವಿಯಾಗಿದ್ದನೆಂಬುದು ಈಗಿನ ಬಹುಜನ ವಿದ್ವಾಂಸರ ಮತವಾಗಿರುತ್ತದೆ. ಆದರೆ ಈ ವಿಕ್ರಮಾದಿತ್ಯನೆಂಬುವನು ಕ್ರಿ.ಶ. ೩೫೭ರಿಂದ ೪೬೮ರವರೆಗೆ ಆಳುತ್ತಿದ್ದ ಚಂದ್ರಗುಪ್ತನೇ ಮುಂತಾದ ಮೂರು ಜನ ಗುಪ್ತರಲ್ಲಿ ಒಬ್ಬನೆಂದು ಕೆಲವರೂ ಕ್ರಿ.ಪೂ. ೫೬ರಲ್ಲಿ ಶಕರನ್ನು ಗೆದ್ದು 'ಸಂವತ್' ಎಂಬ ಶಕೆಯನ್ನು ಸ್ಥಾಪಿಸಿದ ರಾಜನೆಂದು ಕೆಲವರೂ ಊಹಿಸುತ್ತಿರುವರು.

### ೨ ಅವನ ಗ್ರಂಥಗಳು

ಕಾಳಿದಾಸನು ಬರೆದ ಗ್ರಂಥಗಳು ಯಾವವೆಂಬ ವಿಷಯದಲ್ಲಿಯೂ ಹೀಗೆಯೇ ವಾದವಿವಾದಗಳು ನಡೆಯುತ್ತಿರುವವು. ಅಭಿಮಾನಿಗಳಾದ ನಮ್ಮವರಲ್ಲನೇಕರು ಯಾವ ಯಾವ ಕವಿತೆಯು ಜನಾನುರಾಗಕ್ಕೆ ಪಾತ್ರವಾಗಿರುವದೋ ಅದನ್ನೆಲ್ಲ ಕಾಳಿದಾಸನ ಹೆಸರಿಗೆ ಗಂಟು ಹಾಕುತ್ತಿರುವರು. ಇದುವರೆಗೆ ಸುಮಾರು ನಲವತ್ತೊಂದು ಗ್ರಂಥಗಳನ್ನು ಕಾಳಿದಾಸ ಕೃತವೆಂದು ಪ್ರಸಿದ್ಧಿಗೆ ತಂದಿರುತ್ತಾರೆ. ಆದರೆ-

**ಏಕೋಽಪಿ ಜೀಯತೇ ಹನ್ತ ಕಾಳಿದಾಸೋ ನ ಕೇನಚಿತ್ ।**
**ಶೃಙ್ಗಾರೇ ಲಲಿತೋದ್ಗಾರೇ ಕಾಳಿದಾಸತ್ರಯೀ ಕಿಮು ॥**

(ಲಲಿತೋಕ್ತಿಯಿಂದ ಕೂಡಿದ ಶೃಙ್ಗಾರಪ್ರಧಾನವಾದ ಕಾವ್ಯದಲ್ಲಿ ಒಬ್ಬ

ಕಾಳಿದಾಸನನ್ನೆ ಸೋಲಿಸುವದು ಆಗುವ ಹಾಗಿಲ್ಲ; ಇನ್ನು ಮೂರು ಜನ ಕಾಳಿದಾಸರಾದರೆ ಹೇಳುವದೇನಿದೆ?) - ಎಂದು ರಾಜಶೇಖರನೆಂಬಾತನು ಬರೆದಿರುತ್ತಾನೆ. ಇದನ್ನು ನೋಡಿದರೆ ಕಾಳಿದಾಸನೆಂಬ ಹೆಸರಿನ ಕವಿಗಳು ಎಷ್ಟೋ ಜನ ಇರಬಹುದೆಂದು ತೋರುವದರಿಂದ ಈ ಗ್ರಂಥಗಳನ್ನೆಲ್ಲ ಒಬ್ಬನೇ ಬರೆದನೆಂತ ಹೇಳುವದಕ್ಕಾಗುವದಿಲ್ಲ. ಗ್ರಂಥದ ಯೋಗ್ಯತೆಯದೃಷ್ಟಿಯಿಂದ ನೋಡಿದರೂ ಇವುಗಳಲ್ಲಿ ಬಹಳ ತಾರತಮ್ಯವು ಕಂಡುಬರುತ್ತದೆ. ಒಟ್ಟಿನಲ್ಲಿ ಕುಮಾರಸಂಭವ, ಮೇಘದೂತ, ರಘುವಂಶ- ಎಂಬ ಕಾವ್ಯಗಳು, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ- ಎಂಬ ನಾಟಕಗಳು, ಹೀಗೆ ಆರು ಗ್ರಂಥಗಳು ಒಬ್ಬನೇ ಒಬ್ಬ ಕಾಳಿದಾಸನು ಬರೆದವೆಂದು ನಿಃಸಂದೇಹವಾಗಿ ಹೇಳಬಹುದಾಗಿದೆ. ಈ ವಿಷಯದಲ್ಲಿ ಯಾರಲ್ಲಿಯೂ ಬೇರೆ ಅಭಿಪ್ರಾಯವಿರುವದಿಲ್ಲ.

### ೩ ಅವನ ಕಾವ್ಯಗಳು

ಸಂಸ್ಕೃತದಲ್ಲಿ ಗದ್ಯ (prose), ಪದ್ಯ (poetry) ಮಿಶ್ರ (mixed) ಎಂದು ಕಾವ್ಯಗಳು ಮೂರು ಬಗೆ. ಪದ್ಯಕಾವ್ಯಗಳಲ್ಲಿ ಬಗೆಬಗೆಯಾದ ಛಂದಸ್ಸುಗಳಿಂದ ಕೂಡಿದ ವೃತ್ತಗಳಿರುತ್ತವೆ. ಯಾವದಾದರೊಂದು ನಿಜವಾಗಿ ನಡೆದ ವಿಷಯವನ್ನೋ ಕಲ್ಪಿತವಾದ ವಿಷಯವನ್ನೊ ವಿಂಗಡಿಸಿಕೊಂಡು ಅವುಗಳಲ್ಲಿ ಬರೆದಿರುವರು. ಬಗೆಬಗೆಯದ ವರ್ಣನೆಗಳಿಂದ ಮನೋಹರವಾದ ರೀತಿಯಲ್ಲಿ ಪುರುಷಾರ್ಥಗಳನ್ನುಪದೇಶಿಸುವದೇ ಕಾವ್ಯಗಳ ಮುಖ್ಯೋದ್ದೇಶವು. ಉತ್ತಮನಾದ ಒಬ್ಬ ನಾಯಕನನ್ನು (hero) ಅಥವಾ ಅನೇಕ ನಾಯಕರನ್ನು ಇಟ್ಟುಕೊಂಡು ವಿಸ್ತಾರವಾಗಿ ಬರೆದಿರುವ ಕಾವ್ಯಕ್ಕೆ ಮಹಾಕಾವ್ಯವೆಂದು ಹೆಸರು; ಯಾವದೋ ಒಂದು ಕಥಾಭಾಗವನ್ನು ಇಟ್ಟುಕೊಂಡು ಬರೆಯುವ ಚಿಕ್ಕ ಕಾವ್ಯಕ್ಕೆ ಖಂಡಕಾವ್ಯವೆಂದು ಹೆಸರು. ಕಾಳಿದಾಸನು ಬರೆದಿರುವ ಕಾವ್ಯಗಳಲ್ಲಿ ಮೇಘದೂತವು ಖಂಡಕಾವ್ಯವು, ಮಿಕ್ಕೆರಡೂ ಮಹಾಕಾವ್ಯಗಳು.

### ೪ ರಘುವಂಶ

ಕಾಳಿದಾಸನು ಬರೆದಿರುವ ಕಾವ್ಯಗಳಲೆಲ್ಲ ರಘುವಂಶವು ಶ್ರೇಷ್ಠವಾದದ್ದೆಂಬುದಕ್ಕೆ ಸಂದೇಹವೇನೂ ಇಲ್ಲ. ಸಂಸ್ಕೃತಕಾವ್ಯವನ್ನು ಓದುವದಕ್ಕೆ ಪ್ರಾರಂಭಿಸುವ ಹುಡುಗರೆಲ್ಲರೂ ರಘುವಂಶವನ್ನೆ ಉಪಯೋಗಿಸುವದು ರೂಢಿಯಲ್ಲಿದೆ. ಆದರೆ ಈ ಗ್ರಂಥವನ್ನು ಓದುವವರ ತಿಳಿವಕೆಯ ಯೋಗ್ಯತೆಗೆ ತಕ್ಕಂತೆ ಕಾಳಿದಾಸನ ಕವಿತೆಯ ಮಹಿಮೆಯೂ ಹೆಚ್ಚು ಹೆಚ್ಚಾಗಿ ಗೊತ್ತಾಗುತ್ತಾ ಹೋಗುವದು. ಈ ಗ್ರಂಥದ ಶ್ಲೋಕಗಳನ್ನೂ ಶ್ಲೋಕ ಭಾಗಗಳನ್ನೂ ನಮ್ಮ ದೇಶದ ಪಂಡಿತರುಗಳು ಸಂಭಾಷಣೆಯಲ್ಲಿ ಸಮಯೋಚಿತವಾಗಿ ಉಪಯೋಗಿಸಿ ಬಹುಮಾನಿಸುತ್ತಿರುವದು ಸುಪ್ರಸಿದ್ಧವಾಗಿರುತ್ತದೆ. ಸಂಸ್ಕೃತವನ್ನರಿಯದವರೂ ಎಷ್ಟೋ ಜನರು ಈ ವಾಕ್ಯಗಳನ್ನು ಸಂಭಾಷಣೆಯಲ್ಲಿ ಬಳಕೆಮಾಡುತ್ತಿರುವದು ಕಂಡುಬರುತ್ತದೆ.

ರಘು ಎಂಬ ಸುಪ್ರಸಿದ್ಧನಾದ ರಾಜನ ವಂಶದವರನ್ನು ವರ್ಣಿಸಿರುವದರಿಂದ ಈ ಗ್ರಂಥಕ್ಕೆ ರಘುವಂಶವೆಂದು ಹೆಸರಾಯಿತು. ವೈವಸ್ವತ ಮನುವಿನ ವಂಶದಲ್ಲಿ ಜನಿಸಿದ ದಿಲೀಪನೇ ಮೊದಲಾಗಿ ಇಪ್ಪತ್ತೊಂಬತ್ತು ರಾಜರುಗಳ ಚರಿತ್ರೆಲಯನ್ನು ಇಲ್ಲಿ ಬರೆದಿರುತ್ತದೆ. ಮುಖ್ಯವಾಗಿ ದಿಲೀಪ, ರಘು, ಅಜ, ದಶರಥ, ರಾಮ - ಇವರನ್ನು ಕವಿಯು ಹೆಚ್ಚಾಗಿ ವರ್ಣಿಸಿರುತ್ತಾನೆ.

ರಾಮಚರಿತ್ರೆಯನ್ನು ಬಹುಮಟ್ಟಿಗೆ ವಾಲ್ಮೀಕಿ ರಾಮಾಯಣದಿದಿಂದ ತೆಗೆದುಕೊಂಡಿರುತ್ತಾನೆ. ಮಿಕ್ಕ ಭಾಗಕ್ಕೆ ವಿಷ್ಣುಪುರಾಣ, ವಾಯುಪುರಾಣ- ಮುಂತಾವುಗಳನ್ನು ಉಪಯೋಗಿಸಿರುವಂತೆ ತೋರುತ್ತದೆ. ರಾಜರ ವಂಶಾವಳಿಯು ಬಹು ಮಟ್ಟಿಗೆ ವಿಷ್ಣುಪುರಾಣವನ್ನೆ ಅನುಸರಿಸಿರುತ್ತದೆ. ಆದರೆ ವಂಶದ ಕ್ರಮವನ್ನೂ ಕಥಾಕ್ರಮವನ್ನೂ ವರ್ಣಿಸುವದರಲ್ಲಿ ಕಾವ್ಯಕ್ಕೆ ಒಪ್ಪಾಗುವಂತೆ ಕವಿಯು ಅಲ್ಲಲ್ಲಿ ಮಾರ್ಪಡಿಸಿಕೊಂಡಿರುತ್ತಾನೆ.

ಈ ಕಾವ್ಯದಲ್ಲಿ ಬಂದಿರುವ ಕಥಾಸಂದರ್ಭದ ವಿಂಗಡವು ಹೇಗೆಂದರೆ:

(ಸರ್ಗ ೧-೩) ದಿಲೀಪರಾಯನು ಸಂತಾನವಿಲ್ಲದ್ದರಿಂದ ವಸಿಷ್ಠರ ಆಶ್ರಮಕ್ಕೆ ಹೋಗಿ ಅವರಲ್ಲಿ ಆಲೋಚನೆಮಾಡಿ ಅವರಪ್ಪಣೆಯಂತೆ ನಂದಿನಿ ಎಂಬ ಹಸುವನ್ನು ಸೇವಿಸಿ, ಅದರ ಅನುಗ್ರಹದಿಂದ ರಘುವೆಂಬ ಮಗನನ್ನು ಪಡೆದದ್ದು. ಯುವರಾಜನಾದ ರಘುವಿನ ಸಾಹಸ. ದಿಲೀಪನು ಅವನಿಗೆ ಪಟ್ಟವನ್ನು ಕಟ್ಟಿ ತಪಸ್ಸಿಗೆ ಹೋದದ್ದು. (೪) ರಘುಮಹಾರಾಯನ ದಿಗ್ವಿಜಯ. ಆಮೇಲೆ. ಇವನು ವಿಶ್ವಜಿತ್ತು ಎಂಬ ಯಾಗವನ್ನು ಮಾಡಿ ಬ್ರಾಹ್ಮಣರಿಗೆ ಸರ್ವಸ್ವವನ್ನೂ ಕೊಟ್ಟದ್ದು. (೫) ಕೌತ್ಸನೆಂಬ ಋಷಿಯ ಗುರುದಕ್ಷಿಣೆಗೋಸ್ಕರ ಕುಬೇರನನ್ನು ಗೆಲ್ಲುವದಕ್ಕೆ ರಘುವು ಯೋಚಿಸಲು ಸುವರ್ಣ ವೃಷ್ಟಿಯಾದದ್ದು. ಇವನಿಗೆ ಅಜನೆಂಬ ಮಗನು ಹುಟ್ಟಿದ್ದು. (೬-೭) ಇಂದುಮತಿಯೆಂಬ ರಾಜಕನ್ಯೆಯನ್ನು ಸ್ವಯಂವರದಲ್ಲಿ ಅಜನು ಮದುವೆಯಾದದ್ದು. ಸ್ವಯಂವರಕ್ಕೆ ಬಂದಿದ್ದ ಮಿಕ್ಕರಾಜರನ್ನು ಸೋಲಿಸಿ ಹಿಂತಿರುಗಿದ್ದು; ಪಟ್ಟಾಭಿಷೇಕವಾದದ್ದು. (೮) ಅಜನಿಗೆ ದಶರಥನೆಂಬ ಮಗನು ಜನಿಸಿದ್ದು; ಅವನ ತಂದೆಯೂ ಇಂದುಮತಿಯೂ ಪರಲೋಕಕ್ಕೆ ಹೋದದ್ದು; ದುಃಖದಿಂದ ಅಜನು ಕೆಲವು ಕಾಲದ ಮೇಲೆ ತೀರಿಕೊಂಡದ್ದು (೯-೧೫) ದಶರಥನ ಕಥೆಯಿಂದ ಮೊದಲಾಗಿ ರಾಮನು ಪರಂಧಾಮಕ್ಕೆ ಹೋಗುವವರೆಗಿನ ರಾಮಾಯಣದ ಕಥೆ. (೧೬) ಕುಶನು ಕುಶಾವತಿಯನ್ನು ಬಿಟ್ಟು ಅಯೋಧ್ಯೆಯನ್ನು ಮತ್ತೆ ರಾಜಧಾನಿಯಾಗಿ ಮಾಡಿಕೊಂಡದ್ದು; ಕುಮುದ್ವತಿಯೆಂಬ ನಾಗಕನ್ಯೆಯನ್ನು ಮದುವೆಯಾದದ್ದು. (೧೭-೧೮) ಅತಿಥಿಯೆ ಮುಂತಾದ ಇಪ್ಪತ್ತೆರಡು ಜನ ರಾಜರ ಸಂಕ್ಷೇಪಕಥೆ. (೧೯) ಸುದರ್ಶನನೆಂಬ ರಾಜನ ಮಗನಾದ ಅಗ್ನಿವರ್ಣನು ವಿಷಯಲಂಪಟನಾಗಿ ಕ್ಷಯರೋಗದಿಂದ ಸತ್ತುಹೋದದ್ದು.

ಕಥೆಯು ಇದ್ದಕ್ಕಿದ್ದ ಹಾಗೆಯೆ ಇಲ್ಲಿಗೆ ನಿಂತು ಹೋಗಿದೆ. ಅಮಂಗಲವಾದ

ಸಮಾಪ್ತಿಯನ್ನು ಗ್ರಂಥದಲ್ಲಿ ಮಾಡುವದು ನಮ್ಮ ದೇಶದಲ್ಲಿ ವಾಡಿಕೆಯಿಲ್ಲ. ಕಾಳಿದಾಸನು ಈ ಗ್ರಂಥವನ್ನು ಮುಂದುವರಿಸಬೇಕೆಂದಿದ್ದರೂ ಯಾವದೋ ಕಾರಣದಿಂದ ಅದು ಸಾಗಲಿಲ್ಲವೆಂದು ತೋರುತ್ತದೆ.

## ಒಂದನೆಯ ಸರ್ಗ

ಕಾಳಿದಾಸನು ತನ್ನ ಗ್ರಂಥಗಳ ಮೊದಲಲ್ಲಿ ಶಿವನನ್ನೇ ಸ್ತೋತ್ರಮಾಡಿರುವನು. ಇಲ್ಲಿಯೂ ಅದರಂತೆ ಪಾರ್ವತೀಪರಮೇಶ್ವರರ ಸ್ತೋತ್ರವನ್ನು ಮಂಗಲಶ್ಲೋಕದಲ್ಲಿ ಸೇರಿಸಿರುತ್ತಾನೆ.

ಕಾಳಿದಾಸನ ಪಾಂಡಿತ್ಯವು ಎಷ್ಟರ ಮಟ್ಟಿನದೆಂಬುದನ್ನು ಈ ಸರ್ಗದಲ್ಲಿ ಅಲ್ಲಲ್ಲಿ ಕಂಡುಬರುವ ವೇದ, ಕರ್ಮ, ತಪಸ್ಸು, ಸಾಂಖ್ಯ, ಯೋಗ, ರಾಜನೀತಿ, ಸಂಗೀತ, ಶಕುನ, ಜ್ಯೋತಿಷ ಮುಂತಾದ ವಿಚಾರಗಳಿಗೆ ಸಂಬಂಧಪಟ್ಟ ಉತ್ತಮಾಭಿಪ್ರಾಯಗಳನ್ನೊಳಗೊಂಡ ವಚನಗಳಿಂದ ಊಹಿಸಬಹುದಾಗಿದೆ. ಶೈಲಿಯು ಪುರಾಣಗಳ ಹಾಗೆ ಸಪ್ಪೆಯಾಗಿಯೂ ಇಲ್ಲ, ಈಚಿನ ಕಾವ್ಯಗಳ ಹಾಗೆ ಹೆಜ್ಜೆಗೊಂದು ಉತ್ಪ್ರೇಕ್ಷೆ, ಅತಿಶಯೋಕ್ತಿ ಮುಂತಾದವುಗಳನ್ನು ಇಟ್ಟು ಡಬ್ಬಿನ ಬಣ್ಣವನ್ನು ಹಾಕಿಯೂ ಇರುವದಿಲ್ಲ. ದೀರ್ಘ ಸಮಾಸಗಳಾಗಲಿ, ದೂರಾನ್ವಯದ ವಾಕ್ಯಗಳಾಗಲಿ, ಶ್ಲೇಷಾಲಂಕಾರಕ್ಕಾಗಿ ತಂದಿರುವ ಕ್ಲಿಷ್ಟಪದಗಳಾಗಲಿ ಇಲ್ಲಿ ಕಂಡುಬರುವದಿಲ್ಲ. ಲಲಿತವಾದ ಶೈಲಿಯಲ್ಲಿ ಸರಳವಾದ ಹಿಡಿತವಾದ ಭಾಷೆಯಲ್ಲಿ ದೇಶಕಾಲಕ್ಕೆ ಒಪ್ಪುವಂಥ ಹೃದಯಂಗಮವಾದ ಉಪಮಾನಗಳಿಂದ ಬರೆದಿರುವದರಿಂದ ಗ್ರಂಥದಲ್ಲಿ ಓದುವವರಿಗೆ ಸುಲಭವಾಗಿ ಪ್ರವೇಶವಾಗುವಂತೆ ಇದೆ.

ಈ ಸರ್ಗದಲ್ಲಿ ತಾನು ಬರೆಯುವ ಗ್ರಂಥದ ನಾಯಕರಾದ ರಘುವಂಶದರಸರ ವರ್ಣನೆಯನ್ನು (ಶ್ಲೋಕ. ೫-೮) ಸಂಕ್ಷೇಪವಾಗಿ ಮಾಡಿ ಗ್ರಂಥದಲ್ಲಿ ಆದರವನ್ನು ಹುಟ್ಟಿಸಿರುತ್ತಾನೆ. ದಿಲೀಪರಾಜನ ವರ್ಣನೆಯನ್ನು ಮಾಡುವದರಲ್ಲಿ (೧೨-೨೩) ಕೌಟಿಲ್ಯ, ಕಾಮಂದಕೀಯ ಮುಂತಾದ ನೀತಿಶಾಸ್ತ್ರಗಳನ್ನನುಸರಿಸಿ ರಾಜನೀತಿಯನ್ನು ವರ್ಣಿಸಿರುವದಲ್ಲದೆ. ರಾಜನಿಗೂ ಪ್ರಜೆಗಳಿಗೂ, ಕ್ಷತ್ರಿಯರಿಗೂ ಬ್ರಾಹ್ಮಣರಿಗೂ ಇರಬೇಕಾದ ಸಂಬಂಧವನ್ನು ಉತ್ತಮರೀತಿಯಲ್ಲಿ ತಿಳಿಸಿರುತ್ತಾನೆ. ರಾಜದಂಪತಿಗಳ ಪ್ರಯಾಣಸಂದರ್ಭದಲ್ಲಿ (೩೬-೪೫) ಪ್ರಕೃತಿಸೌಂದರ್ಯವನ್ನು ಹೃದಯಾಹ್ಲಾದಕರವಾಗಿ ಬಣ್ಣಿಸಿರುತ್ತಾನೆ. ಆಶ್ರಮವರ್ಣನೆಯಲ್ಲಿ (೪೯-೫೩) ಋಷಿಗಳು ವರ್ತಿಸುತ್ತಿದ್ದ ಸ್ವಾಭಾವಿಕವಾದ ಜೀವನಕ್ರಮವನ್ನು ಮನಗಾಣಿಸಿರುತ್ತಾನೆ.

## ಹತ್ತನೆಯ ಸರ್ಗ

ಕಾಳಿದಾಸನು ತನ್ನ ಗ್ರಂಥದ ಮೊದಲಲ್ಲಿ ಶಿವನನ್ನೇ ಸ್ತೋತ್ರಮಾಡಿರುವನಾದರೂ ಈ ಸರ್ಗದಲ್ಲಿ ವಿಷ್ಣುವನ್ನು ಸರ್ವೋತ್ತಮನಾದ ಪರಮಾತ್ಮನೆಂದೇ ಹೊಗಳಿರುತ್ತಾನೆ.

ಇಲ್ಲಿರುವ ವಿಷ್ಣು ಸ್ತೋತ್ರವು ಕುಮಾರಸಂಭವದಲ್ಲಿರುವ ಬ್ರಹ್ಮನ ಸ್ತುತಿಯಂತೆಯೇ ಇದೆ; ಕೆಲವು ವಚನವ್ಯಕ್ತಿಗಳೂ (expressions) ಈ ಎರಡು ಕಾವ್ಯಗಳಲ್ಲಿಯೂ ಒಂದೇ ಬಗೆಯಾಗಿ ಬಂದಿರುತ್ತವೆ. ಈ ಎರಡು ಕಾವ್ಯಗಳಲ್ಲಿಯೂ ಸಾಂಖ್ಯಪ್ರಕ್ರಿಯೆಯನ್ನೂ, ವೇದಾಂತವನ್ನೂ ಬಹು ಮಟ್ಟಿಗೆ ಕವಿಯು ಅನುಸರಿಸಿರುತ್ತಾನೆ. ವೇದಾಂತವು ಬಹು ಮಟ್ಟಿಗೆ ಅದ್ವೈತಸಿದ್ಧಾಂತವನ್ನವಲಂಬಿಸಿರುತ್ತದೆ. (ಉದಾ. ೨೦, ೨೪, ೬೫, - ಈ ಶ್ಲೋಕಗಳನ್ನು ನೋಡಿ.)

ಈ ಸರ್ಗದಲ್ಲಿ ಈ ಗ್ರಂಥದ ನಾಯಕರಲೆಲ್ಲ ಬಹುಮುಖ್ಯನಾದ (ಶ್ಲೋಕ ೬೮) ಶ್ರೀರಾಮನ ವರ್ಣನೆಯನ್ನು ಬಹುವಿಸ್ತಾರವಾಗಿ ಮಾಡಿರುತ್ತಾನೆ. ಮುಖ್ಯವಾಗಿ ವಿಷ್ಣುವನ್ನು ದೇವತೆಗಳು ಪ್ರಾರ್ಥಿಸಿಕೊಂಡದ್ದು ಅವರಿಗೆ ಕೊಟ್ಟ ಮಾತಿಗೆ ಅನುಸಾರವಾಗಿ ಆತನು ದಶರಥನ ನಾಲ್ಕು ಜನ ಮಕ್ಕಳಾಗಿ ಜನಿಸಿದ್ದು - ಈ ಎರಡು ವಿಷಯಗಳ ಕಥೆಯಿದೆ. ಕಥೆಯನ್ನು ಮುಖ್ಯವಾಗಿ ವಾಲ್ಮೀಕಿರಾಮಾಯಣದ ಆಧಾರದಿಂದಲೇ ಬರೆದಿದೆಯಾದರೂ ನಡುನಡುವೆ ಬದಲಾವಣೆಗಳೂ ಕಂಡುಬರುತ್ತವೆ. (ಉದಾ:- ೫, ೫೫, ೫೬.) ವಿಷ್ಣುವಿನ ವರ್ಣನೆಯು ಕವಿಯು ಪುರಾಣಗಳ ತಿಳಿವಳಿಕೆಯಲ್ಲಿ ಎಷ್ಟು ಆಳವಾಗಿ ಇಳಿದಿದ್ದಾನೆನೆಂಬುದನ್ನು ತೋರಿಸುವದು ಮಾತ್ರವಲ್ಲದೆ ಶ್ರೀರಾಮನ ಕಥೆಯನ್ನು ಮುಖ್ಯವಾಗಿಟ್ಟುಕೊಂಡೇ ಈ ಕಾವ್ಯವನ್ನು ಪ್ರಾರಂಭಿಸಿದನೆಂಬುದನ್ನೂ ವ್ಯಕ್ತಗೊಳಿಸುತ್ತದೆ.

ಹೀಗೆ ಒಂದನೆಯ ಮತ್ತು ಹತ್ತನೆಯ ಸರ್ಗಗಳೆರಡರಿಂದಲೇ ಕಾಳಿದಾಸನ ಪಾಂಡಿತ್ಯ, ಶೈಲಿ, ಕವಿತಾಶಕ್ತಿ, - ಇವುಗಳ ವಿಚಾರದಲ್ಲಿ ನಮಗೆ ಎಷ್ಟೋ ವಿಷಯಗಳು ತಿಳಿದುಬಂದು ಈ ಕೆಳಗೆ ಕೊಟ್ಟಿರುವ ಜಗತ್ಪ್ರಸಿದ್ಧವಾದ ಸುಭಾಷಿತವು ಅತ್ಯುಕ್ತಿಯೇನೂ ಅಲ್ಲವೆಂಬುದನ್ನು ದೃಢಪಡಿಸುತ್ತವೆ:—

**ಪುರಾ ಕವೀನಾಂ ಗಣನಾಪ್ರಸಙ್ಗೇ ಕನಿಷ್ಠಿಕಾಧಿಷ್ಠಿತಕಾಳಿದಾಸಾ ।**
**ಅದ್ಯಾಪಿ ತತ್ತುಲ್ಯಕವೇರಭಾವಾತ್ ಅನಾಮಿಕಾ ಸಾರ್ಥವತೀ ಬಭೂವ ॥**

ಹಿಂದಕ್ಕೆ ಕವಿಗಳನ್ನು ವರ್ಣಿಸುವದಕ್ಕೆ ಹೊರಟಾಗ ಕಾಳಿದಾಸನನ್ನು ಕಿರುಬೆರಳಿನ ಮೇಲೆ ಇಟ್ಟರು; ಆದರೆ ಇನ್ನೂ ಆತನಿಗೆ ಸಮನಾದ ಕವಿಯೇ ಸಿಗಲಿಲ್ಲವಾದ್ದರಿಂದ ಮುಂದಿನ ಬೆರಳಿಗೆ 'ಅನಾಮಿಕೆ' (ಹೆಸರಿಲ್ಲದ್ದು) ಎಂಬ ಹೆಸರು ಒಪ್ಪಾಯಿತು.

ಬೆಂಗಳೂರು — ಸಚ್ಚಿದಾನಂದೇಂದ್ರಸರಸ್ವತೀ ಭಿಕ್ಷುಃ
-೧೯೩೦

# ಪರಿವಿಡಿ

# ರಘುವಂಶ

## ಒಂದನೆಯ ಸರ್ಗ

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವನ್ದೇ ಪಾರ್ವತೀಪರಮೇಶ್ವರೌ ॥೧॥

ಅನ್ವಯ. [ವಾಗರ್ಥಾವಿವ ಸಂಪೃಕ್ತೌ ಜಗತಃ ಪಿತರೌ ಪಾರ್ವತೀಪರ ಮೇಶ್ವರೌ ವಾಗರ್ಥಪ್ರತಿಪತ್ತಯೇ (ಅಹಂ) ವಂದೇ]

ಅರ್ಥ. ವಾಗರ್ಥಾವಿವ-ಶಬ್ದಾರ್ಥಗಳ ಹಾಗೆ, ಸಂಪೃಕ್ತೌ-ಕೂಡಿಕೊಂಡಿರು ವವರಾದ, ಜಗತಃ-ಪ್ರಪಂಚಕ್ಕೆ, ಪಿತರೌ - ತಾಯಿತಂದೆಗಳಾದ, ಪಾರ್ವತೀಪರ ಮೇಶ್ವರೌ - ಪಾರ್ವತೀಪರಮೇಶ್ವರರನ್ನು, ವಾಗರ್ಥಪ್ರತಿಪತ್ತಯೇ - (ವಾಗರ್ಥ - ಶಬ್ದಾರ್ಥಗಳ ಪ್ರತಿಪತ್ತಯೇ - ಜ್ಞಾನಕ್ಕೋಸ್ಕರ) ಶಬ್ದಾರ್ಥಗಳನ್ನು ಚೆನ್ನಾಗಿ ತಿಳಿದು ಕೊಳ್ಳುವದಕ್ಕಾಗಿ + ಅಹಂ ನಾನು, ವಂದೇ-ನಮಸ್ಕರಿಸುತ್ತೇನೆ.

ತಾತ್ಪರ್ಯ. ಶಬ್ದಾರ್ಥಗಳ ಹಾಗೆ ನಿತ್ಯವಾಗಿ ಸೇರಿಕೊಂಡಿರುವವರಾಗಿಯೂ ಲೋಕಕ್ಕೆಲ್ಲ ತಾಯಿತಂದೆಗಳಾಗಿಯೂ ಇರುವ ಪಾರ್ವತೀಪರಮೇಶ್ವರರನ್ನು ಶಬ್ದಾ ರ್ಥಗಳ ಜ್ಞಾನವು ನನಗೆ ಉಂಟಾಗುವದಕ್ಕಾಗಿ ನಮಸ್ಕರಿಸುತ್ತೇನೆ.

ವಿಗ್ರಹವಾಕ್ಯಗಳು. ೧ ವಾಕ್ಚ ಅರ್ಥಶ್ಚ - ವಾಗರ್ಥೌ (ದ್ವ); ವಾಗರ್ಥ ಸದೃಶೌ - ವಾಗರ್ಥಾವಿವ (ಸಾ. ಸ.) ೨ ಮಾತಾ ಚ ಪಿತಾ ಚ - ಪಿತರೌ (ಏ. ಶೇ.) ೩ ಈಷ್ಟೇ ಇತಿ-ಈಶ್ವರಃ; ಪರಮಶ್ಚ ಅಸೌ ಈಶ್ವರಶ್ಚ - ಪರಮೇಶ್ವರಃ ಪಾರ್ವತೀ ಚ ಪರಮೇಶ್ವರಶ್ಚ-ಪಾರ್ವತೀ ಪರಮೇಶ್ವರೌ.

ವ್ಯಾಕರಣವಿಶೇಷ. ೧ 'ವಾಗರ್ಥಾವಿವ' ಎಂಬುದು ಸಾಮಾನ್ಯಸಮಾಸ; ಇವಸಮಾಸದಲ್ಲಿ ಹಿಂದಿನ ವಿಭಕ್ತಿಪ್ರತ್ಯಯಕ್ಕೆ ಲೋಪವಾಗುವದಿಲ್ಲ. ವಾಗಾರ್ಥೌ ಇವ ಎಂದು ಎರಡು ಪದವಾಗಿ

ವಿಂಗಡಿಸಬಾರದು. ೨ ಜಗತಃ-ತಕಾರಾನ್ತ ನಪುಂಸಕಲಿಂಗ. ೩ ವಂದೇ - ವದಿ ಅಭಿವಾದನಸ್ತುತ್ಯೋಃ (ವದ್ - ವಂದಿಸು, ಹೊಗಳು) ಎಂಬ ಒಂದನೆಯ ಗಣದ ಧಾತುವಿನ ಲಟ್ (ವರ್ತಮಾನ), ಆತ್ಮನೇಪದ, ಉತ್ತಮಪುರುಷ, ಏಕವಚನ.

ವಿಶೇಷವಿಚಾರ. ಈ ಶ್ಲೋಕದಲ್ಲಿ ಕಾಳಿದಾಸನು ಅರ್ಧನಾರೀಶ್ವರನ ರೂಪದಲ್ಲಿರುವ ಪಾರ್ವತೀಪರಮೇಶ್ವರರನ್ನು ಹೊಗಳಿ ಮಂಗಲಾಚರಣೆಯನ್ನು ಮಾಡಿರುತ್ತಾನೆ. ಈ ರೂಪದಲ್ಲಿ ಅರ್ಧದೇಹವು ಪಾರ್ವತಿ, ಅರ್ಧ ದೇಹವು ಪರಮೇಶ್ವರ- ಹೀಗಿರುವದು. ಪ್ರತಿಯೊಂದು ಶಬ್ದಕ್ಕೂ ತನ್ನ ಅರ್ಥವನ್ನು ಹೇಳುವ ಶಕ್ತಿಯು ಸ್ವಭಾವದಿಂದಲೇ ಇರುತ್ತಿರುವದೆಂದೂ ಶಬ್ದವು ವಾಚಕ, ಅರ್ಥವು ವಾಚ್ಯ- ಹೀಗೆ ವಾಚ್ಯವಾಚಕಭಾವವೆಂಬ ಸಂಬಂಧವು ಶಬ್ದಕ್ಕೂ ಅದರ ಅರ್ಥಕ್ಕೂ ನಿತ್ಯವಾಗಿ ಇರುವದೆಂದೂ ಕರ್ಮಮೀಮಾಂಸಕರು ಹೇಳುತ್ತಾರೆ. ಕವಿಯು ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು, ಶಬ್ದಾರ್ಥಗಳು ಯಾವಾಗಲೂ ಕೂಡಿರುವ ಹಾಗೆ ಎಂದೆಂದಿಗೂ ಕೂಡಿಕೊಂಡಿರುವ ದೇಹವುಳ್ಳ ಪಾರ್ವತೀಪರಮೇಶ್ವರರಿಗೆ ನಮಸ್ಕಾರ ಮಾಡುತ್ತೇನೆ ಎಂದು ಹೇಳಿರುತ್ತಾನೆ.

ಕ್ವ ಸೂರ್ಯಪ್ರಭವೋ ವಂಶಃ ಕ್ವ ಚಾಲ್ಪವಿಷಯಾ ಮತಿಃ ।
ತಿತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್ ॥೨॥

ಅನ್ವಯ. [ಸೂರ್ಯಪ್ರಭವಃ ವಂಶಃ ಕ್ವ ಅಲ್ಪವಿಷಯಾ (ಮಮ) ಮತಿಶ್ಚ ಕ್ವ. ಮೋಹಾತ್ (ಅಹಂ) ದುಸ್ತರಂ ಸಾಗರಂ ಉಡುಪೇನ ತಿತೀರ್ಷುಃ ಅಸ್ಮಿ]

ಅರ್ಥ. ಸೂರ್ಯಪ್ರಭವಃ-(ಸೂರ್ಯ-ಸೂರ್ಯನು ಪ್ರಭವಃ ಕಾರಣ ವಾಗಿರುವ) ಸೂರ್ಯನಿಂದ ಆಗಿರುವ, ವಂಶಃ - ವಂಶವು, ಕ್ವ - ಎಲ್ಲಿ? ಅಲ್ಪವಿಷಯಾ - (ಅಲ್ಪ- ಸ್ವಲ್ಪವಾದ ವಿಷಯವುಳ್ಳ) ಸ್ವಲ್ಪ ವಿಷಯವನ್ನು ಮಾತ್ರ ತಿಳಿಯಬಲ್ಲ, + ಮಮ-ನನ್ನ, ಮತಿಶ್ಚ-ಬುದ್ಧಿಯು ಕೂಡ, ಕ್ವ-ಎಲ್ಲಿ? + ಅಹಂ-ನಾನು, ಮೋಹಾತ್ - ಅಜ್ಞಾನದಿಂದ ದುಸ್ತರಂ-ದಾಟುವದಕ್ಕೆ ಶಕ್ಯವಲ್ಲದ, ಸಾಗರಂ - ಸಮುದ್ರವನ್ನು, ಉಡುಪೇನ- ಹರಿಗೋಲಿನಿಂದ, ತಿತೀರ್ಷುಃ - ದಾಟುವದಕ್ಕೆ ಇಚ್ಛಿಸುವವನು, ಅಸ್ಮಿ-ಆಗಿದ್ದೇನೆ.

ತಾತ್ಪರ್ಯ. ಸೂರ್ಯನಿಂದ ಬಂದಿರುವ ಮಹಾರಘುವಂಶವೆಲ್ಲಿ, ಎಲ್ಲಿಯೋ ಕೆಲವು ವಿಷಯುಗಳನ್ನರಿತಿರುವ ನನ್ನ ಬುದ್ಧಿ ಎಲ್ಲಿ — ಈ ಬುದ್ಧಿಯಿಂದ ನಾನು ಆ ಮಹಾವಂಶವನ್ನು ವರ್ಣಿಸುವದಕ್ಕೆ ಹೊರಟಿರುವದೆಂಬುದು ದಾಟಲಶಕ್ಯ ವಾದ ಸಾಗರವನ್ನು ಮೋಹದಿಂದ ಒಂದು ಸಣ್ಣ ಹರಿಗೋಲಿನಿಂದ ದಾಟುವದಕ್ಕೆ

ಹೊರಡುವ ಪ್ರಯತ್ನದ ಹಾಗಾಗಿರುವದು.

ವಿಗ್ರಹವಾಕ್ಯಗಳು. ೧ ಸೂರ್ಯಃ ಪ್ರಭವಃ ಯಸ್ಯ ಸಃ-ಸೂರ್ಯಪ್ರಭವಃ (ಷ. ಬ.) ೨ ಅಲ್ಪಃ ವಿಷಯಃ ಯಸ್ಯಾಃ ಸಾ-ಅಲ್ಪವಿಷಯಾ (ಷ. ಬ.) ೩ ತರಿತುಂ ಇಚ್ಛುಃ-ತಿತೀರ್ಷುಃ (ಸ. ವೃ.) ೪ ದುಃಖೇನ ತರಿತುಂ ಶಕ್ಯಃ-ದುಸ್ತರಃ (ಕೃ. ವೃ); ತಂ-ದುಸ್ತರಂ.

ವ್ಯಾಕರಣ. ಅಸ್ಮಿ-ಅಸಭುವಿ (ಅಸ್-ಇರು) ಎಂಬ ೨ನೆಯ ಗಣದ ಧಾತುವಿನ ಲಟ್, ಪರಸ್ಮೈಪದ, ಉತ್ತಮಪುರುಷ, ಏಕವಚನ.

ವಿಚಾರ. ರಘುವಂಶವನ್ನು ಮಹಾಸಮುದ್ರಕ್ಕೆ ಹೋಲಿಸಿರುವದರಿಂದ ಅದನ್ನು ವರ್ಣಿಸುವ ತನ್ನ ಕಾವ್ಯದ ಹೆಚ್ಚಿಗೆಯನ್ನು ಹೇಳಿಕೊಂಡಂತೆ ಆಯಿತು.

"ಉಡುಪ" (ಹರಿಗೋಲು) ಎಂಬುದನ್ನು ಬುಟ್ಟಿಯ ಆಕಾರದಲ್ಲಿ ಕಟ್ಟಿಗೆಯಿಂದ ಮಾಡಿ ಅದರ ಮೇಲೆ ಚಕ್ಕಳವನ್ನು ಹೊದ್ದಿಸಿರುತ್ತಾರೆ. 'ಚರ್ಮಾವನದ್ಧಮುಡುಪಂ ಪ್ಲವಃ ಕಾಷ್ಠಃ ಕರಣ್ಡವತ್' ಎಂದು ಸಜ್ಜನ ಕೋಶದಲ್ಲಿದೆ.

ಮನ್ದಃ ಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಮ್ ।
ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ ॥೩॥

ಅನ್ವಯ. [ಮನ್ದಃ ಕವಿಯಶಃಪ್ರಾರ್ಥೀ (ಅಹಮ್) ಪ್ರಾಂಶುಲಭ್ಯೇ ಫಲೇ ಲೋಭಾತ್ ಉದ್ಬಾಹುಃ ವಾಮನ ಇವ ಉಪಹಾಸ್ಯತಾಂ ಗಮಿಷ್ಯಾಮಿ]

ಅರ್ಥ. ಮನ್ದಃ-ಮೂಢನಾಗಿರುವ ಕವಿಯಶಃಪ್ರಾರ್ಥೀ-(ಕವಿ-ಕವಿಗಳ ಯಶಃ - ಕೀರ್ತಿಯನ್ನು ಪ್ರಾರ್ಥೀ - ಬಯಸುತ್ತಿರುವ) ಕವಿಗಳಂತೆ ಕೀರ್ತಿಯನ್ನು ಸಂಪಾದಿಸುವದಕ್ಕೆ ತವಕಿಸುತ್ತಿರುವ + ಅಹಮ್ - ನಾನು ಪ್ರಾಂಶುಲಭ್ಯೇ - (ಪ್ರಾಂಶು - ಎತ್ತರವಾದವನಿಂದ ಲಭ್ಯೇ - ಪಡೆಯಲ್ಪಡುವದಕ್ಕೆ ಯೋಗ್ಯವಾದ) ಎತ್ತರವಾದವನಿಗೆ ಮಾತ್ರ ಸಿಕ್ಕತಕ್ಕ ಫಲೇ - ಹಣ್ಣಿನಲ್ಲಿ ಲೋಭಾತ್ - ಅತ್ಯಾಶೆಯಿಂದ ಉದ್ಬಾಹುಃ (ಉತ್-ಮೇಲಕ್ಕೆತ್ತಿದ ಬಾಹುಃ - ತೋಳುಗಳುಳ್ಳ) ಕೈಯನ್ನು ಮೇಲಕ್ಕೆ ನೀಡಿರುವ ವಾಮನ ಇವ - ಕುಳ್ಳನ ಹಾಗೆ ಉಪಹಾಸ್ಯತಾಂ-ನಗೆಗೀಡಾಗುವಿಕೆಯನ್ನು ಗಮಿಷ್ಯಾಮಿ - ಹೊಂದುವೆನು.

ತಾತ್ಪರ್ಯ. ನಾನು ಮೂಢನಾದರೂ ವಾಲ್ಮೀಕಿಯೆ ಮುಂತಾದ ಕವಿಗಳಿಗೆ ಬಂದಿರುವಂಥ ಕೀರ್ತಿಯನ್ನು ಬಯಸುತ್ತಿರುವೆನು. ಆದ್ದರಿಂದ ಎತ್ತರವಾಗಿ ಬೆಳೆದಿರುವವನ ಕೈಗೆ ಮಾತ್ರ ಸಿಗುವಂತಿರುವ ಗಿಡದ ಹಣ್ಣನ್ನು ತೆಗೆದುಕೊಳ್ಳುವದಕ್ಕೆಂದು ಕೈನೀಡಿರುವ ಗುಜ್ಜಾರಿಯು ಹೇಗೆ ನಗೆಪಾಟಲಾಗುವನೋ ಹಾಗೆ

ನಾನೂ ನಗೆಪಾಟಲಾಗುವದೆ ಸರಿ.

ವಿಗ್ರಹವಾಕ್ಯಗಳು. ೧ ಕವೀನಾಂ ಯಶಃ-ಕವಿಯಶಃ (ಷ. ತ.); ಕವಿಯಶಃ ಪ್ರಾರ್ಥಯತೇ ತಾಚ್ಛೀಲ್ಯೇನ ಇತಿ - ಕವಿಯಶಃಪ್ರಾರ್ಥೀ (ಕ. ವೃ) ೨ ಉಪಹಸಿತುಂ ಯೋಗ್ಯಃ-ಉಪಹಾಸ್ಯಃ (ಕೃ. ವೃ.); ಉಪಹಾಸ್ಯಸ್ಯ ಭಾವಃ-ಉಪಹಾಸ್ಯತಾ; ತಾಂ-ಉಪಹಾಸ್ಯತಾಮ್ (ತ. ವೃ.) ೩ ಪ್ರಾಂಶುನಾ ಲಭ್ಯಂ - ಪ್ರಾಂಶುಲಭ್ಯಂ; (ತೃ. ತ.); ತಸ್ಮಿನ್ - ಪ್ರಾಂಶುಲಭ್ಯೇ ೪ ಉದ್ಗತೌ ಬಾಹೂ ಯಸ್ಯ ಸಃ - ಉದ್ಬಾಹುಃ (ಪ್ರಾ. ಬ.)

ವ್ಯಾಕರಣ. ೧ ಒಂದನೆಯ ಪದ್ಯದಲ್ಲಿ ವಾಗರ್ಥಾವಿವ - ಎಂದು ಸಮಾಸವಾಗಿದೆ. ಆದರೆ ಇಲ್ಲಿ ಉದ್ಬಾಹುಃ, ವಾಮನಃ, ಇವ-ಎಂದು ಮೂರು ಪದಗಳಾಗಿವೆ. ಇವಸಮಾಸವು ಆಗದೆ ಇರುವದೂ ಉಂಟೆಂದು ಇದರಿಂದ ಗೊತ್ತಾಗುತ್ತದೆ. ೨ ಗಮಿಷ್ಯಾಮಿ - ಗಮ್ಲ್‌ಗತೌ (ಗಮ್, ಗಚ್ಛ್-ಹೋಗು) ಎಂಬ ೧ನೆಯ ಗಣದ ಧಾತುವಿನ ಲೃಟ್ (ಭವಿಷ್ಯತ್), ಪರಸ್ಮೈ ಪದ, ಉತ್ತಮಪುರುಷ, ಏಕವಚನ,

ಅಥವಾ ಕೃತವಾಗ್ದ್ವಾರೇ ವಂಶೇಽಸ್ಮಿನ್ ಪೂರ್ವಸೂರಿಭಿಃ ।
ಮಣೌ ವಜ್ರಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ ॥೪॥

ಅನ್ವಯ. [ಅಥವಾ ಪೂರ್ವಸೂರಿಭಿಃ ಕೃತವಾಗ್ದ್ವಾರೇ ಅಸ್ಮಿನ್ ವಂಶೇ ವಜ್ರಸಮುತ್ಕೀರ್ಣೇ ಮಣೌ ಸೂತ್ರಸ್ಯೇವ ಮೇ ಗತಿಃ ಅಸ್ತಿ]

ಅರ್ಥ. ಅಥವಾ-ಇಲ್ಲದಿದ್ದರೆ ಪೂರ್ವಸೂರಿಭಿಃ-(ಪೂರ್ವ-ಹಿಂದಿನವರಾದ ಸೂರಿಭಿಃ - ಕವಿಗಳಿಂದ) ಹಿಂದಿನ ಕವಿಗಳಿಂದ ಕೃತವಾಗ್ದ್ವಾರೇ-(ಕೃತ-ಮಾಡಲ್ಪಟ್ಟ ವಾಕ್-ಮಾತೆಂಬ ದ್ವಾರೇ - ಬಾಗಿಲುಳ್ಳ) ಅನೇಕಗ್ರಂಥಗಳು ರಚಿತವಾಗಿರುವ ಅಸ್ಮಿನ್ - ಈ ವಂಶೇ-ವಂಶದಲ್ಲಿ ವಜ್ರಸಮುತ್ಕೀರ್ಣೇ - (ವಜ್ರ-ವಜ್ರದ ಸೂಜಿಯು ಇಂದ ಸಮುತ್ಕೀರ್ಣೇ -ಕೊರೆಯಲ್ಪಟ್ಟಿರುವ) ವಜ್ರಸೂಜಿಯಿಂದ ಕೊರೆದಿರುವ ಮಣೌ-ರತ್ನದಲ್ಲಿ ಸೂತ್ರಸ್ಯೇವ - ನೂಲಿಗೆ ಹೇಗೋ ಹಾಗೆ ಮೇ - ನನಗೆ ಗತಿಃ - ಗಮನವು ಅಸ್ತಿ-ಇದೆ.

ತಾತ್ಪರ್ಯ. ಅಥವಾ ಮೂಢನಾದ ನನಗೂ ಈ ವಂಶವನ್ನು ವರ್ಣಿಸುವದಕ್ಕೆ ಹೋಗಲು ಅವಕಾಶವಿದೆ. ಏಕೆಂದರೆ ವಜ್ರದ ಸೂಜಿಯಿಂದ ಕೊರೆದ ಮೇಲೆ ರತ್ನದೊಳಕ್ಕೆ ನೂಲೂ ಕೂಡ ಪ್ರವೇಶಿಸಬಹುದಾಗಿರುವಂತೆ ವಾಲ್ಮೀಕರೇ ಮುಂತಾದ ಪೂರ್ವಕವಿಗಳು ರಾಮಾಯಣವೇ ಮುಂತಾದ ವಾಗ್ದ್ವಾರವನ್ನು ಮಾಡಿಟ್ಟಿರುವದರಿಂದ ಅದರ ಮೂಲಕ ನಾನೂ ವರ್ಣಿಸುವದಕ್ಕೆ ಪ್ರವೇಶಿಸಬಹುದಾಗಿದೆ.

ವಿಗ್ರಹವಾಕ್ಯಗಳು. ೧ ವಾಗೇವ ದ್ವಾರಮ್-ವಾಗ್ದ್ವಾರಮ್ (ಅ.ಪೂ.ಕ.) ಕೃ

ತಂ ವಾಗ್ದ್ವಾರಂ ಯಸ್ಯ ಸಃ-ಕೃತವಾಗ್ದ್ವಾರಃ (ಷ.ಬ.) ತಸ್ಮಿನ್-ಕೃತ ವಾಗ್ದ್ವಾರೇ. ೨. ಪೂರ್ವೇ ಚ ತೇ ಸೂರಯಶ್ಚ-ಪೂರ್ವಸೂರಯಃ (ವಿ.ಪೂ.ಕ); ತೈಃ - ಪೂರ್ವ ಸೂರಿಭಿಃ ೩ ವಜ್ರೇಣ ಸಮುತ್ಕೀರ್ಣಃ-ವಜ್ರಸಮುತ್ಕೀರ್ಣಃ (ತೃ.ತ.); ತಸ್ಮಿನ್-ವಜ್ರಸಮುತ್ಕೀರ್ಣೇ.

ವ್ಯಾಕರಣ. ಅಸ್ತಿ-ಅಸಭುವಿ(ಅಸ್-ಇರು) ಎಂಬ ೨ನೆಯ ಗಣದ ಧಾತುವಿನ ಲಟ್, ಪ್ರಥಮಪುರುಷ, ಏಕವಚನ.

ಸೋಽಹಮಾಜನ್ಮಶುದ್ಧಾನಾಮಾಫಲೋದಯಕರ್ಮಣಾಮ್ ।
ಆಸಮುದ್ರಕ್ಷಿತೀಶಾನಾಮಾನಾಕರಥವರ್ತ್ಮನಾಮ್ ॥೫॥

ಅನ್ವಯ. [ಸಃ ಅಹಮ್ ಆಜನ್ಮಶುದ್ಧಾನಾಂ ಆಫಲೋದಯಕರ್ಮಣಾಮ್ ಆಸಮುದ್ರಕ್ಷಿತೀಶಾನಾಂ ಆನಾಕರಥವರ್ತ್ಮನಾಮ್ (ರಘೂಣಾಂ ಅನ್ವಯಂ ವಕ್ಷ್ಯೇ)]

ಅರ್ಥ. ಸಃ ಅಹಮ್-ಆ ನಾನು ಆಜನ್ಮಶುದ್ಧಾನಾಂ-(ಆಜನ್ಮ-ಹುಟ್ಟಿದಂದಿನಿಂದ ಶುದ್ಧಾನಾಂ- ಶುದ್ಧರಾಗಿಯೂ) ಹುಟ್ಟಿದಂದಿನಿಂದಲೂ ಪರಿಶುದ್ಧರಾಗಿಯೂ ಆಫಲೋದಯಕರ್ಮಣಾಮ್ - (ಆಫಲೋದಯ-ಫಲವುಂಟಾಗುವವರೆಗೂ ಕರ್ಮಣಾಂ - ಕರ್ಮವುಳ್ಳವರಾಗಿಯೂ) ಫಲವುಂಟಾಗುವವರೆಗೂ ಕೆಲಸವನ್ನು ಬಿಡದೆಮಾಡುವರಾಗಿಯೂ ಆಸಮುದ್ರಕ್ಷಿತೀಶಾನಾಂ(ಆಸಮುದ್ರ - ಸಮುದ್ರದವರೆಗಿನ ಕ್ಷಿತಿ - ಭೂಮಿಯನ್ನೂ ಈಶಾನಾಮ್- ಆಳಿದವರಾಗಿಯೂ ಆನಾಕರಥವರ್ತ್ಮನಾಮ್-(ಆನಾಕ - ಸ್ವರ್ಗದವರೆಗೂ ರಥ-ರಥದ ವರ್ತ್ಮನಾಂ - ದಾರಿಯುಳ್ಳವರಾಗಿಯೂ) ಸ್ವರ್ಗದವರೆಗೂ ರಥವನ್ನು ನಡೆಸುತ್ತಿದ್ದವರಾಗಿಯೂ [ಇದ್ದ ರಘೂಣಾಂ-ರಘುಗಳ ಅನ್ವಯಂ - ವಂಶದ ಚರಿತ್ರೆಯನ್ನು ವಕ್ಷ್ಯೇ-ಹೇಳುವೆನು.]

ವಿಗ್ರಹವಾಕ್ಯಗಳು. ೧ ಆ ಜನ್ಮನಃ-ಆಜನ್ಮ(ಅ. ಸ.); ಆಜನ್ಮ ಶುದ್ಧಾಃ-ಆಜನ್ಮಶುದ್ಧಾಃ (ಸಾ. ಸ.); ತೇಷಾಮ್ - ಆಜನ್ಮಶುದ್ಧಾನಾಮ್ ೨ ಫಲಸ್ಯ ಉದಯಃ- ಫಲೋದಯಃ (ಷ. ತ.); ಆ ಫಲೋದಯಾತ್-ಆಫಲೋದಯಂ (ಅ. ಸ.); ಆಫಲೋದಯಂ ಕರ್ಮ ಯೇಷಾಂ ತೇ-ಆಫಲೋದಯಕರ್ಮಾಣಃ (ಷ. ಬ.); ತೇಷಾಂ- ಆಫಲೋದಯಕರ್ಮಣಾಮ್ ೩ ಆ ಸಮುದ್ರಾತ್ - ಆಸಮುದ್ರಂ (ಅ. ಸ); ಆಸಮುದ್ರಂ ಕ್ಷಿತಿಃ - ಆಸಮುದ್ರಕ್ಷಿತಿಃ (ಸಾ.ಸ.); ತಸ್ಯಾಃ- ಆಸಮುದ್ರಕ್ಷಿತೇಃ; ಆಸಮುದ್ರಕ್ಷಿತೇಃ ಈಶಾಃ-ಅಸಮುದ್ರಕ್ಷಿತೀಶಾಃ(ಷ. ತ.); ತೇಷಾಂ- ಆಸಮುದ್ರಕ್ಷಿತೀಶಾನಾಂ ೪. ಆ ನಾಕಾತ್-ಆನಾಕಂ (ಅ. ಸ.) ರಥಸ್ಯ ವರ್ತ್ಮ ರಥವರ್ತ್ಮ (ಷ.ತ.); ಆನಾಕಂ ರಥವರ್ತ್ಮ ಯೇಷಾಂ

ತೇ-ಆನಾಕರಥವರ್ತ್ಮನಃ (ಷ. ಬ.); ತೇಷಾಂ - ಆನಾಕ ರಥವರ್ತ್ಮನಾಮ್.

ವ್ಯಾಕರಣ. ಆ ಎಂಬ ಅವ್ಯಯದೊಡನೆ ಪಂಚಮೀವಿಭಕ್ತಿಯು ಸೇರಿ ಅವ್ಯಯೀಭಾವ ಸಮಾಸವಾಗುವಾಗ ' ಆ' ಎಂದುದಕ್ಕೆ ಮರ್ಯಾದೆ, (exclusion) ಅಭಿವಿಧಿ (inclusion) ಎಂಬ ಎರಡು ಅರ್ಥಗಳಿರುವವು. "ಮರ್ಯಾದೆಯೆಂದರೆ. ಅದು ಸೇರಿಲ್ಲ ಅಲ್ಲಿಯವರೆಗೇ" ಎಂಬ ಅರ್ಥ. ಉದಾ: 'ಆಮುಕ್ತಿ ಸಂಸಾರಃ' ಎಂದರೆ ಮುಕ್ತಿಯವರೆಗೆ ಸಂಸಾರವಿರುವದು, ಮುಕ್ತಿಯಲ್ಲಿ ಸಂಸಾರವಿಲ್ಲವೆಂದು ಅರ್ಥ; ಇಲ್ಲಿ ಮುಕ್ತಿಯನ್ನು ಬಿಟ್ಟು ಎಂಬರ್ಥದಲ್ಲಿ 'ಆ' (ವರೆಗೆ) ಎಂಬ ಮಾತನ್ನುಪಯೋಗಿಸುವದರಿಂದ ಮರ್ಯಾದಾರ್ಥವಾಯಿತು. ಅಭಿವಿಧಿ ಎಂದರೆ 'ಅದೂ ಸೇರಿ' ಎಂದರ್ಥ. ಉದಾ: 'ಆಬಾಲಂ ಹರಿಭಕ್ತಿಃ'-ಎಂದರೆ ಹುಡುಗರಿಂದ ಹಿಡಿದು ಹರಿಭಕ್ತಿಯಿರುವದು, ಹುಡುಗರಲ್ಲಿ ಕೂಡ ಇರುವದು ಎಂದು ಅರ್ಥ; ಇಲ್ಲಿ ಹುಡುಗರನ್ನೂ ಸೇರಿಸಿಕೊಂಡು ಎಂಬರ್ಥದಲ್ಲಿ 'ಆ' (ಇಂದ) ಎಂಬ ಮಾತನ್ನುಪಯೋಗಿಸಿರುವದರಿಂದ ಅಭಿವಿಧ್ಯರ್ಥವಾಯಿತು. ಮೇಲೆ ಕೊಟ್ಟಿರುವ ಪದ್ಯದಲ್ಲಿ ಆಜನ್ಮ ಶುದ್ಧರೆಂದರೆ ಜನ್ಮದಲ್ಲಿಯೂ ಶುದ್ಧರು ಈಚೆಗೂ ಶುದ್ಧರು ಎಂದರ್ಥ; ಆನಾಕರಥವರ್ತ್ಮನಾಂ - ಎಂದರೆ ಸ್ವರ್ಗದಲ್ಲಿ ಕೂಡ ಅವರ ರಥವು ಸಂಚರಿಸುತ್ತಿತ್ತೆಂದು ಅರ್ಥ. ಆದ್ದರಿಂದ ಇವೆರಡು ಪದಗಳಲ್ಲಿಯೂ 'ಆ' ಎಂಬುದಕ್ಕೆ 'ಅಭಿವಿಧಿ' ಎಂಬರ್ಥವಿದೆ. ಆಸಮುದ್ರಕ್ಷಿತೀಶಾನಾಮ್-ಎಂಬುದಕ್ಕೂ ಸಮುದ್ರದವರೆಗಿರುವ ಎಲ್ಲಾ ಭೂಮಿಗೂ ಒಡೆಯರು ಎಂದರ್ಥವನ್ನು ಮಾಡಿಕೊಂಡರೆ ಮಾರ್ಯಾದಾರ್ಥ. ಸಮುದ್ರದವರೆಗೂ ರಾಜರು, ಸಮುದ್ರಕ್ಕೂ ರಾಜರು ಎಂಬರ್ಥವನ್ನು ಮಾಡಿಕೊಂಡರೆ ಅಭಿವಿಧಿ ಎಂಬರ್ಥ; ಆಫಲೋದಯಕರ್ಮಣಾಮ್ - ಎಂಬಲ್ಲಿ ಫಲವಾಗುವವರೆಗೂ ಕರ್ಮವನ್ನು ಮಾಡುವವರು ಎಂಬರ್ಥವಾಗಿರುವದರಿಂದಲೂ, ಫಲವಾದ ಮೇಲೆ ಅದಕ್ಕಾಗಿ ಉದ್ಯೋಗ ಮಾಡುವದು ಅನವಶ್ಯಕವಾಗಿರುವದರಿಂದಲೂ, ಮರ್ಯಾದಾರ್ಥವನ್ನು ಇಟ್ಟುಕೊಳ್ಳಬಹುದು.

ವಿಚಾರ. ಈ ಶ್ಲೋಕದಿಂದ ೯ನೆಯ ಶ್ಲೋಕದವರೆಗೂ ಒಂದೇ ವಾಕ್ಯವಾಗಿದೆ. ಆದ್ದರಿಂದ ಒಟ್ಟುತಾತ್ಪರ್ಯವನ್ನು ೯ನೆಯ ಶ್ಲೋಕವಾದ ಮೇಲೆ ಬರೆದಿರುತ್ತದೆ. ೮ನೆಯ ಶ್ಲೋಕವು ಮುಗಿಯುವವರೆಗೂ ರಘುಕುಲದ ಅರಸರ ವರ್ಣನೆಯಿದೆ.

ಯಥಾವಿಧಿಹುತಾಗ್ನೀನಾಂ ಯಥಾಕಾಮಾರ್ಚಿತಾರ್ಥಿನಾಮ್ ।
ಯಥಾಪರಾಧದಣ್ಡಾನಾಂ ಯಥಾಕಾಲಪ್ರಬೋಧಿನಾಮ್ ॥೬॥

ಅನ್ವಯ. [ಯಥಾವಿಧಿಹುತಾಗ್ನೀನಾಂ ಯಥಾಕಾಮಾರ್ಚಿತಾರ್ಥಿನಾಮ್ ಯಥಾಪರಾಧದಂಡಾನಾಂ ಯಥಾಕಾಲಪ್ರಬೋಧಿನಾಂ (ರಘೂಣಾಂ ಅನ್ವಯಂ ವಕ್ಷ್ಯೇ)]

ಅರ್ಥ. ಯಥಾವಿಧಿಹುತಾಗ್ನೀನಾಂ-(ಯಥಾವಿಧಿ-ವಿಧಿಗನುಸಾರವಾಗಿ ಹುತ ಹೋಮಮಾಡಲ್ಪಟ್ಟ ಅಗ್ನೀನಾಂ - ಅಗ್ನಿಗಳುಳ್ಳ) ಶಾಸ್ತ್ರದಲ್ಲಿ ವಿಧಿಸಿರುವಂತೆ

ಅಗ್ನಿಗಳಲ್ಲಿ ಹೋಮಮಾಡಿದವರಾಗಿಯೂ ಯಥಾಕಾಮಾರ್ಚಿತಾರ್ಥಿನಾಮ್-(ಯಥಾಕಾಮ - ಇಚ್ಛೆಗನುಸಾರವಾಗಿ ಅರ್ಚಿತ-ಪೂಜಿಸಲ್ಪಟ್ಟ ಅರ್ಥಿನಾಂ-ಯಾಚಕರುಳ್ಳವರಾಗಿಯೂ) ಯಾಚಕರನ್ನು ಅವರವರ ಇಚ್ಛೆಯನ್ನರಿತು ಸತ್ಕಾರಮಾಡಿದವರಾಗಿಯೂ ಯಥಾಪರಾಧದಂಡಾನಾಂ - (ಯಥಾಪರಾಧ - ತಪ್ಪಿಗೆ ತಕ್ಕಂತೆ ದಂಡಾನಾಂ - ದಂಡನೆಯುಳ್ಳವರಾಗಿಯೂ) ತಪ್ಪಿಗೆ ತಕ್ಕಂತೆ ದಂಡನೆಯನ್ನು ವಿಧಿಸುತ್ತಿದ್ದವರಾಗಿಯೂ ಯಥಾಕಾಲಪ್ರಬೋಧಿನಾಂ-(ಯಥಾಕಾಲ-ಕಾಲಕ್ಕೆ ಸರಿಯಾಗಿ ಪ್ರಬೋಧಿನಾಂ - ಎಚ್ಚರವಾಗುವವರಾಗಿಯೂ) ಕಾಲಕ್ಕೆ ಸರಿಯಾಗಿ ನಿದ್ರೆಯಿಂದೆದ್ದು ತಮ್ಮ ಕಾರ್ಯವನ್ನು ಮಾಡುತ್ತಿದ್ದವರಾಗಿಯೂ.

ವಿಗ್ರಹವಾಕ್ಯಗಳು. ೧ ವಿಧಿಮನತಿಕ್ರಮ್ಯ-ಯಥಾವಿಧಿ (ಅ. ಸ.); ಯಥಾವಿಧಿ ಹುತಾಃ - ಯಥಾವಿಧಿಹುತಾಃ (ಸಾ. ಸ.); ಯಥಾವಿಧಿಹುತಾಃ ಅಗ್ನಯಃ ಯೈಸ್ತೇ-ಯಥಾವಿಧಿಹುತಾಗ್ನಯಃ (ತ್ರ. ಬ.); ತೇಷಾಂ-ಯಥಾವಿಧಿಹುತಾಗ್ನೀನಾಮ್ ೨ ಕಾಮಮನತಿಕ್ರಮ್ಯ-ಯಥಾಕಾಮಂ (ಅ. ಸ); ಯಥಾಕಾಮಂ ಅರ್ಚಿತಾಃ-ಯಥಾಕಾಮಾರ್ಚಿತಾಃ (ಸಾ.ಸ) ಯಶಃ=ಧರ್ಮನಿಮಿತ್ತಾ ಕೀರ್ತಿಃ (ಧರ್ಮದ ನಿಮಿತ್ತದಿಂದ ಬರುವ ಕೀರ್ತಿ) (ಅಯಶಃ=ಅಧರ್ಮ ನಿಮಿತ್ತದಿಂದ ಬರುವ ಕೆಟ್ಟಹೆಸರು) ಯಥಾ ಕಾಮಾರ್ಚಿತಾಃ ಅರ್ಥಿನಃ ಯೈಸ್ತೇ-ಯಥಾಕಾಮಾರ್ಚಿತಾರ್ಥಿನಃ (ತ್ರ. ಬ.); ತೇಷಾಂ- ಯಥಾಕಾಮಾರ್ಚಿತಾರ್ಥಿನಾಮ್ ೩. ಅಪರಾಧಮನತಿಕ್ರಮ್ಯ-ಯಥಾಪರಾಧಂ (ಅ. ಸ.);ಯಥಾಪರಾಧಂ ದಂಡಃ ಯೇಷಾಂ ತೇ ಯಥಾಪರಾಧ ದಂಡಾಃ (ಷ. ಬ.) ತೇಷಾಂ-ಯಥಾಪರಾಧದಂಡಾನಾಂ ೪. ಕಾಲಮನತಿಕ್ರಮ್ಯ-ಯಥಾಕಾಲಂ (ಅ.ಸ.) ಯಥಾಕಾಲಂ ಪ್ರಬೋಧನ ಇತ್ಯೇತಿ-ಯಥಾಕಾಲಪ್ರಬೋಧಿನಃ (ಕೃ.ವೃ)

ವಿಚಾರ. ಗಾರ್ಹಪತ್ಯ, ಆಹವನೀಯ, ದಕ್ಷಿಣ- ಎಂದು ಅಗ್ನಿಗಳು ಮೂರು. ಮೂರು ಅಗ್ನಿಗಳನ್ನೂ ಈ ರಾಜರು ಸೇವಿಸುತ್ತಿದ್ದರು.

> ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತಭಾಷಿಣಾಮ್ ।
> ಯಶಸೇ ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಮ್ ॥೭॥

ಅನ್ವಯ. [ ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತಭಾಷಿಣಾಂ ಯಶಸೇ ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಂ (ರಘೂಣಾಂ ಅನ್ವಯಂ ವಕ್ಷ್ಯೇ)]

ಅರ್ಥ. ತ್ಯಾಗಾಯ-ದಾನಕ್ಕೋಸ್ಕರ ಸಂಭೃತಾರ್ಥಾನಾಂ-(ಸಂಭೃತ-ಕೂಡಿ

ಹಾಕಲ್ಪಟ್ಟ ಅರ್ಥಾನಾಂ-ಹಣವುಳ್ಳವರಾಗಿಯೂ) ಹಣವನ್ನು ಕೂಡಿಹಾಕಿದವರಾಗಿಯೂ ಸತ್ಯಾಯ- ದಿಟಕ್ಕಾಗಿ ಮಿತಭಾಷಿಣಾಂ- ಸ್ವಲ್ಪವಾಗಿ ಮಾತಾಡುವವರಾಗಿಯೂ ಯಶಸೇ- ಕೀರ್ತಿಗಾಗಿ ವಿಜಿಗೀಷೂಣಾಂ-ಜಯಿಸುವದಕ್ಕಿಚ್ಛಿಸುವರಾಗಿಯೂ ಪ್ರಜಾಯೈ-ಸಂತತಿಗೋಸ್ಕರ ಗೃಹಮೇಧಿನಾಂ - ಗೃಹಸ್ಥರಾಗಿರುವವರಾಗಿಯೂ

ವಿಗ್ರಹವಾಕ್ಯಗಳು. ೧ ಸಂಭೃತಃ ಅರ್ಥಃ ಯೈಸ್ತೇ-ಸಂಭೃತಾರ್ಥಾಃ(ತೃ. ಬ.); ತೇಷಾಂ-ಸಂಭೃತಾರ್ಥಾನಾಂ ೨ ಮಿತಂ ಭಾಷನ್ತೇ ಇತಿ ಮಿತಭಾಷಿಣಃ (ಕೃ. ವೃ.); ತೇಷಾಂ-ಮಿತಭಾಷಿಣಾಂ ೩ ವಿಜೇತುಂ ಇಚ್ಛವಃ-ವಿಜಿಗೀಷವಃ (ಸ. ವೃ.); ತೇಷಾಂ ವಿಜಿಗೀಷೂಣಾಂ ೪ ಗೃಹೈಃ ಮೇಧನ್ತ ಇತಿ-ಗೃಹಮೇಧಿನಃ (ಕೃ. ವೃ.); ತೇಷಾಂ-ಗೃಹಮೇಧಿನಾಂ.

ವ್ಯಾಕರಣ. 'ಯಥಾಕಾಲಪ್ರಬೋಧಿನಾಂ', 'ಮಿತಭಾಷಿಣಾಂ'- ಈ ಶಬ್ದಗಳಲ್ಲಿ ಣಿನಿ (ಇನ್) ಎಂಬ ಪ್ರತ್ಯಯವು ಬಂದಿರುತ್ತದೆ. 'ಯಾವಾಗಲೂ ಇಂಥ ಸ್ವಭಾವದವನು' ಎಂಬರ್ಥದಲ್ಲಿ ಈ ಪ್ರತ್ಯಯವು ಬರುತ್ತದೆ. ಇದನ್ನು ತೋರಿಸುವದಕ್ಕೆ 'ಯಥಾಕಾಲಂ ಪ್ರಬೋಧನ್ತಿ ತಾಚ್ಛೀಲ್ಯೇನ ಇತಿ', 'ಮಿತಂ ಭಾಷನ್ತೇ ತಾಚ್ಛೀಲ್ಯೇನ ಇತಿ'-ಎಂದು ವಿಗ್ರಹವಾಕ್ಯವನ್ನು ಹೇಳುವದುಂಟು. 'ಗೃಹಮೇಧಿನಾಂ' ಎಂಬ ಮಾತಿಗೆ ಮೇಲೆ ಕೊಟ್ಟಿರುವ ವಿಗ್ರಹವಾಕ್ಯವು ಮಲ್ಲಿನಾಥವ್ಯಾಖ್ಯಾನದಲ್ಲಿದೆ; ಮೇಧೃಸಂಗಮೇ-(ಮೇಧ್ ಕೂಡು) ಎಂಬ ಒಂದನೆಯ ಗಣದ ಧಾತುವಿಗೆ ಣಿನಿಪ್ರತ್ಯಯವು ಬಂದಿದೆಯೆಂದೂ 'ಹೆಂಡತಿಯರೊಡನೆ ಕೂಡುವವರಾಗಿಯೂ' ಎಂಬುದು ಇದರ ಅರ್ಥವೆಂದೂ ಈ ವ್ಯಾಖ್ಯಾನದಲ್ಲಿದೆ. ಗೃಹಮೇಧಃ ಏಷಾಂ ಅಸ್ತೀತಿ - ಗೃಹಮೇಧಿನಃ (ವಿವಾಹವುಳ್ಳವರು) ಎಂಬರ್ಥವನ್ನು ಮತ್ತೊಂದು ವ್ಯಾಖ್ಯಾನದಲ್ಲಿ ಕೊಟ್ಟಿದೆ.

ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾನ್ತೇ ತನುತ್ಯಜಾಮ್ ॥೮॥

ಅನ್ವಯ. [ಶೈಶವೇ ಅಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ವಾರ್ಧಕೇ ಮುನಿವೃತ್ತೀನಾಂ ಅನ್ತೇ ಯೋಗೇನ ತನುತ್ಯಜಾಂ (ರಘೂಣಾಂ ಅನ್ವಯಂ ವಕ್ಷ್ಯೇ)]

ಅರ್ಥ. ಶೈಶವೇ-ಬಾಲ್ಯದಲ್ಲಿ ಅಭ್ಯಸ್ತವಿದ್ಯಾನಾಂ-(ಅಭ್ಯಸ್ತ-ಅಭ್ಯಾಸಮಾಡಲ್ಪಟ್ಟ ವಿದ್ಯಾನಾಂ- ವಿದ್ಯೆಗಳುಳ್ಳ) ವಿದ್ಯೆಗಳನ್ನು ಅಭ್ಯಾಸಮಾಡಿದವರಾಗಿಯೂ ಯೌವನೇ-ಪ್ರಾಯದಲ್ಲಿ ವಿಷಯೈಷಿಣಾಂ-ವಿಷಯಗಳ ಭೋಗವನ್ನು ಇಚ್ಛಿಸುವವರಾಗಿಯೂ ವಾರ್ಧಕೇ- ಮುಪ್ಪಿನಲ್ಲಿ ಮುನಿವೃತ್ತೀನಾಂ-ಮುನಿಗಳ ವೃತ್ತಿಯುಳ್ಳವರಾಗಿಯೂ ಅನ್ತೇ-ಕೊನೆಗೆ ಯೋಗೇನ-ಪರಮಾತ್ಮಧ್ಯಾನದಿಂದ ತನುತ್ಯಜಾಂ-ಶರೀ

ರವನ್ನು ಬಿಡುವವರಾಗಿಯೂ

ವಿಗ್ರಹವಾಕ್ಯಗಳು. ೧ ಶಿಶೋಃ ಭಾವಃ-ಶೈಶವಂ (ತ. ವೃ.); ತಸ್ಮಿನ್. ಶೈಶವೇ. ೨ ಅಭ್ಯಸ್ತಾಃ ವಿದ್ಯಾಃ ಯೈಸ್ತೇ -ಅಭ್ಯಸ್ತವಿದ್ಯಾಃ (ತೃ. ಬ.); ತೇಷಾಂ - ಅಭ್ಯಸ್ತವಿದ್ಯಾನಾಂ. ೩ ಯೂನೋ ಭಾವಃ- ಯೌವನಂ (ತ. ವೃ.); ತಸ್ಮಿನ್ - ಯೌವನೇ. ೪ ವಿಷಯಾನ್ ಇಚ್ಛನ್ತೀತಿ-ವಿಷಯೈಷಿಣಃ (ಕೃ. ವೃ.); ತೇಷಾಂ-ವಿಷಯೈಷಿಣಾಂ. ೫ ವೃದ್ಧಸ್ಯ ಭಾವಃ - ವಾರ್ಧಕಂ (ತ. ವೃ.); ತಸ್ಮಿನ್-ವಾರ್ಧಕೇ. ೬ ಮುನೀನಾಂ ವೃತ್ತಿಃ-ಮುನಿವೃತ್ತಿಃ (ಷ. ತ.); ಮುನಿವೃತ್ತಿರಿವ ವೃತ್ತಿಃ ಯೇಷಾಂ ತೇ - ಮುನಿವೃತ್ತಯಃ (ಉ. ಬ.); ತೇಷಾಂ-ಮುನಿವೃತ್ತೀನಾಂ. ೭ ತನುಂ ತ್ಯಜನ್ತೀತಿ-ತನುತ್ಯಜಃ (ಕೃ. ವೃ.); ತೇಷಾಂ-ತನುತ್ಯಜಾಮ್.

ವ್ಯಾಕರಣ. ೧ ಯೂನಃ- ನಕಾರಾನ್ತ ಪುಲ್ಲಿಙ್ಗ (೧) ೨. ವಾರ್ಧಕಮ್-ವೃದ್ಧ ಎಂಬ ಮಾತಿನಿಂದ ಬಂದಿರುವದರಿಂದ ಎಂದು ಒತ್ತಕ್ಷರವನ್ನು ಬರೆಯಬೇಕು. ೩ 'ಮುನಿವೃತ್ತಿಃ ವೃತ್ತಿಃ ಯೇಷಾಂ ತೇ'-ಎಂಬಲ್ಲಿ 'ಮುನಿವೃತ್ತಿಃ' ಎಂಬ ಪೂರ್ವಪದಕ್ಕೆ ಮುನಿವೃತ್ತಿಸದೃಶವಾದ ಎಂದು ಲಕ್ಷಣಾರ್ಥ; ಸಮಾಸವಾಗುವಾಗ ಇದರ ಉತ್ತರಪದವಾದ 'ವೃತ್ತಿಃ' ಎಂಬುದು ಲೋಪವಾಗಿದೆ. ಸಪ್ತಮ್ಯಂತಸಹಿತವಾದ ಸಮಾಸವಾಗಲಿ ಉಪಮಾನಸಹಿತಸಮಾಸವಾಗಲಿ ಪೂರ್ವಪದವಾಗಿದ್ದರೆ, ಬಹುವ್ರೀಹಿಯಾಗುವದು; ಪೂರ್ವಪದದ ಎರಡನೆಯ ಮಾತಿಗೆ ಲೋಪವೂ ಬರುವದು. ಮುನಿಗಳ ವೃತ್ತಿಯಂಥ ವೃತ್ತಿಯನ್ನುಳ್ಳವರು ಎಂಬುದು ವಿಗ್ರಹದ ಅರ್ಥವು.

ವಿಚಾರ. ರಘುವಂಶದ ರಾಜರು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ-ಎಂಬ ನಾಲ್ಕು ಆಶ್ರಮವನ್ನೂ ಕ್ರಮವಾಗಿ ಸೇವಿಸುತ್ತಿದ್ದರೆಂದು ಈ ಶ್ಲೋಕದಲ್ಲಿ ಹೇಳಿದೆ. ಇದರಿಂದ ಇಹಲೋಕದ ಸುಖವನ್ನೂ ಪರಲೋಕದ ಸುಖವನ್ನೂ ಅವರು ಚೆನ್ನಾಗಿ ಅನುಭವಿಸಿದವರೆಂದು ಹೇಳಿದಂತೆ ಆಯಿತು.

ರಘೂಣಾಮನ್ವಯಂ ವಕ್ಷ್ಯೇ ತನುವಾಗ್ವಿಭವೋऽಪಿ ಸನ್ ।
ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ ॥೯॥

ಅನ್ವಯ. [(ಸೋಽಹಂ-ಅಂಥ ನಾನು) ತನುವಾಗ್ವಿಭವೋऽಪಿ ಸನ್ ತದ್ಗುಣೈಃ ಕರ್ಣಂ ಆಗತ್ಯ ಚಾಪಲಾಯ ಪ್ರಚೋದಿತಃ (ಸನ್) ರಘೂಣಾಂ ಅನ್ವಯಂ ವಕ್ಷ್ಯೇ]

ಅರ್ಥ. (ಸೋಽಹಂ-ಅಂಥ ನಾನು) ತನುವಾಗ್ವಿಭವೋऽಪಿ ಸನ್-(ತನು - ಸ್ವಲ್ಪವಾದ ವಾಕ್-ಮಾತಿನ ವಿಭವೋऽಪಿ ಸನ್-ಪ್ರಸಾರವುಳ್ಳವನಾದರೂ) ನನಗೆ ಅಷ್ಟು ಶಬ್ದಗಳೇನೂ ಸ್ವಾಧೀನದಲ್ಲಿಲ್ಲದಿದ್ದರೂ ತದ್ಗುಣೈಃ - ಅವರ

ಗುಣಗಳಿಂದ ಕರ್ಣಂ- ಕಿವಿಯನ್ನು ಆಗತ್ಯ-ಬಂದು ಚಾಪಲಾಯ-ಚಾಪಲ್ಯದ ಕೆಲಸಕ್ಕೆ ಪ್ರಚೋದಿತಃ (ಸನ್)-ಪ್ರೇರಿತನಾಗಿ ರಘೂಣಾಂ - ರಘುಕುಲದವರ ಅನ್ವಯಂ-ವಂಶದ ಚರಿತ್ರೆಯನ್ನು ವಕ್ಷ್ಯೇ-ಹೇಳುವೆನು.

ತಾತ್ಪರ್ಯ. ನನಗೇನೂ ಕವಿಗಳಿಗಿರಬೇಕಾದಷ್ಟು ಶಬ್ದಭಂಡಾರವು ಸ್ವಾಧೀನವಿಲ್ಲ. ಆದರೂ ರಘುವಂಶದ ರಾಜರ ಮಹಾಗುಣಗಳು ನನ್ನ ಕಿವಿಗೆ ಬಿದ್ದು ಅವರ ವಂಶವನ್ನು ವರ್ಣಿಸುವ ಕಾವ್ಯವನ್ನು ಬರೆಯುವ ಚಾಪಲ್ಯಕ್ಕೆ ನನ್ನನ್ನು ಹಚ್ಚಿರುತ್ತವೆ. ಆದ್ದರಿಂದ ಗೊತ್ತಿರುವ ಮಟ್ಟಿಗೆ ಆ ವಂಶವನ್ನು ವರ್ಣಿಸುವೆನು.

ವಿಗ್ರಹವಾಕ್ಯಗಳು. ೧ ವಾಚಾಂ ವಿಭವಃ-ವಾಗ್ವಿಭವಃ (ಷ.ತ.); ತನುಃ ವಾಗ್ವಿಭವಃ ಯಸ್ಯ ಸಃ-ತನುವಾಗ್ವಿಭವಃ (ಷ.ಬ.). ೨ ತೇಷಾಂ ಗುಣಾಃ-ತದ್ಗುಣಾಃ (ಷ. ತ.); ತೈಃ-ತದ್ಗುಣೈಃ. ೩ ಚಪಲಸ್ಯ ಕರ್ಮ ಚಾಪಲಮ್ (ತ.ವೃ.); ತಸ್ಮೈ - ಚಾಪಲಾಯ.

ವ್ಯಾಕರಣ. ೧ ರಘೂಣಾಮ್-ರಘು ಎಂಬದಕ್ಕೆ ರಘುರಾಜನು ಎಂಬುದು ವಾಚ್ಯಾರ್ಥ (Primary meaning); ಇವನು ಒಬ್ಬನೇ ಆದ್ದರಿಂದ ಬಹುವಚನದಲ್ಲಿ ಈ ಅರ್ಥವು ಹೊಂದುವದಿಲ್ಲವಾಗಿ 'ರಘುಗಳ' ಎಂದರೆ 'ರಘುವಂಶದವರ' ಎಂದು ಲಕ್ಷ್ಯಾರ್ಥವನ್ನು (Secondary meaning) ಇಟ್ಟುಕೊಳ್ಳಬೇಕು. ೨ 'ತದ್ಗುಣೈಃ ಪ್ರಚೋದಿತಃ'-ಅವರ ಗುಣಗಳಿಂದ ಪ್ರೇರಿತನಾಗಿ ಎಂದು ಹೇಳಿರುವದರಿಂದ 'ಗುಣೈಃ' ಎಂಬ ತೃತೀಯೆಯು ಕರ್ತೃವನ್ನು (agent) ಹೇಳುತ್ತದೆ, ಕರಣವನ್ನು (instrument) ಹೇಳುವದಿಲ್ಲ. ತದ್ಗುಣಾಃ ಕರ್ಣಂ ಆಗತ್ಯ ಮಾಂ ಚಾಪಲಾಯ ಪ್ರಚೋದಿತವನ್ತಃ-ಎಂದು ಇದರ ಕರ್ತರಿಪ್ರಯೋಗವಾಗುತ್ತದೆ. ೩ 'ಚಾಪಲಾಯ ಪ್ರಚೋದಿತಃ'='ಚಾಪಲಂ ಕರ್ತುಂ ಪ್ರಚೋದಿತಃ' (ಚಪಲಕರ್ಮವನ್ನು ಮಾಡುವದಕ್ಕೆ ಪ್ರೇರಿತನಾಗಿ). ಕಿಮರ್ಥಂ ಪ್ರಚೋದಿತಃ? ಕಿಂ ಕರ್ತುಂ ಪ್ರೇರಿತಃ? ಎಂದು ಪ್ರಶ್ನೆ ಹಾಕಿದರೆ 'ಚಾಪಲಂ ಕರ್ತುಂ' ಎಂಬ ಉತ್ತರವು ಬರುವದು. ಆದ್ದರಿಂದ ಪ್ರೇರಣೆಯೆಂಬ ಕ್ರಿಯೆಯು ಚಾಪಲಕರ್ಮವನ್ನು ಮಾಡೋಣವೆಂಬ ಮತ್ತೊಂದು ಕ್ರಿಯೆಗಾಗಿ ಪ್ರಯೋಗವಾಗಿರುತ್ತದೆ ಎಂದಾಯಿತು. ಹೇಗೆ 'ಇಂಥ ಕ್ರಿಯೆಗೋಸ್ಕರ' ಒಂದು ಕ್ರಿಯೆ ಬಂದಿದೆ ಎಂಬುದನ್ನು ಹೇಳುವ 'ತುಮುನ್' ಅಂತವಾದ ಧಾತುವನ್ನು (infinitive of purpose) ಪ್ರಯೋಗಿಸದೆ ಬಿಟ್ಟಾಗಲೆಲ್ಲ ತುಮುನಂತ ಧಾತುವಿನ ಕರ್ಮವನ್ನು ಚತುರ್ಥಿಯಲ್ಲಿಡುವರು. ಉದಾ: 'ಫಲಂ ಆನೇತುಂ ಗತಃ'='ಫಲಾಯಗತಃ' ೪ ವಕ್ಷ್ಯೇ-ವಚ ಪರಿಭಾಷಣೆ (ವಚ್-ಮಾತನಾಡು, ಹೇಳು) ಎಂಬ ೧ನೆಯ ಗಣದ ಧಾತುವಿನ, ಲೃಟ್, ಆತ್ಮನೇಪದ, ಉತ್ತಮಪುರುಷ, ಏಕವಚನ.

ವಿಚಾರ. ೧. ೫ನೆಯ ಶ್ಲೋಕದಿಂದ ೯ನೆಯ ಪದ್ಯ ಪೂರ್ತಿಯಾಗುವವರೆಗೆ ಒಂದೇ ವಾಕ್ಯವು. ಇದಕ್ಕೆ ಕುಲಕವೆನ್ನುತ್ತಾರೆ.

ದ್ವಾಭ್ಯಾಂ ಯುಗ್ಮಮಿತಿ ಪ್ರೋಕ್ತಂ ತ್ರಿಭಿಃ ಶ್ಲೋಕೈರ್ವಿಶೇಷಕಮ್ ।
ಕಲಾಪಕಂ ಚತುರ್ಭಿಃ ಸ್ಯಾತ್ ತದೂರ್ಧ್ವಂ ಕುಲಕಂ ಸ್ಮೃತಮ್ ॥

(ಎರಡು ಶ್ಲೋಕಗಳು ಸೇರಿ ಒಂದು ವಾಕ್ಯವಾದರೆ ಯುಗ್ಮವೆಂದು ಹೆಸರು; ಮೂರು ಸೇರಿದರೆ ವಿಶೇಷಕ; ನಾಲ್ಕು ಸೇರಿದರೆ ಕಲಾಪಕ; ಐದು ಸೇರಿದರೆ ಕುಲಕ. ೨. ರಘುವಂಶದ ರಾಜರ ಗುಣಗಳನ್ನು ಕವಿಯು ವರ್ಣಿಸಿರುವದನ್ನು ನೆನಪಿಡಬೇಕು. (೧) ಅವರು ಜಾತಕರ್ಮವೇ ಮುಂತಾದ ಸಂಸ್ಕಾರಗಳಿಂದ ಶುದ್ಧರಾಗಿದ್ದರು. (೨) ಹಿಡಿದ ಕೆಲಸವು ಸಫಲವಾಗುವವರೆಗೂ ಬಿಡದೆ ಉದ್ಯೋಗ ಮಾಡುತ್ತಿದ್ದರು. (೩) ಸಕಲಭೂಮಿಯನ್ನೂ ಆಳುವ ಚಕ್ರವರ್ತಿಗಳಾಗಿದ್ದರು. (೪) ದೇವತೆಗಳೊಡನೆಯೂ ವ್ಯವಹಾರ ಮಾಡುತ್ತಿದ್ದರು. (೫) ಶಾಸ್ತ್ರೋಕ್ತವಾಗಿ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿದ್ದರು. (೬) ಅವರವರ ಇಚ್ಛೆಯು ಪೂರ್ತಿಯಾಗುವಂತೆ ಯಾಚಕರಿಗೆ ದಾನಮಾಡುತ್ತಿದ್ದರು. (೭) ತಪ್ಪಿಗೆ ತಕ್ಕಷ್ಟೆ ಶಿಕ್ಷೆಯನ್ನು ಅಪರಾಧಿಗಳಿಗೆ ಕೊಡುತ್ತಿದ್ದರು. (೮) ಆಯಾ ಕಾಲವರಿತು ರಾಜಕಾರ್ಯವನ್ನು ಮಾಡುತ್ತಿದ್ದರು. (೯) ಚೆನ್ನಾಗಿ ಸಂಪಾದಿಸಿ ದಾನಮಾಡುತ್ತಿದ್ದರು. (೧೦) ಸತ್ಯವನ್ನೇ ನುಡಿಯಬೇಕೆಂಬ ವ್ರತವುಳ್ಳವರಾಗಿ ಮಿತಭಾಷಿಗಳಾಗಿದ್ದರು. (೧೧) ಶತ್ರುಗಳನ್ನು ಜಯಿಸಿ ಕೀರ್ತಿಯನ್ನು ಸಂಪಾದಿಸಿದ್ದರು. (೧೨) ಕಾಮಾಸಕ್ತರಾಗದೆ ಸಂತಾನಕ್ಕಾಗಿಯೆ ಪತ್ನಿಯರಲ್ಲಿ ಸೇರುತ್ತಿದ್ದರು. (೧೩) ಬಾಲ್ಯದಲ್ಲಿ ಬ್ರಹ್ಮಚರ್ಯವನ್ನೂ ಯೌವನದಲ್ಲಿ ಗಾರ್ಹಸ್ಥ್ಯವನ್ನೂ ಮುಪ್ಪಿನಲ್ಲಿ ವಾನಪ್ರಸ್ಥಾಶ್ರಮವನ್ನೂ ಕೊನೆಗೆ ಸಂನ್ಯಾಸವನ್ನೂ ಸ್ವೀಕರಿಸುತ್ತಿದ್ದರು. ಈ ಗುಣಗಳನ್ನು ಕವಿಯು ಈ ರಘುವಂಶಕಾವ್ಯದಲ್ಲಿ ಅಲ್ಲಲ್ಲಿ ಚೆನ್ನಾಗಿ ವರ್ಣಿಸಿರುತ್ತಾನೆ.

ತಂ ಸನ್ತಃ ಶ್ರೋತುಮರ್ಹನ್ತಿ ಸದಸದ್ವ್ಯಕ್ತಿಹೇತವಃ ।
ಹೇಮ್ನಃ ಸಂಲಕ್ಷ್ಯತೇ ಹ್ಯಗ್ನೌ ವಿಶುದ್ಧಿಃ ಶ್ಯಾಮಿಕಾಪಿ ವಾ ॥೧೦॥

ಅನ್ವಯ. [ತಂ ಸದಸದ್ವ್ಯಕ್ತಿಹೇತವಃ ಸನ್ತಃ ಶ್ರೋತುಂ ಅರ್ಹನ್ತಿ ಹೇಮ್ನಃ ವಿಶುದ್ಧಿಃ ಶ್ಯಾಮಿಕಾಪಿ ವಾ ಅಗ್ನೌ ಸಂಲಕ್ಷ್ಯತೇ ಹಿ]

ಅರ್ಥ. ತಂ-ಅದನ್ನು ಸದಸದ್ವ್ಯಕ್ತಿಹೇತವಃ- (ಸತ್-ಒಳ್ಳೆಯದು ಅಸತ್ - ಕೆಟ್ಟದ್ದು ಇವುಗಳ ವ್ಯಕ್ತಿ-ತೋರುವಿಕೆಗೆ ಹೇತವಃ-ಕಾರಣರಾದ) ಗುಣದೋಷಗಳನ್ನು ನಿರ್ಣಯಿಸಬಲ್ಲ ಸನ್ತಃ-ಸಜ್ಜನರು ಶ್ರೋತುಂ-ಕೇಳುವದಕ್ಕೆ ಅರ್ಹನ್ತಿ - ಯೋಗ್ಯರಾಗಿರುತ್ತಾರೆ. ಹೇಮ್ನಃ-ಚಿನ್ನದ ವಿಶುದ್ಧಿಃ-ಶುದ್ಧಿಯೇ ಆಗಲಿ ಶ್ಯಾಮಿಕಾಪಿ ವಾ-ಕಲ್ಮಷವೆ ಅಗಲಿ ಅಗ್ನೌ-ಬೆಂಕಿಯಲ್ಲಿ ಸಂಲಕ್ಷ್ಯತೇ ಹಿ-ಕಾಣಲ್ಪಡುತ್ತದೆಯಲ್ಲವೆ?

ತಾತ್ಪರ್ಯ. ಈ ರಘುವಂಶಕಾವ್ಯವನ್ನು ಸತ್ಪುರುಷರು ದಯವಿಟ್ಟು

ಕೇಳಬೇಕು. ಏಕೆಂದರೆ ಚಿನ್ನವು ಚೊಕ್ಕವೊ ಮಿಶ್ರವೊ ಎಂಬುದು ಬೆಂಕಿಯಲ್ಲಿ ಕರಗಿಸಿದರೆ ಮಾತ್ರ ಗೊತ್ತಾಗುವಂತೆ ಕಾವ್ಯದ ಗುಣದೋಷಗಳು ಸತ್ಪುರುಷರಾದ ವಿದ್ವಾಂಸರಿಂದಲೆ ಹೊರಬೀಳುತ್ತವೆ.

ವಿಗ್ರಹವಾಕ್ಯಗಳು. ೧ ಸಚ್ಚ-ಅಸಚ್ಚ-ಸದಸತೀ (ದ್ವ.); ತಯೋಃ-ಸದಸತೋಃ; ಸದಸತೋಃ ವ್ಯಕ್ತಿಃ - ಸದಸದ್ವ್ಯಕ್ತಿಃ (ಷ. ತ.); ತಸ್ಯಾಂ - ಸದಸದ್ವ್ಯಕ್ತೌ; ಸದಸದ್ವ್ಯಕ್ತೌ ಹೇತವಃ-ಸದಸದ್ವ್ಯಕ್ತಿಹೇತವಃ.

ವ್ಯಾಕರಣವಿಶೇಷ. ೧ ಹೇಮ್ನಃ-ನಕಾರಾನ್ತ ನಪುಂಸಕಲಿಂಗ ೨ ಸಂಲಕ್ಷ್ಯತೇ-ಇಲ್ಲಿ ಸಮ್+ಲಕ್ಷ್ಯತೇ ಎಂಬ ಎರಡು ಪದಗಳಿವೆ. ಪದಾನ್ತದಲ್ಲಿರುವ ಮಕಾರಕ್ಕೆ ಮುಂದೆ ವ್ಯಂಜನವು ಬಂದರೆ ಅನುಸ್ವಾರವು ಆದೇಶವಾಗುತ್ತದೆ. 'ಸಂ+ಲಕ್ಷ್ಯತೇ' ಎಂದಾಯಿತು; ಅನುಸ್ವಾರದ ಮುಂದೆ ಶ, ಷ, ಸ, ಹ-ಇವುಗಳ ಹೊರತು ಯಾವದೊಂದು ವ್ಯಂಜನವು ಬಂದರೂ ಆ ಮುಂದಿನ ವರ್ಣದ ಜಾತಿಯ ಅನುನಾಸಿಕವರ್ಣವು ಆದೇಶವಾಗುತ್ತದೆ. ಆದರೆ ಪದಾಂತದಲ್ಲಿರುವ ಅನುಸ್ವಾರಕ್ಕೆ ಈ ಸವರ್ಣಾದೇಶವು ಆಗದೆ ಹೋಗಬಹುದು. ಸಂ+ಲಕ್ಷ್ಯತೇ ಎಂಬಲ್ಲಿ ಅನುಸ್ವಾರವು 'ಸಂ' ಎಂಬ ಪದದ ಕೊನೆಯಲ್ಲಿರುವದರಿಂದ ಸಲ್ಲಕ್ಷ್ಯತೇ ಎಂದಾಗಲಿ, ಸಂಲಕ್ಷ್ಯತೇ ಎಂದಾಗಲಿ ಎರಡು ವಿಧವಾಗಿಯೂ ರೂಪವಾಗಬಹುದು. ೩ ಶ್ರೋತುಂ ಅರ್ಹನ್ತಿ ಎಂಬುದಕ್ಕೆ ಕೇಳಲು ಯೋಗ್ಯರಾಗಿರುತ್ತಾರೆ ಎಂಬುದು ಅಕ್ಷರಾರ್ಥವು; 'ಕೇಳಲಿ' 'ಕೇಳಬೇಕು' ಎಂಬುದು ತಾತ್ಪರ್ಯವು. ೪ ಅರ್ಹನ್ತಿ-ಅರ್ಹ ಪೂಜಾಯಾಮ್ (ಅರ್ಹ-ಯೋಗ್ಯನಾಗಿರು) ಎಂಬ ೧ನೆಯ ಗಣದ ಧಾತುವಿನ ಲಟ್, ಪ. ಪ್ರ. ಬ. ೫ ಸಂಲಕ್ಷ್ಯತೇ-ಲಕ್ಷದರ್ಶನಾಙ್ಕನಯೋಃ-(ಲಕ್ಷ್-ನೋಡು, ಗುರ್ತಿಸು) ಎಂಬ ೧೦ನೆಯ ಗಣದ ಧಾತುವಿನ ಕರ್ಮಣಿ ಲಟ್, ಆ. ಪ್ರ. ಏ.

ವೈವಸ್ವತೋ ಮನುರ್ನಾಮ ಮಾನನೀಯೋ ಮನೀಷಿಣಾಮ್ ।
ಆಸೀನ್ಮಹೀಕ್ಷಿತಾಮಾದ್ಯಃ ಪ್ರಣವಶ್ಛನ್ದಸಾಮಿವ ॥೧೧॥

ಅನ್ವಯ. [ಮನೀಷಿಣಃ ಮಾನನೀಯಃ ಛಂದಸಾಂ ಪ್ರಣವ ಇವ ಮಹೀಕ್ಷಿತಾಂ ಆದ್ಯಃ ವೈವಸ್ವತೋ ನಾಮ ಮನುಃ ಆಸೀತ್]

ಅರ್ಥ. ಮನೀಷಿಣಃ- ವಿದ್ವಾಂಸರಿಗೆ ಮಾನನೀಯಃ-ಗೌರವಿಸುವದಕ್ಕೆ ಯೋಗ್ಯನಾದ ಛಂದಸಾಂ-ವೇದಗಳಿಗೆ ಪ್ರಣವ ಇವ-ಓಂಕಾರದ ಹಾಗೆ ಮಹೀಕ್ಷಿತಾಂ-ದೊರೆಗಳಿಗೆ ಆದ್ಯಃ-ಮೊದಲನೆಯವನಾದ ವೈವಸ್ವತೋ ನಾಮ-ವೈವಸ್ವತನೆಂಬ ಮನುಃ-ಮನುವು ಆಸೀತ್-ಇದ್ದನು.

ತಾತ್ಪರ್ಯ. ಜ್ಞಾನಿಗಳಿಗೆಲ್ಲ ಪೂಜ್ಯನೆನಿಸಿದ್ದ ವೈವಸ್ವತನೆಂಬ ಮನುವಿದ್ದನು. ವೇದಗಳಿಗೆ ಹೇಗೆ ಓಂಕಾರವು ಮೊದಲೋ ಹಾಗೆ ಆತನು ರಾಜರುಗಳಿಗೆಲ್ಲರಿಗೂ

ಮೊದಲನೆಯವನು.

ವಿಗ್ರಹವಾಕ್ಯಗಳು. ೧ ಮಾನಯಿತುಂ ಯೋಗ್ಯಃ-ಮಾನನೀಯಃ (ಕೃ. ವೃ.); ೨ ಮನಸಃ ಈಷಿಣಃ-ಮನೀಷಿಣಃ (ಷ. ತ.); ತೇಷಾಂ ಮನೀಷಿಣಾಮ್ ೩ ಮಹೀಂ ಕ್ಷಿಯನ್ತೀತಿ-ಮಹೀಕ್ಷಿತಃ (ಕೃ. ವೃ.); ತೇಷಾಂ-ಮಹೀಕ್ಷಿತಾಮ್. ೪ ವಿವಸ್ವತಃ ಅಪತ್ಯಂ ಪುಮಾನ್-ವೈವಸ್ವತಃ.

ವ್ಯಾಕರಣ. ಮಹೀಕ್ಷಿತ್-ಎಂಬುದು ಕ್ಷಿ ಐಶ್ವರ್ಯೇ-(ಕ್ಷಿ-ಆಳು)ಎಂಬರ್ಥದ ಧಾತುವಿನಿಂದ ಬಂದಿದೆ. ಮಹೀಕ್ಷಿತ್-ಇದಕ್ಕೆ 'ಮಹೀಂ ಕ್ಷಯನ್ತೀತಿ' ಎಂದು ವಿಗ್ರಹಬಿಡಿಸಬೇಕೆಂದು ಕೆಲವರು ಹೇಳುತ್ತಾರೆ. 'ಮಹೀಭೃತಾಮ್' ಎಂದು ಪಾಠಾನ್ತರವುಂಟು; ಆಗ 'ಮಹೀಂ ಬಿಭ್ರತೀತಿ - ಮಹೀಭೃತಃ' ಎಂದು ಬಿಡಿಸಬೇಕು. ೨ ನಾಮ-ಅವ್ಯಯ; 'ಪ್ರಸಿದ್ಧನಾದ', 'ಎಂಬ' ಎಂದರ್ಥ; ಹೆಸರು ಎಂಬರ್ಥದ ಶಬ್ದವಾಗಿದ್ದರೆ ವೈವಸ್ವತ ನಾಮಾ ಎಂದು ಪ್ರಯೋಗಿಸಬೇಕಾಗುವದು. ೩ ಆಸೀತ್-ಅಸ ಭುವಿ(ಅಸ್-ಇರು) ಎಂಬ ೨ನೆಯ ಗಣದ ಧಾತುವಿನ ಲಙ್, ಪ. ಪ್ರ. ಏ.

ವಿಚಾರ. ೧ ವೈವಸ್ವತನೆಂಬವನು ಸೂರ್ಯನ ಮಗನು. ಹದಿನಾಲ್ಕು ಜನ ಮನುಗಳಲ್ಲಿ ಇವನೊಬ್ಬನು. ಇವನು ಮನುಷ್ಯರಿಗೆಲ್ಲ ಮೂಲಪುರುಷನೆಂದೂ ಇವನೆ ವರ್ಣಾಶ್ರಮವ್ಯವಸ್ಥೆಯನ್ನು ತಿಳಿಸುವ ಶಾಸ್ತ್ರವನ್ನು ಮಾಡಿ ಅದರಂತೆ ಜನ ರನ್ನು ಆಳಿದ ಮೊದಲನೆಯ ರಾಜನೆಂದೂ ಪುರಾಣಗಳಲ್ಲಿದೆ. ೨ ಯಾವ ವೇದ ವನ್ನು ಹೇಳಬೇಕಾದರೂ ಮೊದಲು ಓಂಕಾರವನ್ನುಚ್ಚರಿಸುವ ಸಂಪ್ರದಾಯವಿದೆ; ಇದರಂತೆ ರಘುವಂಶದ ರಾಜರ ಕಥೆಯನ್ನು ಪ್ರಾರಂಭಿಸಬೇಕಾದರೆ ಮೂಲಪುರುಷ ನಾದ ಮನುವಿನಿಂದ ಪ್ರಾರಂಭಿಸಬೇಕಾಗುತ್ತದೆ ಎಂದು ಕವಿಯು ವರ್ಣಿಸಿರುತ್ತಾನೆ.

ತದನ್ವಯೇ ಶುದ್ಧಿಮತಿ ಪ್ರಸೂತಃ ಶುದ್ಧಿಮತ್ತರಃ ।
ದಿಲೀಪ ಇತಿ ರಾಜೇನ್ದುರಿನ್ದುಃ ಕ್ಷೀರನಿಧಾವಿವ ॥೧೨॥

ಅನ್ವಯ. [ಶುದ್ಧಿಮತಿ ತದನ್ವಯೇ ಶುದ್ಧಿಮತ್ತರಃ ದಿಲೀಪ ಇತಿ ರಾಜೇಂದುಃ ಕ್ಷೀರನಿಧೌ ಇಂದುರಿವ ಪ್ರಸೂತಃ]

ಅರ್ಥ. ಶುದ್ಧಿಮತಿ-ಶುದ್ಧಿಯುಳ್ಳ ತದನ್ವಯೇ-ಅವನ ವಂಶದಲ್ಲಿ ಶುದ್ಧಿ ಮತ್ತರಃ-ಬಹಳ ಶುದ್ಧಿಯುಳ್ಳ ದಿಲೀಪ ಇತಿ-ದಿಲೀಪನೆಂಬ ರಾಜೇಂದುಃ-(ಇಂದು - ಚಂದ್ರನಂತಿರುವ ರಾಜ-ರಾಜನು) ರಾಜಶ್ರೇಷ್ಠನು ಕ್ಷೀರನಿಧೌ-ಕ್ಷೀರಸಮುದ್ರದಲ್ಲಿ ಇಂದುರಿವ-ಚಂದ್ರನ ಹಾಗೆ ಪ್ರಸೂತಃ-ಹುಟ್ಟಿದವನಾದನು.

ತಾತ್ಪರ್ಯ. ಪರಿಶುದ್ಧವಾದ ಆ ಮನುವಿನ ವಂಶದಲ್ಲಿ ದಿಲೀಪನೆಂಬ ರಾಜಶ್ರೇಷ್ಠನು ಹುಟ್ಟಿದನು; ಅವನು ಅತ್ಯಂತಪರಿಶುದ್ಧನಾಗಿದ್ದದ್ದರಿಂದ ಅವನು

ಹುಟ್ಟಿದ್ದು ಹಾಲ್ಗಡಲಿನಲ್ಲಿ ಚಂದ್ರನು ಹುಟ್ಟಿದಂತೆ ಒಪ್ಪುತ್ತಿತ್ತು.

ವಿಗ್ರಹವಾಕ್ಯಗಳು. ೧ ತಸ್ಯ ಅನ್ವಯಃ-ತದನ್ವಯಃ (ಷ.ತ.); ತಸ್ಮಿನ್ ತದನ್ವಯೇ. ೨ ಶುದ್ಧಿಃ ಅಸ್ಯಾಸ್ತಿ ಇತಿ-ಶುದ್ಧಿಮಾನ್. (ತ.ವೃ.); ತಸ್ಮಿನ್ - ಶುದ್ಧಿಮತಿ. ೩ ಅತಿಶಯೇನ ಶುದ್ಧಿಮಾನ್-ಶುದ್ಧಿಮತ್ತರಃ (ತ.ವೃ.); ೪ ರಾಜಾ ಇನ್ದುರಿವ - ರಾಜೇನ್ದುಃ (ಉ.ಉ.ಕ.) ೫ ಕ್ಷೀರಸ್ಯ ನಿಧಿಃ ಕ್ಷೀರನಿಧಿಃ (ಷ.ತ.); ತಸ್ಮಿನ್- ಕ್ಷೀರನಿಧೌ.

ವ್ಯಾಕರಣ. ೧ ಶುದ್ಧಿಮಾನ್-ಇಲ್ಲಿ 'ಉಳ್ಳ' ಎಂಬರ್ಥದ ಮತುಪ್(=ಮತ್) ಪ್ರತ್ಯಯವು ಬಂದಿರುವದರಿಂದ ಬಲು ಶುದ್ಧವಾದ ಎಂದು ಅರ್ಥಮಾಡಬೇಕು; ೨ ಶುದ್ಧಿಮತ್ತರಃ ಇಲ್ಲಿ ಬಂದಿರುವ ತರಪ್-(ತರ) ಪ್ರತ್ಯಯಕ್ಕೆ ಎರಡರಲ್ಲಿ ಒಂದು ಹೆಚ್ಚು ಒಂದಕ್ಕಿಂತ ಒಂದು ಹೆಚ್ಚು ಎಂಬ ಎರಡರ್ಥವಿರುವದು. ಉದಾ: ಇವರಿಬ್ಬರಲ್ಲಿ ಇವನು ಹೆಚ್ಚು ಹಗುರ ಎಂಬರ್ಥದಲ್ಲಿ 'ಲಘುತರಃ' ಎಂದು ಪ್ರಯೋಗಿಸುವರು; ಉತ್ತರದೇಶದವರು ಪೂರ್ವದೇಶದವರಿಗಿಂತ ಸಮರ್ಥರು ಎಂಬರ್ಥದಲ್ಲಿ 'ಪಟುತರಾ' ಎಂದು ಪ್ರಯೋಗಿಸುವರು. ೩. ರಾಜೇನ್ದುಃ - ಇಲ್ಲಿ ರಾಜನನ್ನು ಚಂದ್ರನಿಗೆ ಹೋಲಿಸಿ ಹೋಲಿಕೆಯ ಧರ್ಮವನ್ನು ಕೊಡದೆ ಇರುವದರಿಂದ ಉಪಮಾನೋತ್ತರಪದಸಮಾಸವಾಗಿದೆ; ಘನಶ್ಯಾಮಃ ಎಂಬ ಹಾಗೆ ಉಪಮಾನಪೂರ್ವಪದವಾಗಲಿಲ್ಲ, ವ್ಯಾಘ್ರ, ಸಿಂಹ, ಪುಂಡರೀಕ, ಕುಂಜರ, ಋಷಭ, ಚಂದ್ರ ಮುಂತಾದ ಮಾತುಗಳನ್ನು ಶ್ರೇಷ್ಠನೆಂಬರ್ಥವನ್ನು ತೋರಿಸುವದಕ್ಕೆ ಸಂಸ್ಕೃತದಲ್ಲಿ ಉಪಮಾನಸಮಾಸದಲ್ಲಿ ಉಪಯೋಗಿಸುವರು. ೪ ಪ್ರಸೂತಃ-ಇದು ಭೂತಕೃದಂತವು; ಆಸೀತ್ ಎಂಬುದನ್ನು ಸೇರಿಸಿಕೊಂಡರೆ ಹಡೆಯಲ್ಪಟ್ಟವನಾದನು, ಹುಟ್ಟಿದನು ಎಂದರ್ಥವಾಗುತ್ತದೆ. ಸಂಸ್ಕೃತದಲ್ಲಿ ಭೂತಕೃದಂತಗಳನ್ನು ಕ್ರಿಯಾಪದಗಳ ಅರ್ಥದಲ್ಲಿ ಉಪಯೋಗಿಸುವದು ಬಹಳ.

ವಿಚಾರ. ಕ್ಷೀರಸಮುದ್ರವೆಂಬುದು ಸಪ್ತಸಮುದ್ರಗಳಲ್ಲಿ ಒಂದು. ದೇವತೆಗಳೂ ಅಸುರರೂ ಅಮೃತಕ್ಕಾಗಿ ಮಂದರಪರ್ವತದಿಂದ ಇದನ್ನು ಕಡೆದಾಗ ಚಂದ್ರನೇ ಮುಂತಾದ ವಸ್ತುಗಳೂ ಹುಟ್ಟಿದವೆಂದು ಪುರಾಣದಲ್ಲಿದೆ. ಹಾಲ್ಗಡಲೆ ಬೆಳ್ಳಗಿರುವದು; ಅದರಲ್ಲಿ ಹುಟ್ಟಿದ ಚಂದ್ರನು ಮತ್ತೂ ಬೆಳ್ಳಗಿರುವನು; ಇದರಂತೆಯೆ ಮೊದಲೆ ಪರಿಶುದ್ಧವಾಗಿದ್ದ ವಂಶದಲ್ಲಿ ಇನ್ನೂ ಪರಿಶುದ್ಧನಾದ ದಿಲೀಪನು ಹುಟ್ಟಿದನೆಂಬುದು ಚಂದ್ರನ ಹೋಲಿಕೆಯ ಸ್ವಾರಸ್ಯವು.

ವ್ಯೂಢೋರಸ್ಕೋ ವೃಷಸ್ಕನ್ಧಃ ಶಾಲಪ್ರಾಂಶುರ್ಮಹಾಭುಜಃ ।
ಆತ್ಮಕರ್ಮಕ್ಷಮಂ ದೇಹಂ ಕ್ಷಾತ್ರೋ ಧರ್ಮ ಇವಾಶ್ರಿತಃ ॥೧೩॥

ಅನ್ವಯ. [ವ್ಯೂಢೋರಸ್ಕಃ ವೃಷಸ್ಕಂಧಃ ಶಾಲಪ್ರಾಂಶುಃ ಮಹಾಭುಜಃ ಆತ್ಮಕರ್ಮಕ್ಷಮಂ ದೇಹಂ ಅಶ್ರಿತಃ ಕ್ಷಾತ್ರಃ ಧರ್ಮ ಇವ (ರಾಜೇಂದುಃ ಪ್ರಸೂತಃ)]

ಅರ್ಥ. ವ್ಯೂಢೋರಸ್ಕಃ - (ವ್ಯೂಢ-ಅಗಲವಾದ ಉರಸ್ಕಃ - ಎದೆಯುಳ್ಳವನೂ) ವಿಶಾಲವಾದ ಎದೆಯುಳ್ಳವನೂ ವೃಷಸ್ಕಂಧಃ -(ವೃಷ-ಎತ್ತಿನ ಸ್ಕಂಧಃ - ಹೆಗಲುಳ್ಳವನೂ) ಎತ್ತಿನ ಹಿರಳಿನ ಹಾಗೆ ಎತ್ತಿದ ಹೆಗಲುಳ್ಳವನೂ ಶಾಲಪ್ರಾಂಶುಃ - ಶಾಲವೃಕ್ಷದಂತೆ ಎತ್ತರವಾಗಿರುವವನೂ ಮಹಾಭುಜಃ-ನೀಳವಾದ ತೋಳುಳ್ಳವನೂ ಆಗಿ ಆತ್ಮಕರ್ಮಕ್ಷಮಂ-(ಆತ್ಮ-ತನ್ನ ಕರ್ಮ-ಕೆಲಸಕ್ಕೆ ಕ್ಷಮಂ-ತಕ್ಕ) ತಾನು ಮಾಡುವ ಕೆಲಸಕ್ಕೆ ಅನುಗುಣವಾದ ದೇಹಂ-ದೇಹವನ್ನು ಆಶ್ರಿತಃ-ಆಶ್ರಯಿಸಿರುವ ಕ್ಷಾತ್ರಃ-ಕ್ಷತ್ರಿಯಸಂಬಂಧವಾದ ಧರ್ಮ ಇವ- ಧರ್ಮವೋ ಎಂಬಂತಿರುವ [ರಾಜೇಂದುಃ-ರಾಜಶ್ರೇಷ್ಠನು ಪ್ರಸೂತಃ-ಹುಟ್ಟಿದನು.]

ವಿಗ್ರಹವಾಕ್ಯಗಳು. ೧ ವ್ಯೂಢಂ ಉರಃ ಯಸ್ಯ ಸಃ - ವ್ಯೂಢೋರಸ್ಕಃ (ಷ. ಬ.). ೨ ವೃಷಸ್ಕಂಧ ಇವ ಸ್ಕಂಧೋ ಯಸ್ಯ ಸಃ-ವೃಷಸ್ಕಂಧಃ (ಉ.ಬ.). ೩ ಶಾಲ ಇವ ಪ್ರಾಂಶುಃ - ಶಾಲಪ್ರಾಂಶುಃ(ಉ.ಪೂ.ಕ.) ೪ ಮಹಾನ್ತೌ ಭುಜೌಯಸ್ಯ ಸಃ-ಮಹಾಭುಜಃ ೫ ಆತ್ಮನಃ ಕರ್ಮ-ಆತ್ಮಕರ್ಮ (ಷ.ತ.); ತಸ್ಮಿನ್-ಆತ್ಮಕರ್ಮಣಿ; ಕ್ಷಮತೇ ಇತಿ ಕ್ಷಮಃ-(ಕೃ.ವೃ.); ಆತ್ಮಕರ್ಮಣಿ ಕ್ಷಮಃ ಆತ್ಮಕರ್ಮಕ್ಷಮಃ (ಸ.ತ.); ತಂ-ಆತ್ಮಕರ್ಮಕ್ಷಮಮ್. ೬ ಕ್ಷತ್ರಸ್ಯಾಯಂ - ಕ್ಷಾತ್ರಃ (ತ.ವೃ.)

ವ್ಯಾಕರಣವಿಶೇಷ. ೧ ಬಹುವ್ರೀಹಿಯ ಕೊನೆಯಲ್ಲಿ ಉರಸ್ ಮುಂತಾದ ಕೆಲವು ಶಬ್ದಗಳಿರುವಾಗ ಕಪ್ (ಕ)ಎಂಬ ತದ್ಧಿತಪ್ರತ್ಯಯವು ಸೇರುವದು. ಉರಃ-ಇದು ಸಕಾರಾನ್ತ ನಪುಂಸಕ. ೨ ವೃಷ್ಕಸ್ಕಂಧಃ-ಇಲ್ಲಿ ಉಪಮಾನಾರ್ಥವಾದ ಸ್ಕಂಧಶಬ್ದ ಲೋಪವಾಗಿದೆ. ೮ನೆಯ ಶ್ಲೋಕದ ಟಿಪ್ಪಣಿಯನ್ನು (ಪು. ೯) ನೋಡಿ. ೩. ಈ ಪದ್ಯದಿಂದ ಹಿಡಿದು ೧೫ನೆಯ ಪದ್ಯವು ಮುಗಿಯುವವರೆಗೆ ಪ್ರಥಮಾಂತಗಳೆಲ್ಲ ದಿಲೀಪನ ವಿಶೇಷಣಗಳು; ೧೨ನೆಯ ಪದ್ಯದಲ್ಲಿರುವ 'ದಿಲೀಪ ಇತಿ ರಾಜೇಂದುಃ ಪ್ರಸೂತಃ' ಎಂಬ ಮಾತುಗಳನ್ನು ಈ ಶ್ಲೋಕಗಳ ಕೊನೆಗೆ ಸೇರಿಸಿ ಅನ್ವಯಮಾಡಿಕೊಳ್ಳಬೇಕು.

ಸರ್ವಾತಿರಿಕ್ತಸಾರೇಣ ಸರ್ವತೇಜೋಽಭಿಭಾವಿನಾ ।
ಸ್ಥಿತಃ ಸರ್ವೋನ್ನತೇನೋರ್ವೀಂ ಕ್ರಾನ್ತ್ವಾ ಮೇರುರಿವಾತ್ಮನಾ ॥೧೪॥

ಅನ್ವಯ. [ಸರ್ವಾತಿರಿಕ್ತಸಾರೇಣ ಸರ್ವತೇಜೋಽಭಿಭಾವಿನಾ ಸರ್ವೋನ್ನತೇನ ಆತ್ಮನಾ ಮೇರುರಿವ ಉರ್ವೀಂ ಸ್ಥಿತಃ (ದಿಲೀಪ ಇತಿ ರಾಜೇನ್ದುಃ ಪ್ರಸೂತಃ)]

ಅರ್ಥ. ಸರ್ವಾತಿರಿಕ್ತಸಾರೇಣ-(ಸರ್ವ-ಎಲ್ಲರಿಗಿಂತಲೂ ಅತಿರಿಕ್ತ-ಹೆಚ್ಚಾದ ಸಾರೇಣ-ಬಲದಿಂದ ಕೂಡಿದ) ಮಿಕ್ಕವರೆಲ್ಲರಿಗಿಂತಲೂ ಹೆಚ್ಚಾದ ಬಲವುಳ್ಳ ಸರ್ವತೇಜೋಽಭಿಭಾವಿನಾ-(ಸರ್ವ-ಎಲ್ಲರ ತೇಜಃ-ಕಾಂತಿಯನ್ನೂ ಅಭಿಭಾವಿನಾ-

ತಿರಸ್ಕರಿಸುವ) ಎಲ್ಲರನ್ನೂ ತನ್ನ ಕಾಂತಿಯಿಂದ ಮಂಕುಗೊಳಿಸುವ ಸರ್ವೋನ್ನತೇನ - (ಸರ್ವ-ಎಲ್ಲರಿಗಿಂತಲೂ ಉನ್ನತೇನ-ಎತ್ತರವಾದ) ಮಿಕ್ಕೆಲ್ಲರಿಗಿಂತಲೂ ಎತ್ತರವಾಗಿರುವ ಆತ್ಮನಾ-ಶರೀರದಿಂದ ಮೇರುರಿವ -ಮೇರುವಿನ ಹಾಗೆ ಉರ್ವೀಂ - ಭೂಮಿಯನ್ನು ಕ್ರಾನ್ತ್ವಾ- ಆಕ್ರಮಿಸಿಕೊಂಡು ಸ್ಥಿತಃ-ಇರುವನಾಗಿಯೂ [ದಿಲೀಪ ಇತಿ ರಾಜೇನ್ದುಃ ಪ್ರಸೂತಃ]

ವಿಗ್ರಹವಾಕ್ಯಗಳು. ೧. ಸರ್ವೇಷಾಂ ಅತಿರಿಕ್ತತರಃ- ಸರ್ವಾತಿರಿಕ್ತಃ (ಷ. ತ.); ಸರ್ವಾತಿರಿಕ್ತಃ ಸಾರಃ ಯಸ್ಯ ಸಃ-ಸರ್ವಾತಿರಿಕ್ತಸಾರಃ (ಷ. ಬ.). ೨ ಸರ್ವೇಷಾಂ ತೇಜಾಂಸಿ-ಸರ್ವತೇಜಾಂಸಿ (ಷ. ತ.); ಸರ್ವತೇಜಾಂಸಿ ಅಭಿಭವತೀತಿ - ಸರ್ವತೇಜೋಽಭಿಭಾವೀ (ಕೃ. ವೃ.) ೩. ಸರ್ವೇಷಾಂ ಉನ್ನತತರಃ-ಸರ್ವೋನ್ನತಃ (ಷ.ತ.); ತೇನ-ಸರ್ವೋನ್ನತೇನ.

ವ್ಯಾಕರಣವಿಶೇಷ. ಗುಣವಾಚಕವು ಉತ್ತರಪದವಾಗಿದ್ದರೆ ಷಷ್ಠಿಯು ॥ ಸಮಾಸವಾಗುವದಿಲ್ಲವೆಂಬುದು ವ್ಯಾಕರಣನಿಯಮ; ಆದರೆ ಸರ್ವಶಬ್ದಕ್ಕೆ ಮುಂದೆ ತರಪ್ (ತರ) ಎಂಬ ಪ್ರತ್ಯಯವಿರುವ ಗುಣವಚನವಿದ್ದರೆ ಸಮಾಸವಾಗಬಹುದು, ಆಗ 'ತರ' ಪ್ರತ್ಯಯವು ಲೋಪವಾಗುತ್ತದೆ. ಪಾ ॥ ೬-೨-೯೩; ವಾ ॥ ಗುಣಾತ್ ತರೇಣ ಸಮಾಸಃ ತರಲೋಪಶ್ಚ.

ವಿಚಾರ. ೧ ಮೇರುವೆಂಬ ಪರ್ವತವು ಭೂಮಧ್ಯದಲ್ಲಿ ಹಾದು ಹೋಗಿರುವದೆಂದೂ ಇದರಲ್ಲಿ ಅತ್ಯಂತ ಉತ್ತಮವಾದ ಸಾರವಸ್ತುಗಳಿವೆ ಎಂದೂ ಇದರ ಕಾಂತಿಯು ಮಿಕ್ಕ ಎಲ್ಲಾ ವಸ್ತುಗಳ ಕಾಂತಿಯನ್ನೂ ಮಂಕುಗೊಳಿಸುವಂತಿದೆಯೆಂದೂ ಇದು ಎಲ್ಲಾ ಪರ್ವತಗಳಿಗಿಂತಲೂ ಎತ್ತರವಾದದ್ದೆಂದೂ ಪುರಾಣಗಳಲ್ಲಿ ವರ್ಣಿಸಿರುತ್ತದೆ. ಕವಿಯು ದಿಲೀಪನ ಶರೀರವನ್ನು ಮೇರುವಿಗೆ ಹೋಲಿಸಿ ಈ ವಿಶೇಷಣಗಳನ್ನೆಲ್ಲ ಅದಕ್ಕೂ ಹೊಂದಿಸಿರುತ್ತಾನೆ. ದಿಲೀಪನ ಶರೀರವು ಎಲ್ಲರ ಶರೀರಕ್ಕಿಂತಲೂ ಬಲವಾಗಿಯೂ ಎತ್ತರವಾಗಿಯೂ ತನ್ನ ತೇಜಸ್ಸಿನಿಂದ ಮಿಕ್ಕವರೆಲ್ಲರನ್ನೂ ಮಂಕುಗೊಳಿಸುವದಾಗಿಯೂ ಇತ್ತು; ಈ ಶರೀರದ ಸಹಾಯದಿಂದ ಅವನು ಭೂಮಿಯನ್ನೆಲ್ಲ ಗೆದ್ದಿದ್ದನು. ೨ ರಾಜನು ಅಷ್ಟದಿಕ್ಪಾಲಕರ ಅಂಶದಿಂದ ನಿರ್ಮಿತನಾಗಿರುವದರಿಂದ ಅವನ ಕಾಂತಿಯು ಎಲ್ಲರನ್ನೂ ಮಂಕುಗೊಳಿಸುವದೆಂದು ಮನುಸ್ಮೃತಿಯಲ್ಲಿ ಹೇಳಿರುತ್ತದೆ.

ಆಕಾರಸದೃಶಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ।
ಆಗಮೈಃ ಸದೃಶಾರಮ್ಭ ಆರಮ್ಭಸದೃಶೋದಯಃ ॥೧೫॥

ಅನ್ವಯ. [ಆಕಾರಸದೃಶಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ಆಗಮೈಃ ಸದೃ

ಶಾರಮ್ಭಃ ಆರಮ್ಭಸದೃಶೋದಯಃ (ದಿಲೀಪ ಇತಿ ರಾಜೇನ್ದುಃ ಪ್ರಸೂತಃ)]

ಅರ್ಥ. ಆಕಾರಸದೃಶಪ್ರಜ್ಞಃ-(ಆಕಾರ-ರೂಪಕ್ಕೆ ಸದೃಶ-ಸರಿಹೋಲುವ ಪ್ರಜ್ಞಃ- ಜ್ಞಾನವುಳ್ಳ) ಶರೀರದ ಆಕಾರಕ್ಕೆ ತಕ್ಕ ಜ್ಞಾನವುಳ್ಳವನಾಗಿಯೂ ಪ್ರಜ್ಞಯಾ - ಜ್ಞಾನಕ್ಕೆ, ಸದೃಶಾಗಮಃ-(ಸದೃಶ-ಸಮವಾದ ಆಗಮಃ-ಶಾಸ್ತ್ರಾಭ್ಯಾಸವುಳ್ಳವನಾಗಿಯೂ) ತಕ್ಕಂತೆ ಶಾಸ್ತ್ರಗಳನ್ನು ಕಲಿತವನಾಗಿಯೂ ಆಗಮೈಃ-ಶಾಸ್ತ್ರಗಳಿಗೆ ಸದೃಶಾರಮ್ಭಃ-(ಸದೃಶ- ಸಮವಾದ ಆರಂಭಃ- ಕರ್ಮವುಳ್ಳ) ಶಾಸ್ತ್ರಾನುಸಾರವಾಗಿ ಕರ್ಮಗಳನ್ನು ಮಾಡುವವನಾಗಿಯೂ ಆರಮ್ಭಸದೃಶೋದಯಃ-(ಆರಮ್ಭ-ಕರ್ಮಗಳಿಗೆ ಸದೃಶ-ಸಮವಾದ ಉದಯಃ-ಫಲವುಳ್ಳವನಾಗಿಯೂ) ಆಯಾ ಕಾರ್ಯದಿಂದ ತಕ್ಕ ಫಲವನ್ನು ಪಡೆಯುವವನಾಗಿಯೂ ಇರುವ [ದಿಲೀಪ ಇತಿ ರಾಜೇನ್ದುಃ ಪ್ರಸೂತಃ]

ತಾತ್ಪರ್ಯ. ಆ ರಾಜನು ನೋಡುವದಕ್ಕೆ ಸರ್ವಲಕ್ಷಣಗಳಿಂದ ಕೂಡಿದ ಶರೀರವುಳ್ಳವನಾಗಿದ್ದನಷ್ಟೆ; ಅದಕ್ಕೆ ಅನುಗುಣವಾದ ತಿಳಿವಳಿಕೆಯೂ ಅವನಿಗಿತ್ತು. ಆತನು ತಿಳಿವಳಿಕೆಗೆ ತಕ್ಕಂತೆ ಶಾಸ್ತ್ರಗಳನ್ನೂ ಅಭ್ಯಾಸಮಾಡಿ ಶಾಸ್ತ್ರೋಕ್ತವಾದ ರೀತಿಯಿಂದಲೆ ನಡೆಯುತ್ತಾ ಇದ್ದದ್ದರಿಂದ ಅವನು ಮಾಡಿದ ಕಾರ್ಯವೆಲ್ಲ ಕೈಗೂಡುತ್ತಿತ್ತು.

ವಿಗ್ರಹವಾಕ್ಯಗಳು. ಆಕಾರೇಣ ಸದೃಶೀ-ಆಕಾರಸದೃಶೀ (ತೃ.ತ.); ಆಕಾರಸದೃಶೀ ಪ್ರಜ್ಞಾ ಯಸ್ಯ ಸಃ- ಆಕಾರಸದೃಶಪ್ರಜ್ಞಃ - (ಷ.ಬ.). ೨ ಸದೃಶಃ ಅಗಮಃ ಯಸ್ಯ ಸಃ-ಸದೃಶಾಗಮಃ (ಷ.ಬ.). ೩ ಸದೃಶಃ ಅರಮ್ಭಃ ಯಸ್ಯ ಸಃ - ಸದೃಶಾರಮ್ಭಃ (ಷ.ಬ.). ೪ ಆರಮ್ಭೇಣ ಸದೃಶಃ-ಆರಮ್ಭಸದೃಶಃ (ತೃ.ತ.); ಆರಮ್ಭಸದೃಶಃ ಉದಯಃ ಯಸ್ಯ ಸಃ-ಆರಮ್ಭಸದೃಶೋದಯಃ (ಷ.ಬ.).

ವ್ಯಾಕರಣವಿಶೇಷ. ೧ ಆಕಾರಸದೃಶಪ್ರಜ್ಞಃ- ಇಲ್ಲಿ ಸದೃಶಶಬ್ದವು ಪ್ರಜ್ಞಾಶಬ್ದಕ್ಕೆ ವಿಶೇಷಣವಾಗಿರುವದರಿಂದ ಸ್ತ್ರೀಲಿಂಗವಾಗಿದೆ. ಸಮಾನಾಧಿಕಾರಣಬಹುವ್ರೀಹಿಸಮಾಸದಲ್ಲಿ ಪುಲ್ಲಿಂಗಶಬ್ದದಿಂದ ಬಂದಿರುವ ಆಕಾರಾನ್ತ ಈಕಾರಾನ್ತ ಸ್ತ್ರೀಲಿಂಗಶಬ್ದಗಳು ಪೂರ್ವಪದವಾಗಿರುವಾಗ ಪುಲ್ಲಿಂಗರೂಪವನ್ನೆ ಹೊಂದುವವು. ಆದ್ದರಿಂದ 'ಸದೃಶೀ ಪ್ರಜ್ಞಃ' ಎಂದಾಗುವದಿಲ್ಲ 'ಸದೃಶಪ್ರಜ್ಞಃ' ಎಂದೇ ಆಗುತ್ತದೆ. ೨ ಇದಕ್ಕೆ ಸಮವೆಂದು ಹೇಳುವಾಗ ಸದೃಶ, ತುಲ್ಯ ಮುಂತಾದ ಶಬ್ದಗಳ ಯೋಗವಿರುವ ಶಬ್ದಕ್ಕೆ ತೃತೀಯೆಯನ್ನುಪಯೋಗಿಸುವರು.

ಭೀಮಕಾನ್ತೈರ್ನೃಪಗುಣೈಃ ಸ ಬಭೂವೋಪಜೀವಿನಾಮ್ ।
ಅಧೃಷ್ಯಶ್ಚಾಭಿಗಮ್ಯಶ್ಚ ಯಾದೋರತ್ನೈರಿವಾರ್ಣವಃ ॥೧೬॥

ಅನ್ವಯ. [ಭೀಮಕಾನ್ತೈಃ ನೃಪಗುಣೈಃ ಸಃ ಉಪಜೀವಿನಾಂ ಯಾದೋರತ್ನೈಃ ಅರ್ಣವ ಇವ ಅಧೃಷ್ಯಶ್ಚ ಅಭಿಗಮ್ಯಶ್ಚ ಬಭೂವ (ಆಸೀತ್)]

ಅರ್ಥ. ಭೀಮಕಾನ್ತೈಃ-ಭಯಂಕರವಾಗಿಯೂ ಮನೋಹರವಾಗಿಯೂ ಇರುವ ನೃಪಗುಣೈಃ-ರಾಜಗುಣಗಳಿಂದ ಸಃ-ಆತನು ಉಪಜೀವಿನಾಂ-ಆಶ್ರಿತರಿಗೆ ಯಾದೋರತ್ನೈಃ -ಜಲಚರಗಳಿಂದಲೂ ರತ್ನಗಳಿಂದಲೂ ಅರ್ಣವ ಇವ-ಸಮುದ್ರವು ಹೇಗೋ ಹಾಗೆ ಅಧೃಷ್ಯಶ್ಚ-ಮೇಲೆ ಬೀಳುವದಕ್ಕೆ ಆಗದವನೂ ಅಭಿಗಮ್ಯಶ್ಚ-ಆಶ್ರಯಿಸಲು ಯೋಗ್ಯನಾದವನೂ ಬಭೂವ (ಆಸೀತ್)- ಆಗಿದ್ದನು.

ತಾತ್ಪರ್ಯ. ಸಮುದ್ರದಲ್ಲಿ ಮೊಸಳೆಯೆ ಮುಂತಾದ ಕ್ರೂರಜಲಜಂತುಗಳಿರುವದರಿಂದ ಅದನ್ನು ಕಂಡರೆ ಹೆದರಿಕೆಯುಂಟಾಗುವದು; ಅದರಲ್ಲಿ ರತ್ನಗಳು ಇರುವದರಿಂದ ಹತ್ತಿರಕ್ಕೆ ಹೋಗೋಣವೆಂಬ ಆಸೆಯೂ ಹುಟ್ಟುವದು. ದಿಲೀಪ ರಾಜನಲ್ಲಿಯೂ ಹೀಗೆಯೆ ಹೆದರಿಸುವ ಗುಣಗಳೂ ಮನಸ್ಸನ್ನೆಳೆಯುವ ಒಳ್ಳೆಯ ಗುಣಗಳೂ ಇದ್ದದ್ದರಿಂದ ಜನರಿಗೆ ಅವನನ್ನು ಆಶ್ರಯಿಸಬೇಕೆಂಬ ತವಕವೂ ಹೆಚ್ಚು ಸಲುಗೆಯನ್ನು ತೆಗೆದುಕೊಂಡರೆ ಏನಾದೀತೊ ಎಂಬ ಅಂಜಿಕೆಯೂ ಉಂಟಾಗುತ್ತಿದ್ದವು.

ವಿಗ್ರಹವಾಕ್ಯಗಳು. ೧ ಭೀಮಾಶ್ಚ ಕಾನ್ತಾಶ್ಚ-ಭೀಮಕಾನ್ತಾಃ (ದ್ವ.); ತೈಃ - ಭೀಮಕಾನ್ತೈಃ. ೨ ನೃಪಸ್ಯಗುಣಾಃ-ನೃಪಗುಣಾಃ (ಷ.ತ.) ೩ ಉಪಜೀವನ್ತೀತಿ - ಉಪಜೀವಿನಃ (ಕೃ.ವ.); ತೇಷಾಂ-ಉಪಜೀವಿನಾಮ್. ೪ ಧರ್ಷಯಿತುಂ ಶಕ್ಯಃ - ಧೃಷ್ಯಃ (ಕೃ.ವೃ.); ನ ಧೃಷ್ಯಃ-ಅಧೃಷ್ಯಃ (ನ.ತ.). ೫ ಅಭಿಗನ್ತುಂ ಯೋಗ್ಯಃ ಅಭಿಗಮ್ಯಃ (ಕೃ.ವೃ.).

ವ್ಯಾಕರಣವಿಶೇಷ. ೧. ಭೀಮಾಶ್ಚ ತೇ ಕಾನ್ತಾಶ್ಚ- ಎಂದು ಬಿಡಿಸಕೂಡದು; ಏಕೆಂದರೆ ಭಯಂಕರವಾದ ಗುಣಗಳು ಬೇರೆ, ಮನೋಹರವಾದ ಗುಣಗಳು ಬೇರೆ.

ವಿಚಾರ. ರಾಜನು ತೀರ ಮೃದುವಾಗಿದ್ದರೆ ಜನರು ಸಲುಗೆಯನ್ನು ತೆಗೆದುಕೊಂಡು ರಾಜಕಾರ್ಯವನ್ನು ಹಾಳುಮಾಡುವರು; ಆದ್ದರಿಂದ ಭೀತಿಯನ್ನು ಹುಟ್ಟಿಸುವ ಗುಣಗಳು ಅವನಲ್ಲಿರಬೇಕು. ಇವಕ್ಕೆ ಅಧೃಷ್ಯಗುಣಗಳೆಂದು ಹೆಸರು. ರಾಜನು ತೀರ ಭಯಂಕರನಾಗಿದ್ದರೆ ಜನರು ಅವನ ಹತ್ತಿರಕ್ಕೆ ಬರಲಾರದೆ ಹೋಗುವರು; ಆದ್ದರಿಂದ ಅವನಲ್ಲಿ ಮನೋಹರವಾದ ಗುಣಗಳೂ ಇರಬೇಕು. ಇವು ಅಭಿಗಮ್ಯಗುಣಗಳು. ಈ ಗುಣಗಳನ್ನು ಕಾಮಂದಕನೀತಿಶಾಸ್ತ್ರದಲ್ಲಿ ವರ್ಣಿಸಿರುವದು ಹೇಗೆಂದರೆ:- ಅಧೃಷ್ಯಗುಣಗಳು:

ತೇಜೋ ಬಲಂ ಸತ್ತ್ವವತ್ತಾ ಪ್ರಭಾವಃ ಪ್ರಾಪ್ತಕಾಲತಾ ।
ಅಧೃಷ್ಯಸ್ಯ ಗುಣಾನೇತಾನ್ನೃಪಸ್ಯ ಮುನಯೋ ವಿದುಃ ॥

ಅಭಿಗಮ್ಯಗುಣಗಳು:

ಕುಲಂ ಶೀಲಂ ದಯಾ ದಾನಂ ಧರ್ಮಃ ಸತ್ಯಂ ಕೃತಜ್ಞತಾ ।
ಸೂಕ್ಷ್ಮದರ್ಶಿತ್ವಮುತ್ಸಾಹಃ ಸಚ್ಚರ್ಯಂ ಸ್ಥೂಲಲಕ್ಷತಾ ।
ವಿನೀತತಾ ಧಾರ್ಮಿಕತಾ ಗುಣಾಶ್ಚೈವಾಭಿಗಾಮಿಕಾಃ ॥

ರೇಖಾಮಾತ್ರಮಪಿ ಕ್ಷುಣ್ಣಾದಾ ಮನೋರ್ವರ್ತ್ಮನಃ ಪರಮ್ ।
ನ ವ್ಯತೀಯುಃ ಪ್ರಜಾಸ್ತಸ್ಯ ನಿಯನ್ತುರ್ನೇಮಿವೃತ್ತಯಃ ॥೧೭॥

ಅನ್ವಯ. [ನಿಯನ್ತುಃ ತಸ್ಯ ನೇಮಿವೃತ್ತಯಃ ಪ್ರಜಾಃ ಆ ಮನೋಃ ಕ್ಷುಣ್ಣಾತ್ ವರ್ತ್ಮನಃ ಪರಂ ರೇಖಾಮಾತ್ರಮಪಿ ನ ವ್ಯತೀಯುಃ]

ಅರ್ಥ. ನಿಯನ್ತುಃ-ಶಿಕ್ಷಕನಾದ ತಸ್ಯ-ಆತನ ನೇಮಿವೃತ್ತಯಃ-(ನೇಮಿ - ಹಳಿಯ ವೃತ್ತಯಃ- ವ್ಯಾಪಾರವುಳ್ಳ) ಚಕ್ರದ ಹಳಿಯಂತೆ ನಡೆಯುವ ಪ್ರಜಾಃ-ಪ್ರಜೆಗಳು ಆ ಮನೋಃ-ಮನುವಿನಿಂದ ಮೊದಲಾಗಿ ಕ್ಷುಣ್ಣಾತ್-ಅಭ್ಯಾಸವಾಗಿರುವ ವರ್ತ್ಮನಃ- ದಾರಿಗಿಂತ ಪರಂ-ಹೆಚ್ಚಾಗಿ ರೇಖಾಮಾತ್ರಮಪಿ- ಒಂದು ಗೆರೆಯಷ್ಟಾದರೂ ನ ವ್ಯತೀಯುಃ- ಮೀರಿ ಹೋಗಲಿಲ್ಲ.

ತಾತ್ಪರ್ಯ. ಆಳುತ್ತಿರುವ ಆ ರಾಜನ ಪ್ರಜೆಗಳು ಮನುವಿನ ಕಾಲದಿಂದ ನಡೆದು ಬಂದಿದ್ದ ಆಚಾರಪದ್ಧತಿಯನ್ನು ಒಂದಿಷ್ಟೂ ಮೀರದೆ ಇರುತ್ತಿದ್ದರು.

ವಿಗ್ರಹವಾಕ್ಯಗಳು. ೧ ರೇಖಾಪ್ರಮಾಣಂ ಅಸ್ಯ - ರೇಖಾಮಾತ್ರಮ್ (ತ. ವೃ.). ನೇಮೀನಾಂ ವೃತ್ತಿಃ-ನೇಮಿವೃತ್ತಿಃ (ಷ. ತ.); ನೇಮಿವೃತ್ತಿರಿವ ವೃತ್ತಿಃ ಯಾಸಾಂ ತಾಃ-ನೇಮಿವೃತ್ತಯಃ (ಷ. ಬ.).

ವ್ಯಾಕರಣವಿಶೇಷ. ೧ ರೇಖಾಮಾತ್ರಮ್-ಎಂಬಲ್ಲಿ ಪ್ರಮಾಣವೆಂಬ (ಅಳತೆಯೆಂಬ) ಅರ್ಥದಲ್ಲಿ ಮಾತ್ರಚ್ (ಮಾತ್ರ) ಪ್ರತ್ಯಯವು ಬಂದಿದೆ. ಗೆರೆಯ ಅಳತೆಯಷ್ಟೂ ಅತ್ತಿತ್ತ ಹೋಗಲಿಲ್ಲ ಎಂಬ ಅರ್ಥವು ಇದರಿಂದ ಹೊರಡುತ್ತದೆ. ೨ ಆ ಮನೋಃ-ಇದು ಎರಡು ಪದ; ಇಲ್ಲಿ 'ಮನೋಃ' ಪಂಚಮಿ; ಅಭಿವಿಧಿಯೆಂಬ ಅರ್ಥದಲ್ಲಿ 'ಆ' ಬಂದಿದೆ. ೫ನೆಯ ಶ್ಲೋಕದ ಟಿಪ್ಪಣಿಯನ್ನು (ಪು.೬) ನೋಡಿ. ೩ ನೇಮಿವೃತ್ತಯಃ-ಎಂಬ ಬಹುವ್ರೀಹಿಯಲ್ಲಿ ಪೂರ್ವಪದದ ವೃತ್ತಿಶಬ್ದಕ್ಕೆ ಲೋಪವಾಗಿದೆ; ೮ನೆಯ ಶ್ಲೋಕದ ೩ನೆಯ ಟಿಪ್ಪಣಿಯನ್ನು (ಪು.೯) ನೋಡಿ. ೪ ವರ್ತ್ಮನಃ-ನಕಾರಾಂತ ನಪುಂಸಕಲಿಂಗ. ೫ ವ್ಯತೀಯುಃ-ಇಣ್ ಗತೌ (ಇ-ಹೋಗು) ಎಂಬ ೨ನೆಯ ಗಣದ ಧಾತುವು ವಿ, ಅತಿ-ಎಂಬ ಉಪಸರ್ಗಗಳಿಗೆ ಸೇರಿದಾಗ ಮೀರು ಎಂಬ ಅರ್ಥವನ್ನು ಕೊಡುತ್ತದೆ; ಇದರ ಲಿಟ್ (ಪರೋಕ್ಷಭೂತ)ಪ. ಪ್ರ. ಬ.

ವಿಚಾರ. ಜಾಣನಾದ ಸಾರಥಿಯು ನಡೆಸುವ ಗಾಡಿಯ ಚಕ್ರದ ಹಳಿಗಳು ಸವೆದ ದಾರಿಯನ್ನು ಬಿಟ್ಟು ಒಂದು ಗೆರೆಯಷ್ಟೂ ಅತ್ತಿತ್ತ ಹೋಗದಿರುವಂತೆ

ದಿಲೀಪನ ಪ್ರಜೆಗಳು ಪೂರ್ವಪದ್ಧತಿಯನ್ನು ಬಿಡದೆ ಇರುತ್ತಿದ್ದರು ಎಂಬುದು ನೇಮಿ ವೃತ್ತಯಃ ಎಂಬ ವಿಶೇಷಣದಿಂದ ತೋರುವದು. ಹಳಿಯ ಪರವಾಗಿ ಅರ್ಥ ಮಾಡುವಾಗ ನಿಯನ್ತುಃ-ಸಾರಥಿಯ ಕ್ಷುಣ್ಣಾತ್-ಸವೆದಿರುವ ವರ್ತ್ಮನಃ-ದಾರಿಯಿಂದ-ಎಂದು ಅರ್ಥ ಮಾಡಿಕೊಳ್ಳಬಹುದು.

ಪ್ರಜಾನಾಮೇವ ಭೂತ್ಯರ್ಥಂ ಸ ತಾಭ್ಯೋ ಬಲಿಮಗ್ರಹೀತ್ ।
ಸಹಸ್ರಗುಣಮುತ್ಸ್ರಷ್ಟುಮಾದತ್ತೇ ಹಿ ರಸಂ ರವಿಃ ॥೧೮॥

ಅನ್ವಯ. [ಸಃ ಪ್ರಜಾನಾಂ ಭೂತ್ಯರ್ಥಮೇವ ತಾಭ್ಯಃ ಬಲಿಂ ಅಗ್ರಹೀತ್ ರವಿಃ ಸಹಸ್ರಗುಣಂ ಉತ್ಸ್ರಷ್ಟುಂ ರಸಂ ಆದತ್ತೇ ಹಿ ?]

ಅರ್ಥ. ಸಃ-ಆತನು ಪ್ರಜಾನಾಂ - ಪ್ರಜೆಗಳ ಭೂತ್ಯರ್ಥಮೇವ-ಅಭಿವೃದ್ಧಿಗಾಗಿಯೇ ತಾಭ್ಯಃ-ಅವರ ಕಡೆಯಿಂದ ಬಲಿಂ - ಕಂದಾಯವನ್ನು ಅಗ್ರಹೀತ್ - ತೆಗೆದುಕೊಳ್ಳುತ್ತಿದ್ದನು. ರವಿಃ-ಸೂರ್ಯನು ಸಹಸ್ರಗುಣಂ-ಸಾವಿರದಷ್ಟಾಗಿ ಉತ್ಸ್ರಷ್ಟುಂ- ಬಿಡುವದಕ್ಕಾಗಿ ರಸಂ—ನೀರನ್ನು ಆದತ್ತೇ ಹಿ-ತೆಗೆದುಕೊಳ್ಳುತ್ತಾನಲ್ಲವೆ?

ತಾತ್ಪರ್ಯ. ಸೂರ್ಯನು ನೀರನ್ನು ಹೀರಿಕೊಂಡು ಆಮೇಲೆ ಅದರ ಸಾವಿರದಷ್ಟು ಮಳೆಯನ್ನು ಕರೆಯುವ ಹಾಗೆ ಆತನು ಪ್ರಜೆಗಳಿಂದ ಸ್ವಲ್ಪ ಕಂದಾಯವನ್ನು ಸ್ವೀಕರಿಸಿ ಅವರಿಗೆ ಬಹುವಾಗಿ ಅನುಕೂಲ್ಯಗಳನ್ನು ಮಾಡಿಕೊಡುತ್ತಿದ್ದನು.

ವಿಗ್ರಹವಾಕ್ಯಗಳು. ೧ ಭೂತ್ಯೈ-ಭೂತ್ಯರ್ಥಂ (ಅ.ಸ.). ೨ ಸಹಸ್ರಂ ಗುಣಾಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ-ಸಹಸ್ರಗುಣಮ್ (ಕ್ರಿ.ವಿ.ಬ).

ವ್ಯಾಕರಣವಿಶೇಷ. ೧ ಭೂತ್ಯರ್ಥಂ-ಇದು ನಿತ್ಯಸಮಾಸ, ಅರ್ಥ ಎಂಬ ಪದವು ಚತುರ್ಥಿಯ ಅರ್ಥದಲ್ಲಿ ಬಂದಿದೆ. ೨ ಅಗ್ರಹೀತ್-ಗ್ರಹ-ಉಪಾದಾನೇ (ಗ್ರಹ್-ತೆಗೆದುಕೊ) ಎಂಬ ೯ನೆಯ ಗಣದ ಧಾತುವಿನ ಲುಙ್ (ಸಾಮಾನ್ಯಭೂತ)ಪ. ಪ್ರ. ಏ. ೩ ಆದತ್ತೇ - ಡುದಾಞ್ದಾನೇ (ದಾ-ಕೊಡು) ಎಂಬ ೩ನೆಯ ಗಣದ ಧಾತುವಿನ ಲಟ್. ಆ.ಪ್ರ.ಏ.; 'ಆ' ಎಂಬ ಉಪಸರ್ಗದಿಂದ ತೆಗೆದುಕೊ ಎಂಬ ಅರ್ಥ ಬಂದಿದೆ. ದಾ. ಧಾತುವು 'ದದಾತಿ', 'ದತ್ತೇ' ಎಂಬ ಎರಡು ಪದಗಳಲ್ಲಿಯೂ ಪ್ರಯೋಗವಾಗುತ್ತದೆ; ಆ ಎಂಬ ಉಪಸರ್ಗವಿದ್ದರೆ ಬಾಯಿತೆರೆ(open) ಎಂಬ ಅರ್ಥವಿದ್ದರೆ ಪರಸ್ಮೈಪದ; ಮಿಕ್ಕ ಕಡೆಯಲ್ಲಿ ಆತ್ಮನೇಪದವೇ ಬರುವದು.

ಸೇನಾ ಪರಿಚ್ಛದಸ್ತಸ್ಯ ದ್ವಯಮೇವಾರ್ಥಸಾಧನಮ್ ।
ಶಾಸ್ತ್ರೇಷ್ವಕುಣ್ಠಿತಾ ಬುದ್ಧಿರ್ಮೌರ್ವೀ ಧನುಷಿ ಚಾತತಾ ॥೧೯॥

ಅನ್ವಯ. [ತಸ್ಯ ಸೇನಾ ಪರಿಚ್ಛದಃ. ಅರ್ಥಸಾಧನಂ ಶಾಸ್ತ್ರೇಷು ಅಕುಣ್ಠಿತಾ

ಬುದ್ಧಿಃ, ಧನುಷಿ ಆತತಾ ಮೌರ್ವೀ ಚ ದ್ವಯಮೇವ]

ಅರ್ಥ. ತಸ್ಯ- ಆತನಿಗೆ ಸೇನಾ-ಸೇನೆಯು ಪರಿಚ್ಛದಃ-ಉಪಕರಣವು. ಅರ್ಥ ಸಾಧನಂ (ಅರ್ಥ-ಪ್ರಯೋಜನಕ್ಕೆ ಸಾಧನಂ - ಸಾಮಗ್ರಿಯು) ಆತನ ಉದ್ದೇಶ ವನ್ನು ನೆರವೇರಿಸಿಕೊಳ್ಳುವದಕ್ಕೆ ಉಪಾಯವೋ ಎಂದರೆ ಶಾಸ್ತ್ರೇಷು-ಶಾಸ್ತ್ರಗಳಲ್ಲಿ ಅಕುಣ್ಠಿತಾ-ತಡೆಯಿಲ್ಲದ ಬುದ್ಧಿಃ-ಬುದ್ಧಿಯು ಧನುಷಿ-ಬಿಲ್ಲಿನಲ್ಲಿ ಆತತಾ - ವಿಸ್ತರಿ ಸಲ್ಪಟ್ಟ ಮೌರ್ವೀ ಚ - ಹೆದೆಯೂ ದ್ವಯಮೇವ-ಇವೆರಡೆ.

ತಾತ್ಪರ್ಯ. ಆ ರಾಜನಿಗೆ ಸೇನೆಯೆಂಬುದು ಛತ್ರಚಾಮರಾದಿಗಳಂತೆ ಬಿರುದುಗಳಾಗಿರುವ ಉಪಕರಣಮಾತ್ರವಾಗಿತ್ತೇ ಹೊರತು ಅದರಿಂದ ಅವನು ಸಾಧಿಸಿಕೊಳ್ಳಬೇಕಾದದ್ದೇನೂ ಇರಲಿಲ್ಲ. ಆತನು ತನ್ನ ಉದ್ದೇಶವನ್ನು ನೆರವೇರಿಸಿ ಕೊಳ್ಳುವುದಕ್ಕೆ ಶಾಸ್ತ್ರದಲ್ಲಿ ತನಗಿದ್ದ ವಿಶೇಷಜ್ಞಾನ, ಬಿಲ್ಲಿಗೇರಿಸಿದ ಹೆದೆ - ಇವೆರ ಡನ್ನೆ ಉಪಯೋಗಿಸುತ್ತಿದ್ದನು.

ವಿಗ್ರಹವಾಕ್ಯಗಳು. ೧ ಪರಿಚ್ಛಾದ್ಯತೇಽನೇನ ಇತಿ-ಪರಿಚ್ಛದಃ (ಕೃ.ವೃ.). ೨ ದ್ವೌ ಅವಯವೌ ಅಸ್ಯ ಇತಿ-ದ್ವಯಮ್ (ತ.ವೃ.). ೩ ಅರ್ಥಸ್ಯ ಸಾಧನಂ - ಅರ್ಥಸಾಧನಮ್ (ಷ.ತ.). ೪ ನ ಕುಣ್ಠಿತಾ-ಅಕುಣ್ಠಿತಾ (ನ.ತ.).

ವ್ಯಾಕರಣವಿಶೇಷ. ಧನುಷಿ-ಸಕಾರಾಂತ ನಪುಂಸಕಲಿಂಗ

ವಿಚಾರ. ಆತನು ಬುದ್ಧಿಶೌರ್ಯಗಳಿಂದ ಕೂಡಿದ್ದದ್ದರಿಂದ ಮತ್ತೊಂದು ಸಹಾ ಯವೂ ಅವನಿಗೆ ಬೇಕಿರಲಿಲ್ಲವೆಂದು ಭಾವಾರ್ಥವು.

ತಸ್ಯ ಸಂವೃತಮನ್ತ್ರಸ್ಯ ಗೂಢಾಕಾರೇಙ್ಗಿತಸ್ಯ ಚ ।
ಫಲಾನುಮೇಯಾಃ ಪ್ರಾರಮ್ಭಾಃ ಸಂಸ್ಕಾರಾಃ ಪ್ರಾಕ್ತನಾ ಇವ ॥೨೦॥

ಅನ್ವಯ. [ಸಂವೃತಮನ್ತ್ರಸ್ಯ ಗೂಢಾಕಾರೇಙ್ಗಿತಸ್ಯಚ ತಸ್ಯ ಪ್ರಾರಮ್ಭಾಃ ಪ್ರಾಕ್ತನಾಃ ಸಂಸ್ಕಾರಾ ಇವ ಫಲಾನುಮೇಯಾಃ (ಆಸನ್)]

ಅರ್ಥ. ಸಂವೃತಮನ್ತ್ರಸ್ಯ - (ಸಂವೃತ - ಬಚ್ಚಿಟ್ಟ ಮನ್ತ್ರಸ್ಯ - ಅಲೋಚನೆ ಯುಳ್ಳ) ಗುಟ್ಟಾಗಿ ಮನ್ತ್ರಾಲೋಚನೆಮಾಡುತ್ತಿದ್ದ ಗೂಢಾಕಾರೇಙ್ಗಿತಸ್ಯಚ-(ಗೂಢ - ಗುಟ್ಟಾದ ಆಕಾರ-ಹೊರಗಿನ ಚೇಷ್ಟೆ, ಇಙ್ಗಿತಸ್ಯಚ- ಮನಸ್ಸಿನಭಾವ ಇವುಗಳುಳ್ಳ) ಮತ್ತು ಹೊರಗಿನ ಮುಖಭಾವವನ್ನೂ ಒಳಗಿನ ಮನಸ್ಸಿನ ಭಾವವನ್ನೂ ಗೂಢ ವಾಗಿಟ್ಟುಕೊಂಡಿದ್ದ ತಸ್ಯ-ಆತನ ಪ್ರಾರಮ್ಭಾಃ - ಕೆಲಸಗಳು ಪ್ರಾಕ್ತನಾಃ-ಪೂರ್ವ ಜನ್ಮದ ಸಂಸ್ಕಾರಾ ಇವ -ವಾಸನೆಗಳ ಹಾಗೆ ಫಲಾನುಮೇಯಾಃ-(ಫಲ-ಫಲದಿಂದ ಅನುಮೇಯಾಃ - ಊಹಿಸಲು ಯೋಗ್ಯಗಳಾಗಿ)+ಆಸನ್-ಇದ್ದವು.

ತಾತ್ಪರ್ಯ. ಫಲವನ್ನು ಕೊಟ್ಟ ಮೇಲೆಯೇ ಗೊತ್ತಾಗುವ ಪೂರ್ವಜನ್ಮದ ವಾಸನೆಗಳ, ಹಾಗೆ ಆತನ ಸಾಮದಾನಾದಿಗಳು ತಮ್ಮ ಫಲದಿಂದಲೆ ಗೊತ್ತಾಗುತ್ತಿದ್ದವೇ ಹೊರತು ಮೊದಲು ಗೊತ್ತಾಗುತ್ತಿರಲಿಲ್ಲ; ಏಕೆಂದರೆ ಆತನು ಮುಖಭಾವದಿಂದಲೇ ಆಗಲಿ ಚಿತ್ತಚಾಂಚಲ್ಯದಿಂದಲೇ ಆಗಲಿ ತನ್ನ ರಹಸ್ಯವಾದ ಮಂತ್ರಾಲೋಚನೆಯನ್ನು ಮತ್ತೊಬ್ಬರಿಗೆ ತಿಳಿಯಗೊಡುತ್ತಿರಲಿಲ್ಲ.

ವಿಗ್ರಹವಾಕ್ಯಗಳು. ೧ ಸಂವೃತಃ ಮನ್ತ್ರಃ ಯಸ್ಯ ಸಃ- ಸಂವೃತಮನ್ತ್ರಃ (ಷ.ಬ.); ತಸ್ಯ-ಸಂವೃತಮನ್ತ್ರಸ್ಯ. ೨ ಆಕಾರಶ್ಚ ಇಙ್ಗಿತಂ ಚ-ಆಕಾರೇಙ್ಗಿತೇ (ದ್ವ.); ಗೂಢೇ ಆಕಾರೇಙ್ಗಿತೇ ಯಸ್ಯ ಸಃ-ಗೂಢಾಕಾರೇಙ್ಗಿತಃ (ಷ.ಬ.); ತಸ್ಯ ಗೂಢಾಕಾರೇಙ್ಗಿತಸ್ಯ. ೩ ಅನುಮಾತುಂ ಯೋಗ್ಯಾಃ-ಅನುಮೇಯಾಃ (ಕೃ.ವೃ.); ಫಲೇನ ಅನುಮೇಯಾಃ-ಫಲಾನುಮೇಯಾಃ (ತೃ.ತ.). ೪ ಪ್ರಾರಭ್ಯನ್ತ ಇತಿ - ಪ್ರಾರಮ್ಭಾಃ (ಕೃ.ವೃ.). ೫ ಪ್ರಾಕ್ ಭವಾಃ-ಪ್ರಾಕ್ತನಾಃ (ತ.ವೃ)

ವ್ಯಾಕರಣವಿಶೇಷ. ೧ ಪ್ರಾಕ್ತನಾಃ- ಇಲ್ಲಿ ಪ್ರಾಕ್ ಎಂಬುದು ಕಾಲವಾಚಕಾವ್ಯಯವು. ಇದಕ್ಕೆ ಪೂರ್ವಜನ್ಮವೆಂಬ ಅರ್ಥವು. 'ಆಗ ಇರುವ' ಎಂಬ ಅರ್ಥದಲ್ಲಿ ಕಾಲವಾಚಕಗಳಾದ ಅವ್ಯಯಗಳ ಮೇಲೆ 'ತನ' ಎಂಬ ಪ್ರತ್ಯಯವು ಬರುವದು.

ವಿಚಾರ. ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳು ತಮ್ಮ ಸಂಸ್ಕಾರಗಳನ್ನು ಚಿತ್ತದಲ್ಲಿ ಬಿಟ್ಟಿರುವವೆಂದೂ ಈ ಸಂಸ್ಕಾರಗಳು ಸಂದರ್ಭಾನುಸಾರವಾಗಿ ವ್ಯಕ್ತವಾಗಿ ಫಲವನ್ನು ಕೊಡುವವೆಂದೂ ಯೋಗಶಾಸ್ತ್ರದಲ್ಲಿ ಹೇಳಿದೆ.

ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ ।
ಅಗೃಧ್ನುರಾದದೇ ಸೋಽರ್ಥಮಸಕ್ತಃ ಸುಖಮನ್ವಭೂತ್ ॥೨೧॥

ಅನ್ವಯ. [ಸಃ ಅತ್ರಸ್ತಃ ಆತ್ಮಾನಂ ಜುಗೋಪ. ಅನಾತುರಃ ಧರ್ಮಂ ಭೇಜೇ. ಅಗೃಧ್ನುಃ ಅರ್ಥಂ ಆದದೇ. ಅಸಕ್ತಃ ಸುಖಂ ಅನ್ವಭೂತ್.]

ಅರ್ಥ. ಸಃ - ಅವನು ಅತ್ರಸ್ತಃ-ಹೆದರದೆ ಆತ್ಮಾನಂ-ಶರೀರವನ್ನು ಜುಗೋಪ - ಕಾಪಾಡಿಕೊಳ್ಳುತ್ತಿದ್ದನು. ಅನಾತುರಃ - ರೋಗವಿಲ್ಲದವನಾಗಿ ಧರ್ಮಂ-ಧರ್ಮವನ್ನು ಭೇಜೇ-ಸೇವಿಸುತ್ತಿದ್ದನು. ಅಗೃಧ್ನುಃ - ಅತ್ಯಾಶೆಯು ಇಲ್ಲದವನಾಗಿ ಅರ್ಥಂ-ಹಣವನ್ನು ಆದದೇ-ತೆಗೆದುಕೊಳ್ಳುತ್ತಿದ್ದನು. ಅಸಕ್ತಃ-ಆಸಕ್ತಿಯಿಲ್ಲದವನಾಗಿ ಸುಖಂ - ಸುಖವನ್ನು ಅನ್ವಭೂತ್-ಅನುಭವಿಸುತ್ತಿದ್ದನು.

ತಾತ್ಪರ್ಯ. ದಿಲೀಪರಾಜನಿಗೆ ಮತ್ತೊಬ್ಬರ ಹೆದರಿಕೆಯಿಂದ ತನ್ನ ಶರೀರವನ್ನು ಕಾಪಾಡಿಕೊಳ್ಳಬೇಕೆಂಬ ಅಗತ್ಯವೇನೂ ಇರಲಿಲ್ಲ. ಅದು ಧರ್ಮಕ್ಕೆ ಸಾಧನ

ವೆಂಬುದರ ಮೇಲೆ ಅವನು ಅದನ್ನು ನೋಡಿಕೊಳ್ಳುತಿದ್ದನು. ರೋಗವೇ ಮೊದ ಲಾದವುಗಳನ್ನು ಹೋಗಲಾಡಿಸುವದಕ್ಕಾಗಿ ಅವನು ಧರ್ಮವನ್ನು ಮಾಡಬೇಕಾಗಿರ ಲಿಲ್ಲ, ಧರ್ಮಕ್ಕಾಗಿಯೆ ಧರ್ಮವನ್ನು ಆಚರಿಸುತ್ತಿದ್ದನು. ಅತ್ಯಾಶೆಯಿಂದಲೇನೂ ಅವನು ದುಡ್ಡನ್ನು ಸಂಪಾದಿಸುತ್ತಿರಲಿಲ್ಲ, ತನ್ನ ಮತ್ತು ತನ್ನ ಪ್ರಜೆಗಳ ಸುಖಕ್ಕೇ ಸಂಪಾದಿಸುತ್ತಿದ್ದನು. ಅವನು ಸುಖವನ್ನು ಹೊಂದುವದಕ್ಕೆ ಹೆಚ್ಚು ಹೆಣಗಾಡುತ್ತಿರ ಲಿಲ್ಲ, ತನ್ನಷ್ಟಕ್ಕೆ ತಾನೆ ಬಂದ ಸುಖವನ್ನೆ ಸ್ವೀಕರಿಸುತ್ತಿದ್ದನು.

ವಿಗ್ರಹವಾಕ್ಯಗಳು. ನ ತ್ರಸ್ತಃ-ಅತ್ರಸ್ತಃ; ನ ಆತುರಃ-ಅನಾತುರಃ; ನ ಗೃಧ್ನುಃ-ಅಗೃಧ್ನುಃ; ನ ಸಕ್ತಃ-ಅಸಕ್ತಃ (ನ. ತ.).

ವ್ಯಾಕರಣವಿಶೇಷ. ೧ ಜುಗೋಪ-ಗುಪೂ ರಕ್ಷಣೇ (ಗುಪ್-ಕಾಪಾಡು)ಎಂಬ ೧ನೆಯ ಗಣದ ಧಾತುವಿನ, ಲಿಟ್, ಪ. ಪ್ರ. ಏ. ೨ ಭೇಜೇ - ಭಜಸೇವಾಯಾಂ (ಭಜ್-ಸೇವಿಸು) ೧ನೆಯ ಗಣ, ಲಿಟ್, ಆ. ಪ್ರ. ಏ. ೩ ಆದದೇ-ಡುದಾಞ್‌ದಾನೇ (ದಾ ಕೊಡು) ೩ನೆಯ ಗಣ, ಲಿಟ್, ಆ. ಪ್ರ. ಏ. 'ಆ'ಎಂಬುದು ಉಪಸರ್ಗ. ೪ ಅನ್ವಭೂತ್-ಭೂಸತ್ತಾಯಂ (ಭೂ-ಇರು) ೧ನೆಯ ಗಣ, ಲುಙ್ (ಸಾಮಾನ್ಯಭೂತ) ಪ. ಪ್ರ. ಏ. ಅನು ಎಂಬ ಉಪಸರ್ಗ ಸೇರಿ ಅನುಭವಿಸು ಎಂದರ್ಥವಾಗಿದೆ.

ಜ್ಞಾನೇ ಮೌನಂ ಕ್ಷಮಾ ಶಕ್ತೌ ತ್ಯಾಗೇ ಶ್ಲಾಘಾವಿಪರ್ಯಯಃ ।
ಗುಣಾ ಗುಣಾನುಬನ್ಧಿತ್ವಾತ್ ತಸ್ಯ ಸಪ್ರಸವಾ ಇವ ॥೨೨॥

ಅನ್ವಯ. [ಜ್ಞಾನೇ ಮೌನಂ; ಶಕ್ತೌ ಕ್ಷಮಾ; ತ್ಯಾಗೇ ಶ್ಲಾಘಾವಿಪರ್ಯಯಃ; ಗುಣಾಃ ಗುಣಾನುಬನ್ಧಿತ್ವಾತ್ ಸಪ್ರಸವಾ ಇವ (ಆಸನ್)]

ಅರ್ಥ. ಜ್ಞಾನೇ-ತಿಳಿವಳಿಕೆಯಿರುವಲ್ಲಿ ಮೌನಂ-ಸುಮ್ಮನಿರುವದು; ಶಕ್ತೌ-ಸಾಮರ್ಥ್ಯವಿರುವಲ್ಲಿ ಕ್ಷಮಾ- ಸಹನೆಯು; ತ್ಯಾಗೇ-ದಾನಮಾಡುವಲ್ಲಿ ಶ್ಲಾಘಾವಿಪ ರ್ಯಯಃ- (ಶ್ಲಾಘಾ-ಹೊಗಳಿಕೊಳ್ಳುವಿಕೆಯ ವಿಪರ್ಯಯಃ-ಅಭಾವವು) ಜಂಭ ಕೊಚ್ಚಿಕೊಳ್ಳದೆ ಇರುವದು; ಗುಣಾಃ-ಗುಣಗಳು ಗುಣಾನುಬನ್ಧಿತ್ವಾತ್-(ಗುಣ-ಗುಣ ಗಳಿಗೆ ಅನುಬನ್ಧಿತ್ವಾತ್-ಸೇರಿಕೊಂಡಿರುವದರಿಂದ) ತಮಗೆ ವಿರುದ್ಧಗುಣಗಳೊ ಡನೆ ಸೇರಿದ್ದದ್ದರಿಂದ ಸಪ್ರಸವಾ ಇವ-ಒಡಹುಟ್ಟಿದವುಗಳೊ ಎಂಬಂತೆ+ಆಸನ್-ಇದ್ದವು.

ತಾತ್ಪರ್ಯ. ಮತ್ತೊಬ್ಬರ ವಿಚಾರವು ತನಗೆ ಗೊತ್ತಿದ್ದರೂ ಅವರಿಗೆ ಸಂಕಟ ಗೊಳಿಸುವ ಮಾತನ್ನು ಆಡದೆ ಇರುವದು, ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಸಾಮರ್ಥ್ಯವಿದ್ದರೂ ಅಪಕಾರವನ್ನು ನುಂಗಿಕೊಳ್ಳುವದು, ದಾನಮಾಡಿದರೂ ತಾನು ಕೊಟ್ಟೆನೆಂದು ಜನರಲ್ಲಿ ಹೇಳಿಕೊಳ್ಳದೆ ಇರುವದು. ಹೀಗೆ ಆತನಲ್ಲಿ ಜ್ಞಾನವೇ

ಮೊದಲಾದ ಗುಣಗಳು ತಮಗೆ ಆಗದ ಗುಣಗಳ ಜೊತೆಯಲ್ಲಿ ಅಣ್ಣತಮ್ಮಂದಿರ ಹಾಗೆ ಬೆರೆತುಕೊಂಡಿದ್ದವು.

ವಿಗ್ರಹವಾಕ್ಯಗಳು. ೧ ಶ್ಲಾಘಾಯಾಃ ವಿಪರ್ಯಯಃ-ಶ್ಲಾಘಾವಿಪರ್ಯಯಃ-(ಷ. ತ). ೨ ಅನುಬಧ್ನನ್ತೀತಿ - ಅನುಬನ್ಧಿನಃ (ಕೃ. ವೃ.). ಗುಣೈಃ ಅನುಬನ್ಧಿನಃ-ಗುಣಾನುಬನ್ಧಿನಃ (ತೃ. ತ.); ಗುಣಾನುಬನ್ಧಿನಾಂ ಭಾವಃ-ಗುಣಾನುಬನ್ಧಿತ್ವಂ (ತ. ವೃ.); ತಸ್ಮಾತ್-ಗುಣಾನುಬನ್ಧಿತ್ವಾತ್. ೩. ಸಮಾನಃ ಪ್ರಸವಃ ಏಷಾಂ ತೇ-ಸಪ್ರ ಸವಾಃ (ಸಹ.ಬ.).

ವ್ಯಾಕರಣವಿಶೇಷ. ವ್ಯಾಖ್ಯಾನದಲ್ಲಿ ಸಹಪ್ರಸವಃ, ಎಂದು ಕೊಟ್ಟಿರುವದು ವಿಗ್ರಹವಲ್ಲ; 'ಸಪ್ರಸವಃ' ಎಂಬುದು ನಿತ್ಯಸಮಾಸ. ಇದಕ್ಕೆ ಒಂದೇ ಹುಟ್ಟಿನ ಸ್ಥಾನವುಳ್ಳ ಎಂಬುದರ್ಥ. 'ಸಮಾನ' ಎಂಬ ಶಬ್ದಕ್ಕೆ 'ಸ' ಎಂಬ ರೂಪವು ಬಂದಿದೆ ಎಂದು ಕೆಲವರು ಹೇಳುತ್ತಾರೆ; ಸಹಶಬ್ದಕ್ಕೆ 'ಸ' ಎಂಬುದು ಬಂದಿದೆಯೆಂದೂ ನಿತ್ಯಸಮಾಸವಾದ್ದರಿಂದ 'ಸಮಾನ'ಎಂಬ ಮಾತಿನಿಂದ ವಿಗ್ರಹವನ್ನು ಹೇಳಬೇಕೆಂದೂ ಕೌಮುದಿಯಲ್ಲಿದೆ.

ಅನಾಕೃಷ್ಟಸ್ಯ ವಿಷಯೈರ್ವಿದ್ಯಾನಾಂ ಪಾರದೃಶ್ವನಃ ।
ತಸ್ಯ ಧರ್ಮರತೇರಾಸೀದ್ವೃದ್ಧತ್ವಂ ಜರಸಾ ವಿನಾ ॥೨೩॥

ಅನ್ವಯ. [ವಿಷಯೈಃ ಅನಾಕೃಷ್ಟಸ್ಯ ವಿದ್ಯಾನಾಂ ಪಾರದೃಶ್ವನಃ ಧರ್ಮರತಿಏಃ ತಸ್ಯ ಜರಸಾ ವಿನಾ ವೃದ್ಧತ್ವಂ ಆಸೀತ್]

ಅರ್ಥ. ವಿಷಯೈಃ-ವಿಷಯಗಳಿಂದ ಅನಾಕೃಷ್ಟಸ್ಯ-ಸೆಳೆಯಲ್ಪಡದೆ ಇರುವವನಾಗಿಯೂ ವಿದ್ಯಾನಾಂ - ವಿದ್ಯೆಗಳ ಪಾರದೃಶ್ವನಃ - ದಡವನ್ನು ಕಂಡಿರುವವನಾಗಿಯೂ ಧರ್ಮರತೇಃ-(ಧರ್ಮ - ಧರ್ಮದಲ್ಲಿ ರತೇಃ - ಪ್ರೀತಿಯುಳ್ಳವನಾಗಿಯೂ) ಧರ್ಮದಲ್ಲಿ ಆಸಕ್ತಿಯುಳ್ಳವನಾಗಿಯೂ ಇದ್ದ ತಸ್ಯ-ಆತನಿಗೆ ಜರಸಾ ವಿನಾ-ವಯಸ್ಸಿನ ಮುಪ್ಪಿಲ್ಲದೆಯೆ ವೃದ್ಧತ್ವಂ-ಮುದುಕತನವು ಆಸೀತ್-ಆಗಿತ್ತು.

ತಾತ್ಪರ್ಯ. ಆತನು ಕೂದಲು ನರೆತ ವಯೋವೃದ್ಧನಲ್ಲವಾದರೂ ವಿಷಯ ವೈರಾಗ್ಯದಿಂದಲೂ ವಿದ್ಯೆಗಳನ್ನು ಮಂದಟ್ಟು ಮಾಡಿಕೊಂಡಿರುವದರಿಂದಲೂ ಧರ್ಮಶ್ರದ್ಧೆಯಿಂದಲೂ ದೊಡ್ಡವನೆನಿಸಿಕೊಂಡಿದ್ದನು.

ವಿಗ್ರಹವಾಕ್ಯಗಳು. ೧ ನ ಆಕೃಷ್ಟಃ-ಅನಾಕೃಷ್ಟಃ (ನ. ತ.); ತಸ್ಯ-ಅನಾ ಕೃಷ್ಟಸ್ಯ ೨ ಪಾರಂ ದೃಷ್ಟವಾನ್ - ಪಾರದೃಶ್ವಾ (ಕೃ. ವೃ.) ೩ ಧರ್ಮೇ ರತಿಃ ಯಸ್ಯ ಸಃ-ಧರ್ಮರತಿಃ (ಷ. ಬ.) ೪ ವೃದ್ಧಸ್ಯ ಭಾವಃ-ವೃದ್ಧತ್ವಂ(ತ. ವೃ.).

ವ್ಯಾಕರಣವಿಶೇಷ. ೧ ಪಾರದೃಶ್ವಾ-ದಡವನ್ನು ಕಂಡವನು ಎಂಬರ್ಥದಲ್ಲಿ ದೃಶ ಧಾತುವಿಗೆ

ಕ್ವನಿಪ್(=ಅನ್) ಪ್ರತ್ಯಯವು ಬಂದಿದೆ; ನಕಾರಾಂತ ಪುಲ್ಲಿಂಗ. ೨ ಜರಸಾ ವಿನಾ-ವಿನಾ ಎಂಬ ಅವ್ಯಯದ ಯೋಗವಿದ್ದರೆ ತೃತೀಯಾ, ಪಂಚಮೀ,ದ್ವಿತಿಯಾ ವಿಭಕ್ತಿಗಳು ಬರುತ್ತವೆ; ಇಲ್ಲಿ ತೃತೀಯೆ ಬಂದಿದೆ. ೩ ಜರಸಾ-ಜರಾಶಬ್ದ, ಆಕಾರಾಂತ ಸ್ತ್ರೀಲಿಂಗ, ತೃತೀಯಾ, ಏಕವಚನ; ಸ್ವರಾದಿವಿಭಕ್ತಿಪ್ರತ್ಯಯವು ಪರವಾಗಿರುವದರಿಂದ 'ಜರಸ್' ಎಂಬ ಆದೇಶವು ವಿಕಲ್ಪದಿಂದ ಬಂದಿದೆ. 'ಜರಯಾ' ಎಂದೂ ಹೇಳಬಹುದು.

ವಿಚಾರ. (೧) "ವೃದ್ಧತ್ವವು ಜ್ಞಾನವೃದ್ಧತ್ವ (ತಿಳಿವಳಿಕೆಯಿಂದ ದೊಡ್ಡವ ನೆನಿಸಿಕೊಳ್ಳುವದು), ವಯೋವೃದ್ಧತ್ವ (ವಯಸ್ಸಿನಿಂದ ದೊಡ್ಡವನಾಗಿರುವದು) ಎಂದು ಎರಡು ಬಗೆ; ದಿಲೀಪನು ಜ್ಞಾನವೃದ್ಧನಾಗಿದ್ದನು" - ಹೀಗೆಂದು ಒಬ್ಬ ವ್ಯಾಖ್ಯಾನಕಾರರು ಬರೆದಿರುತ್ತಾರೆ. ವೈರಾಗ್ಯವೃದ್ಧತ್ವ, ವಿದ್ಯಾವೃದ್ಧತ್ವ, ಶೀಲ ವೃದ್ಧತ್ವ, ವಯೋವೃದ್ಧತ್ವ-ಎಂದು ವೃದ್ಧತ್ವವು ನಾಲ್ಕು ಬಗೆಯೆಂದೂ ಮೊದಲ ನೆಯ ಮೂರೂ ದಿಲೀಪನಲ್ಲಿದ್ದವೆಂಬುದು ಶ್ಲೋಕದ ಅಭಿಪ್ರಾಯವೆಂದೂ ಮತ್ತೆ ಕೆಲವರು ಬರೆದಿದ್ದಾರೆ. (೨) ವಿದ್ಯೆಗಳು ಹದಿನಾಲ್ಕು; ಅವುಗಳನ್ನೆಲ್ಲ ದಿಲೀಪನು ತಿಳಿದಿದ್ದನೆಂಬುದನ್ನು 'ವಿದ್ಯಾನಾಂ' ಎಂಬ ಬಹುವಚನವು ಸೂಚಿಸುವದು.

ಪ್ರಜಾನಾಂ ವಿನಯಾಧಾನಾದ್ರಕ್ಷಣಾದ್ಭರಣಾದಪಿ ।
ಸ ಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ ॥೨೪॥

ಅನ್ವಯ. [ಪ್ರಜಾನಾಂ ವಿನಯಾಧಾನಾತ್ ರಕ್ಷಣಾತ್ ಭರಣಾತ್ ಅಪಿ ಸಃ ಪಿತಾ (ಆಸೀತ್) ತಾಸಾಂ ಪಿತರಃ ಕೇವಲಂ ಜನ್ಮಹೇತವಃ (ಆಸನ್)]

ಅರ್ಥ. ಪ್ರಜಾನಾಂ-ಪ್ರಜೆಗಳ ವಿನಯಾಧಾನಾತ್-(ವಿನಯ-ವಿನಯದ ಆಧಾನಾತ್ - ಉಂಟುಮಾಡುವಿಕೆಯಿಂದಲೂ) ನಡತೆಯನ್ನು ತಿದ್ದುವದರಿಂದಲೂ ರಕ್ಷಣಾತ್ - ಕಾಪಾಡುವದರಿಂದಲೂ ಭರಣಾತ್ ಅಪಿ-ಪೋಷಣೆ ಮಾಡುವದರಿಂ ದಲೂ ಸಃ - ಆತನು ಪಿತಾ-ತಂದೆಯು + ಆಸೀತ್-ಆಗಿದ್ದನು; ತಾಸಾಂ-ಅವರ ಪಿತರಃ - ತಂದೆಗಳು ಕೇವಲಂ-ಬರಿಯದಾಗಿ ಜನ್ಮಹೇತವಃ - ಹುಟ್ಟಿಗೆ ಕಾರಣವಾ ದವರು + ಆಸನ್ - ಆಗಿದ್ದರು.

ತಾತ್ಪರ್ಯ. ಪ್ರಜೆಗಳ ನಡತೆಯನ್ನು ತಿದ್ದುವದು, ಅವರನ್ನು ಆಪತ್ತುಗಳಿಂದ ಪಾರುಮಾಡುವದು, ಅನ್ನಪಾನಾದಿಗಳನ್ನು ಕೊಟ್ಟು ಅವರನ್ನು ಮುಂದಕ್ಕೆ ತರು ವದು- ಹೀಗೆ ಮಾಡುತ್ತಿದ್ದದ್ದರಿಂದ ಆತನೆ ಅವರ ನಿಜವಾದ ತಂದೆಯಾಗಿದ್ದನು; ಅವರ ತಂದೆಗಳೊ ಎಂದರೆ ಅವರ ಹುಟ್ಟಿಗೆ ಮಾತ್ರ ಹೊಣೆಯಾಗಿರುತ್ತಿದ್ದರು.

ವಿಗ್ರಹವಾಕ್ಯಗಳು. ೧ ವಿನಯಸ್ಯ ಆಧಾನಂ-ವಿನಯಾಧಾನಂ (ಷ. ತ.)

ತಸ್ಮಾತ್-ವಿನಯಾಧಾನಾತ್. ೨ ಜನ್ಮನಃ ಹೇತವಃ-ಜನ್ಮಹೇತವಃ (ಷ. ತ)

ವ್ಯಾಕರಣವಿಶೇಷ. ೧ ಇಲ್ಲಿರುವ ಪಂಚಮಿಗಳು ಹೇತ್ವರ್ಥ(reason) ದಲ್ಲಿ ಬಂದಿರುತ್ತವೆ. ೨ 'ಕೇವಲಂ' ಎಂಬುದು ಅವ್ಯಯ.

ಸ್ಥಿತ್ಯೈ ದಣ್ಡಯತೋ ದಣ್ಡ್ಯಾನ್ ಪರಿಣೇತುಃ ಪ್ರಸೂತಯೇ ।
ಅಪ್ಯರ್ಥಕಾಮೌ ತಸ್ಯಾಸ್ತಾಂ ಧರ್ಮ ಏವ ಮನೀಷಿಣಃ ॥೨೫॥

ಅನ್ವಯ. [ದಣ್ಡ್ಯಾನ್ ಸ್ಥಿತ್ಯೈ ದಣ್ಡಯತಃ ಪ್ರಸೂತಯೇ ಪರಿಣೇತುಃ ತಸ್ಯ ಮನೀಷಿಣಃ ಅರ್ಥಕಾಮಾವಪಿ ಧರ್ಮ ಏವ ಆಸ್ತಾಂ ]

ಅರ್ಥ. ದಣ್ಡ್ಯಾನ್-ದಂಡನೆಗೆ ತಕ್ಕವರಾದವರನ್ನು ಸ್ಥಿತ್ಯೈ-ವ್ಯವಸ್ಥೆಗೋಸ್ಕರ ದಣ್ಡಯತಃ - ಶಿಕ್ಷಿಸುವಂಥ ಪ್ರಸೂತಯೇ-ಸಂತಾನಕ್ಕೋಸ್ಕರ ಪರಿಣೇತುಃ - ಮದುವೆಯಾಗುವ ತಸ್ಯ-ಆ ಮನೀಷಿಣಃ-ಜ್ಞಾನಿಯ ಅರ್ಥಕಾಮಾವಪಿ-ಅರ್ಥಕಾಮ ಇವೆರಡೂ ಧರ್ಮ ಏವ ಧರ್ಮವೇ ಆಸ್ತಾಂ-ಆಗಿದ್ದವು.

ತಾತ್ಪರ್ಯ. ಆ ದಿಲೀಪರಾಜನು ಲೋಕದ ಕಟ್ಟುಪಾಡುಗಳು ಸರಿಯಾಗಿರಲೆಂಬ ಉದ್ದೇಶದಿಂದಲೆ ದಂಡನೆಮಾಡುತ್ತಿದ್ದದ್ದರಿಂದಲೂ ವಂಶವು ಬೆಳೆಯಲೆಂಬ ಮನಸ್ಸಿನಿಂದಲೆ ಮದುವೆಯಾಗಿದ್ದದ್ದರಿಂದಲೂ ಅರ್ಥಕ್ಕೆ ಸಾಧನವಾಗಿರುವ ದಂಡವೂ (fines) ಕಾಮಕ್ಕೆ ಸಾಧನವಾಗಿರುವ ಮದುವೆಯೂ ಅವನ ಪಾಲಿಗೆ ಧರ್ಮಕ್ಕೇ ಸಾಧನವಾಗಿದ್ದವು.

ವಿಗ್ರಹವಾಕ್ಯಗಳು. ೧ ದಣ್ಡಂ ಅರ್ಹನ್ತೀತಿ-ದಣ್ಡ್ಯಾಃ (ತ. ವೃ); ತಾನ್ - ದಣ್ಡ್ಯಾನ್. ೨ ದಣ್ಡಯತೀತಿ-ದಣ್ಡಯನ್ (ಕೃ. ವೃ.); ತಸ್ಯ-ದಣ್ಡಯತಃ. ೩ ಪರಿಣಯತಿ ಇತಿ-ಪರಿಣೇತಾ (ಕೃ. ವೃ.); ತಸ್ಯ-ಪರಿಣೇತುಃ. ೪ ಅರ್ಥಶ್ಚ ಕಾಮಶ್ಚ-ಅರ್ಥಕಾಮೌ (ದ್ವ.).

ವ್ಯಾಕರಣವಿಶೇಷ. ೧ ಸ್ಥಿತ್ಯೈ-ಇದು ತಾದರ್ಥ್ಯಚತುರ್ಥಿ. ಇದಕ್ಕೋಸ್ಕರ. ಇದನ್ನು ಸಂಪಾದಿಸುವದಕ್ಕೋಸ್ಕರ-ಎಂಬುದು ಇದರ ಅರ್ಥ; 'ಪ್ರಸೂತಯೇ' ಎಂಬುದೂ ಹೀಗೆಯೆ. ೨ ದಣ್ಡಯತಃ - ತಕಾರಾನ್ತ, ಪುಲ್ಲಿಂಗ. ೩ ಪರಿಣೇತುಃ ಋಕಾರಾಂತ, ಪುಲ್ಲಿಂಗ.

ವಿಚಾರ. ಧರ್ಮ, ಅರ್ಥ, ಕಾಮ- ಇವುಗಳಿಗೆ ತ್ರಿವರ್ಗವೆಂದು ಹೆಸರು. ಇವು ಮೂರೂ ಬೇರೆ ಬೇರೆ ಪುರುಷಾರ್ಥಗಳಾದರೂ ದಿಲೀಪರಾಜನು ಧರ್ಮವನ್ನೆ ಮುಖ್ಯವಾಗೆಣಿಸಿ ಅದಕ್ಕೆ ಅರ್ಥಕಾಮಗಳನ್ನು ಎರಡನೆಯವಾಗಿ ಎಣಿಸಿದ್ದನೆಂದು ಈ ಶ್ಲೋಕದಲ್ಲಿ ವರ್ಣಿಸಿದೆ.

ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಮ್ ।
ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್ ॥೨೬॥

ಅನ್ವಯ. [ಸಃ ಯಜ್ಞಾಯ ಗಾಂ ದುದೋಹ ಮಘವಾ ಸಸ್ಯಾಯ ದಿವಂ (+ದುದೋಹ) ಉಭೌ ಸಮ್ಪದ್ವಿನಿಮಯೇನ ಭುವನದ್ವಯಂ ದಧತುಃ]

ಅರ್ಥ. ಸಃ-ಆತನು ಯಜ್ಞಾಯ-ಯಜ್ಞಕ್ಕೋಸ್ಕರ ಗಾಂ-ಭೂಮಿಯನ್ನು ದುದೋಹ- ಕರೆಯುತ್ತಿದ್ದನು. ಮಘವಾ-ಇಂದ್ರನು ಸಸ್ಯಾಯ-ಪೈರಿಗೋಸ್ಕರ ದಿವಂ - ಸ್ವರ್ಗವನ್ನು +ದುದೋಹ-ಕರೆಯುತ್ತಿದ್ದನು. ಉಭೌ-ಅವರಿಬ್ಬರೂ ಸಮ್ಪದ್ವಿನಿಮಯೇನ-(ಸಮ್ಪತ್-ಸಂಪತ್ತಿನ ವಿನಿಮಯೇನ-ಬದಲಾವಣೆಯಿಂದ) ಒಬ್ಬರಿಗೊಬ್ಬರು ತಮ್ಮ ತಮ್ಮ ಸಂಪತ್ತನ್ನು ಬದಲಾಯಿಸುವದರಿಂದ ಭುವನ ದ್ವಯಂ - ಎರಡು ಲೋಕವನ್ನೂ ದಧತುಃ-ಕಾಪಾಡುತ್ತಿದ್ದರು.

ತಾತ್ಪರ್ಯ. ರಾಜನು ಯಜ್ಞಗಳಿಂದ ಇಂದ್ರಲೋಕವನ್ನು ನೋಡಿಕೊಳ್ಳುತ್ತಿದ್ದನು, ಇಂದ್ರನೂ ಮಳೆಯನ್ನು ಸುರಿಸಿ ಭೂಲೋಕದಲ್ಲಿ ಪೈರು ಬೆಳೆಯುವ ಹಾಗೆ ಮಾಡುತ್ತಿದ್ದನು.

ವಿಗ್ರಹವಾಕ್ಯಗಳು. ೧ ಸಮ್ಪದೋಃ ವಿನಿಮಯಃ-ಸಮ್ಪದ್ವಿನಿಮಯಃ (ಷ. ತ.); ತೇನ-ಸಮ್ಪದ್ವಿನಿಮಯೇನ. ೨ ಭುವನಯೋಃ ದ್ವಯಂ-ಭುವನದ್ವಯಮ್ (ಷ.ತ.).

ವ್ಯಾಕರಣವಿಶೇಷ. ೧ ಯಜ್ಞಾಯ=ಯಜ್ಞಂ ಕರ್ತುಂ; ಸಸ್ಯಾಯ=ಸಸ್ಯಂ ವರ್ಧಯಿತುಂ. ಚತುರ್ಥೀವಿಭಕ್ತಿ ಬಂದಿರುವದಕ್ಕೆ ೯ನೆಯ ಶ್ಲೋಕದ 'ಚಾಪಲಾಯ ಪ್ರಚೋದಿತಃ' ಎಂಬದರ ಟಿಪ್ಪಣಿಯನ್ನು (ಪು.೧೦) ನೋಡಿ. ೨ ಗಾಂ-ಓಕಾರಂತ ಸ್ತ್ರೀಲಿಂಗ ಗೋಶಬ್ದ. ೩ ಮಘವಾ - ನಕಾರಾನ್ತ ಪುಲ್ಲಿಂಗ. ೪ ದಿವಮ್-ವಕಾರಾಂತ ಸ್ತ್ರೀಲಿಂಗ. ೫ ಉಭೌ-ನಿತ್ಯ ದ್ವಿವಚನ. ೬ ದುದೋಹ-ದುಹಪ್ರಪೂರಣೇ (ದುಹ್-ಕರೆ, ಬರಿದು ಮಾಡು) ೨ನೆಯ ಗಣ ಲಿಟ್, ಪ.ಪ್ರ.ಏ. ೭ ದಧತುಃ-ಡುಧಾಞ್-ಧಾರಣಪೋಷಣಯೋಃ (ಧಾ-ಧರಿಸು, ಕಾಪಾಡು) ೩ನೆಯ ಗಣ, ಲಿಟ್, ಪ.ಪ್ರ.ದ್ವಿ. 'ದಧತುಃ' ಎಂಬಲ್ಲಿ ಒಬ್ಬರ ರಾಜ್ಯವನ್ನೊಬ್ಬರು ಕಾಪಾಡಿಕೊಡುತ್ತಿದ್ದರು- ಎಂದು ಕ್ರಿಯೆಯು ವ್ಯತಿಹಾರಾರ್ಥದಲ್ಲಿ (reciprocity, interchange) ಬಂದಿದೆ. ಈ ಅರ್ಥದಲ್ಲಿ ಆತ್ಮನೇಪದವು ಬರುತ್ತದೆ. ಆದರೆ 'ಒಬ್ಬರಿಗೊಬ್ಬರು' ಎಂಬರ್ಥದ ಪದವಿದ್ದರೆ ಬರುವದಿಲ್ಲ. ಇಲ್ಲಿ 'ವಿನಿಮಯೇನ ಎಂಬ ಮಾತಿನಿಂದ ಒಬ್ಬರಿಗೊಬ್ಬರು ಎಂಬರ್ಥವು ಹೊರಟಿರುವದರಿಂದ ಪರಸ್ಮೈಪದವೆ ಬಂದಿದೆ.

ನ ಕಿಲಾನುಯಯುಸ್ತಸ್ಯ ರಾಜಾನೋ ರಕ್ಷಿತುರ್ಯಶಃ ।
ವ್ಯಾವೃತ್ತಾ ಯತ್ಪರಸ್ವೇಭ್ಯಃ ಶ್ರುತೌ ತಸ್ಕರತಾ ಸ್ಥಿತಾ ॥೨೭॥

ಅನ್ವಯ. [ಯತ್ ತಸ್ಕರತಾ ಪರಸ್ವೇಭ್ಯಃ ವ್ಯಾವೃತ್ತಾ ಶ್ರುತೌ ಸ್ಥಿತಾ (+ತತ್) ರಾಜಾನಃ ರಕ್ಷಿತುಃ ತಸ್ಯ ಯಶಃ ನ ಅನುಯಯುಃ ಕಿಲ]

ಅರ್ಥ. ಯತ್-ಯಾವ ಕಾರಣದಿಂದ ತಸ್ಕರತಾ-ಕಳ್ಳತನವು ಪರಸ್ವೇಭ್ಯಃ - ಪರರ ಧನಗಳಿಂದ ವ್ಯಾವೃತ್ತಾ-ಹಿಂತಿರುಗಿದ್ದಾಗಿ ಶ್ರುತೌ - ಶಬ್ದದಲ್ಲಿಯೇ ಸ್ಥಿತಾ-ನಿಂತುಬಿಟ್ಟಿತೋ +ತತ್-ಆ ಕಾರಣದಿಂದ ರಾಜಾನಃ-ದೊರೆಗಳು ರಕ್ಷಿತುಃ - ರಕ್ಷಕನಾದ ತಸ್ಯ-ಆತನ ಯಶಃ-ಕೀರ್ತಿಯನ್ನು ನ ಅನುಯಯುಃ ಕಿಲ-ಅನುಸರಿಸಲೇ ಇಲ್ಲವೊ ಏನೊ.

ತಾತ್ಪರ್ಯ. ಆತನ ರಾಜ್ಯದಲ್ಲಿ ಕಳ್ಳತನವೆಂಬುದು ಮತ್ತೊಬ್ಬರ ಹಣದ ವಿಷಯವಾದದ್ದಾಗಿರದೆ, ಕಳ್ಳತನವೆಂಬ ಮಾತಿನ ವಿಷಯವಾಗಿದ್ದದ್ದರಿಂದ ಮಿಕ್ಕ ರಾಜರು ಆತನಂತೆ ಕೀರ್ತಿಯನ್ನು ಹೊಂದುವದಕ್ಕೆ ಆಗಲಿಲ್ಲವೊ ಎಂಬಂತಿತ್ತು.

ವಿಗ್ರಹವಾಕ್ಯಗಳು. ೧ ಪರೇಷಾಂ ಸ್ವಾನಿ-ಪರಸ್ವಾನಿ(ಷ. ತ.); ತೇಭ್ಯಃ - ಪರಸ್ವೇಭ್ಯಃ. ೨ ತಸ್ಕರಸ್ಯ ಕರ್ಮ-ತಸ್ಕರತಾ (ತ. ವೃ.).

ವ್ಯಾಕರಣವಿಶೇಷ. ೧ ಸ್ವ-ಎಂಬ ಮಾತಿಗೆ ತಾನು, ತನ್ನದು, ಜ್ಞಾತಿ, ಧನ - ಎಂಬ ನಾಲ್ಕು ಅರ್ಥಗಳಿರುವವು. ಜ್ಞಾತಿ, ತಾನು- ಎಂಬರ್ಥದಲ್ಲಿ ಈ ಶಬ್ದವು ಪುಲ್ಲಿಂಗ; ತನ್ನ- ಎಂಬರ್ಥದಲ್ಲಿ ಇದು ವಿಶೇಷಣವಾದ್ದರಿಂದ ಮೂರು ಲಿಂಗವೂ ಆಗುವದು; ಹಣವೆಂಬರ್ಥದಲ್ಲಿ ಪುನ್ನಪುಂಸಕಲಿಂಗವಾಗುವದು. ಇಲ್ಲಿ ಹಣವೆಂಬರ್ಥವಾದ್ದರಿಂದ ಪುಲ್ಲಿಂಗವೆಂದು ರಾಮಶಬ್ದದಂತೆ ಅಥವಾ ನಪುಂಸಕವೆಂದು ಜ್ಞಾನಶಬ್ದದಂತೆ ನಡೆಸಬಹುದು ಈ ಮಾತಿಗೆ ಜ್ಞಾತಿ, ಹಣ-ಎಂಬರ್ಥವಿಲ್ಲದಾಗ ಇದನ್ನು 'ಪೂರ್ವ'ಶಬ್ದದಂತೆ ನಡೆಸಬೇಕಾಗುವದು.

ವಿಚಾರ. ಕಳ್ಳತನಕ್ಕೆ ವಿಷಯವು ಮತ್ತೊಬ್ಬರ ಸ್ವತ್ತು; ಆದರೆ ದಿಲೀಪನು ಜನರ ಸ್ವತ್ತನ್ನು ಚೆನ್ನಾಗಿ ಕಾಪಾಡಿಕೊಂಡು ಬರುತ್ತಿದ್ದನಾದ್ದರಿಂದ ಅದನ್ನು ಕದಿಯುವದು ಯಾರಿಂದಲೂ ಆಗುತ್ತಿರಲಿಲ್ಲ; ಇದರಿಂದ ಅವನ ಕಾಲದಲ್ಲಿ ಕಳ್ಳತನವೆಂಬ ಮಾತೇ ಕಳವಾಗಿ ಹೋಯಿತು. ಈ ಕಾರಣದಿಂದ ಅವನ ಮುಂದಿನ ರಾಜರು ಕಳ್ಳತನವನ್ನು ನಿಲ್ಲಿಸಬೇಕಾದ ಅವಶ್ಯಕತೆಯೇ ಬೀಳಲಿಲ್ಲ; ಇದರಿಂದಲೆ ಅವರಿಗೆ ಅವನಂತೆ ಕೀರ್ತಿಯೂ ಬರುವದಕ್ಕವಕಾಶವಾಗಲಿಲ್ಲವೊ ಏನೊ ಎಂದು ಕವಿಯು ಇಲ್ಲಿ ಉತ್ಪ್ರೇಕ್ಷೆ ಮಾಡಿರುತ್ತಾನೆ. ಪ್ರಜೆಗಳ ಸ್ವತ್ತನ್ನು ದಿಲೀಪನು ಬಲು ಚೆನ್ನಾಗಿ ಕಾಪಾಡುತ್ತಾ ಇದ್ದನೆಂಬುದು ಭಾವಾರ್ಥವು.

ದ್ವೇಷ್ಯೋಽಪಿ ಸಮ್ಮತಃ ಶಿಷ್ಟಸ್ತಸ್ಯಾರ್ತಸ್ಯ ಯಥೌಷಧಮ್ ।
ತ್ಯಾಜ್ಯೋ ದುಷ್ಟಃ ಪ್ರಿಯೋಽಪ್ಯಾಸೀದಙ್ಗುಲೀವೋರಗಕ್ಷತಾ ॥೨೮॥

ಅನ್ವಯ. [ಶಿಷ್ಟಃ ದ್ವೇಷ್ಯೋಽಪಿ ತಸ್ಯ ಆರ್ತಸ್ಯ ಔಷಧಂ ಯಥಾ ಸಮ್ಮತಃ (+ಆಸೀತ್) ದುಷ್ಟಃ ಪ್ರಿಯೋಽಪಿ ಉರಗಕ್ಷತಾ ಅಂಗುಲೀ ಇವ ತ್ಯಾಜ್ಯಃ (+ಆಸೀತ್)]

ಅರ್ಥ. ಶಿಷ್ಟಃ-ಒಳ್ಳೆಯವನು ದ್ವೇಷ್ಯೋಽಪಿ-ಶತ್ರುವಾದರೂ ತಸ್ಯ-ಆತನಿಗೆ ಆರ್ತಸ್ಯ- ರೋಗಿಗೆ ಔಷಧಂ- ಔಷಧಿಯು ಯಥಾ-ಹೇಗೋ ಹಾಗೆ ಸಮ್ಮತಃ-ಮೆಚ್ಚಾದವನು+ ಆಸೀತ್- ಆಗಿರುತ್ತಿದ್ದನು; ದುಷ್ಟಃ-ಕೆಟ್ಟವನು ಪ್ರಿಯೋಽಪಿ-ಬೇಕಾದವನಾಗಿದ್ದರೂ ಉರಗಕ್ಷತಾ - (ಉರಗ- ಹಾವಿನಿಂದ ಕ್ಷತಾ-ಕಚ್ಚಲ್ಪಟ್ಟ) ಹಾವು ಕಚ್ಚಿದ ಅಂಗುಲೀ ಇವ-ಬೆರಳಿನ ಹಾಗೆ ತ್ಯಾಜ್ಯಃ-ಬಿಡಲ್ಪಡತಕ್ಕವನು+ಆಸೀತ್-ಆಗಿರುತ್ತಿದ್ದನು.

ತಾತ್ಪರ್ಯ. ತನಗೆ ಶತ್ರುಗಳಾಗಲಿ ಮಿತ್ರರಾಗಲಿ, ಅವರು ಶಿಷ್ಟರಾದರೆ ಮೆಚ್ಚುತ್ತಲೂ ದುಷ್ಟರಾದರೆ ದಂಡಿಸುತ್ತಲೂ ಇದ್ದನು.

ವಿಗ್ರಹವಾಕ್ಯಗಳು. ೧ ದ್ವೇಷ್ಟುಂ ಯೋಗ್ಯಃ-ದ್ವೇಷ್ಯಃ (ಕೃ. ವೃ.). ೨ ತ್ಯಕ್ತುಂ ಯೋಗ್ಯಃ-ತ್ಯಾಜ್ಯಃ. ೩ ಉರಗೇಣ ಕ್ಷತಾ-ಉರಗಕ್ಷತಾ (ತೃ. ತ.).

ವಿಚಾರ. ಹಾವು ಕಚ್ಚಿದ ಬೆರಳು ತನ್ನದೇ ಆಗಿದ್ದರೂ ದೇಹದ ಮಿಕ್ಕ ಭಾಗಕ್ಕೆ ವಿಷವು ಏರದೆ ಇರಲೆಂದು ಜನರು ಹಿಂದುಮುಂದೆ ನೋಡದೆ ಕತ್ತರಿಸಿ ಹಾಕುತ್ತಾರಲ್ಲವೆ? ಅದರಂತೆ ತನ್ನ ಕಡೆಯವರಾದರೂ ದುಷ್ಟರೆಂದು ತಿಳಿದರೆ ಕೂಡಲೆ ದಿಲೀಪನು ದಂಡಿಸುತ್ತಿದ್ದನು ಎಂಬುದು 'ಹಾವು ಕಚ್ಚಿದ ಬೆರಳಿನಂತೆ' ಎಂಬ ಉಪಮಾನದಿಂದ ಹೊರಡುವದು.

ತಂ ವೇಧಾ ವಿದಧೇ ನೂನಂ ಮಹಾಭೂತಸಮಾಧಿನಾ ।
ತಥಾ ಹಿ ಸರ್ವೇ ತಸ್ಯಾಸನ್ ಪರಾರ್ಥೈಕಫಲಾ ಗುಣಾಃ ॥೨೯॥

ಅನ್ವಯ. [ವೇಧಾಃ ತಂ ಮಹಾಭೂತಸಮಾಧಿನಾ ವಿದಧೇ ನೂನಂ ತಥಾ ಹಿ ತಸ್ಯ ಸರ್ವೇ ಗುಣಾಃ ಪರಾರ್ಥೈಕಫಲಾಃ ಆಸನ್]

ಅರ್ಥ. ವೇಧಾಃ-ಬ್ರಹ್ಮನು ತಂ-ಆತನನ್ನು ಮಹಾಭೂತಸಮಾಧಿನಾ - (ಮಹಾಭೂತ-ಮಹಾಭೂತಗಳ ಸಮಾಧಿನಾ-ಸಾಮಗ್ರಿಯಿಂದ) ಮಹಾಭೂತಗಳನ್ನು ಸೇರಿಸಿ ವಿದಧೇ-ಸೃಷ್ಟಿಮಾಡಿದನು ನೂನಂ-ನಿಜವು. ತಥಾ ಹಿ - (ಹಾಗೆಯೆ ಸರಿ) ಏಕೆಂದರೆ ತಸ್ಯ- ಆತನ ಸರ್ವೇ-ಎಲ್ಲಾ ಗುಣಾಃ-ಗುಣಗಳು ಪರಾರ್ಥೈಕಫಲಾಃ - (ಪರ-ಮತ್ತೊಬ್ಬರ ಅರ್ಥ-ಪ್ರಯೋಜನವು ಏಕ-ಒಂದೇ ಫಲ-ಪ್ರಯೋಜನವಾಗುಳ್ಳವಾಗಿ) ಮತ್ತೊಬ್ಬರಿಗೆ ಒಳ್ಳೆಯದಾಗುವದಕ್ಕಾಗಿಯೇ ಆಸನ್-ಇದ್ದವು.

ತಾತ್ಪರ್ಯ. ಬ್ರಹ್ಮನು ಅವನನ್ನು ಪಂಚಮಹಾಭೂತಗಳೆಲ್ಲವನ್ನೂ ಒಟ್ಟು ಗೂಡಿಸಿ ಸೃಷ್ಟಿಮಾಡಿರಬೇಕು; ಏಕೆಂದರೆ ಮಹಾಭೂತಗಳ ಗುಣಗಳ ಹಾಗೆಯೇ ಆತನ ಗುಣಗಳೂ ಮತ್ತೊಬ್ಬರ ಪ್ರಯೋಜನಕ್ಕಾಗಿಯೇ ಇರುತ್ತಿದ್ದವು.

ವಿಗ್ರಹವಾಕ್ಯಗಳು. ೧ ಸಮಾಧೀಯತೇ ಅನೇನ ಇತಿ-ಸಮಾಧಿಃ (ಕೃ. ವೃ); ಮಹಾನ್ತಶ್ಚ ತೇ ಭೂತಾಶ್ಚ-ಮಹಾಭೂತಾಃ (ವಿ. ಪೂ. ಕ). ತೇಷಾಂ-ಮಹಾ ಭೂತಾನಾಂ; ಮಹಾಭೂತಾನಾಂ ಸಮಾಧಿಃ-ಮಹಾಭೂತಸಮಾಧಿಃ (ಷ. ತ.). ೨ ಪರೇಷಾಂ ಅರ್ಥಃ-ಪರಾರ್ಥಃ(ಷ. ತ.); ಏಕಂ ಚ ತತ್ ಫಲಂ ಚ-ಏಕ ಫಲಮ್ (ವಿ. ಪೂ. ಕ.); ಪರಾರ್ಥಃ ಏಕಫಲಂ ಯೇಷಾಂ ತೇ-ಪರಾರ್ಥೈಕಫಲಾಃ (ಷ. ಬ.)

ವ್ಯಾಕರಣವಿಶೇಷ. ೧ ವೇಧಾಃ-ಸಕಾರಾನ್ತ ಪುಲ್ಲಿಂಗ. ೨ 'ನೂನಂ' ಎಂಬ ಮಾತು ಸೇರಿಸಿದರೆ 'ಹಾಗೆಂದು ಊಹಿಸುತ್ತೇನೆ' ಎಂದರ್ಥ ಮಾಡಬೇಕು. ಉದಾ: ನೂನಂ ಗಚ್ಛತಿ= ಹೋಗುತ್ತಿರಬೇಕು. ೩ ತಥಾ ಹಿ-ಮೊದಲು ಹೇಳಿದ ಮಾತುಗಳಿಗೆ ಬೆಂಬಲವನ್ನು ಕೊಟ್ಟು ಮತ್ತೇನಾದರೂ ಹೇಳಬೇಕಾಗುವಾಗ ಈ ಮಾತುಗಳನ್ನು ಉಪಯೋಗಿಸುತ್ತಾರೆ. ಕನ್ನಡದಲ್ಲಿ 'ಏಕೆಂದರೆ' 'ಹೇಗೆಂದರೆ' ಎಂದು ಪರಿವರ್ತನೆ ಮಾಡಬಹುದು. ೪ ಆಸನ್-ಅಸಭುವಿ ಎಂಬ ೨ನೆಯ ಗಣದ ಧಾತು, ಲಙ್, ಪ.ಪ್ರ.ಬ. ೫. ವಿದಧೇ-ಡುಧಾಞ್‌ಧಾರಣಪೋಷಣಯೋಃ (ಧಾ-ಧರಿಸು, ಕಾಪಾಡು) ೩ನೆಯ ಗಣ, ಲಿಟ್, ಆ.ಪ್ರ.ಏ.; 'ವಿ' ಎಂಬ ಉಪಸರ್ಗ ಸೇರಿ ಮಾಡು ಎಂಬರ್ಥವಾಗಿದೆ.

ವಿಚಾರ. ೧ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ-ಇವು ಪಂಚ ಮಹಾಭೂತಗಳು. ಇವುಗಳ ಗುಣಗಳು ಗಂಧ, ರಸ, ರೂಪ, ಸ್ಪರ್ಶ, ಶಬ್ದ. ಶಬ್ದಸ್ಪರ್ಶಾದಿಗುಣಗಳು ತಮ್ಮ ಪ್ರಯೋಜನಕ್ಕಾಗಿ ಇರುವುದಿಲ್ಲ; ತಮಗಿಂತ ಬೇರೆಯಾಗಿರುವ ಪುರುಷರಿಗೆ ಎಂದರೆ ಆತ್ಮರಿಗೆ ಅನುಭವವನ್ನು ಉಂಟುಮಾಡು ವದಕ್ಕಾಗಿ ಹುಟ್ಟಿರುತ್ತವೆ-ಎಂದು ಸಾಂಖ್ಯರು ಹೇಳುತ್ತಾರೆ. ಮಹಾಭೂತಗಳ ಗುಣಗಳು ತಮಗಿಂತ ಬೇರೆಯವರಿಗೋಸ್ಕರವಾಗಿ ಇರುವಂತೆ ದಿಲೀಪನ ಗುಣಗಳು ಮತ್ತೊಬ್ಬರಿಗಾಗಿಯೇ ಇರುತ್ತಿದ್ದವು ಎಂದರೆ ಪರೋಪಕಾರಕ್ಕಾಗಿಯೇ ಆತನು ಕಷ್ಟಪಡುತ್ತಿದ್ದನೇ ಹೊರತು ಅವನಲ್ಲಿ ಸ್ವಾರ್ಥತೆ ಇರಲಿಲ್ಲ ಎಂದು ಭಾವ.

ಸ ವೇಲಾವಪ್ರವಲಯಾಂ ಪರಿಖೀಕೃತಸಾಗರಾಮ್ ।
ಅನನ್ಯಶಾಸನಾಮುರ್ವೀಂ ಶಶಾಸೈಕಪುರೀಮಿವ ॥೩೦॥

ಅನ್ವಯ. [ಸಃ ವೇಲಾವಪ್ರವಲಯಾಂ ಪರಿಖೀಕೃತಸಾಗರಾಮ್ ಅನನ್ಯಶಾಸನಾಂ ಉರ್ವೀಂ ಏಕಪುರೀಮಿವ ಶಶಾಸ]

ಅರ್ಥ. ಸಃ-ಆತನು ವೇಲಾವಪ್ರವಲಯಾಂ-(ವೇಲಾ-ಸಮುದ್ರದ ತೀರವು ವಪ್ರ-ಪ್ರಾಕಾರದ ವಲಯಾಂ-ಸುತ್ತಾಗಿ ಉಳ್ಳ) ಸಮುದ್ರದ ದಡವೇ ಕೋಟೆಯ ಗೋಡೆಯಾಗಿಯೂ ಪರಿಖೀಕೃತಸಾಗರಾಮ್-(ಪರಿಖೀಕೃತ-ಅಗಳ್ತೆಯಾಗಿ ಮಾಡಲ್ಪಟ್ಟ ಸಾಗರಾಮ್-ಸಮುದ್ರಗಳುಳ್ಳ) ಸಮುದ್ರಗಳೇ ಕಂದಕವಾಗಿಯೂ ಅನನ್ಯಶಾಸನಾಂ - ಮತ್ತೊಬ್ಬರ ಆಳ್ವಿಕೆಯಿಲ್ಲದ್ದಾಗಿಯೂ ಇರುವ ಉರ್ವೀಂ-ಭೂಮಿಯನ್ನು ಏಕಪುರೀಮಿವ - ಒಂದೇ ಪಟ್ಟಣವನ್ನು ಹೇಗೋ ಹಾಗೆ ಶಶಾಸ-ಆಳುತ್ತಿದ್ದನು.

ತಾತ್ಪರ್ಯ. ಅವನ ರಾಜಧಾನಿಗೆ ಕೋಟೆಕೊತ್ತಲುಗಳಾಗಲಿ ಕಂದಕವಾಗಲಿ ಇರಲಿಲ್ಲ; ಏಕೆಂದರೆ ಸಮುದ್ರದವರೆಗಿನ ರಾಜ್ಯವನ್ನೆಲ್ಲ ಒಂದೇ ಪಟ್ಟಣವೊ ಎಂಬಂತೆ ಆತನೊಬ್ಬನೆ ಆಳುತ್ತಿದ್ದನು.

ವಿಗ್ರಹವಾಕ್ಯಗಳು. ೧ ವಪ್ರಾಣಾಂ ವಲಯಾಃ-ವಪ್ರವಲಯಾಃ (ಷ. ತ.); ವೇಲಾಃ ವಪ್ರವಲಯಾಃ ಯಸ್ಯಾಃ ಸಾ-ವೇಲಾವಪ್ರವಲಯಾ (ಷ. ಬ); ತಾಂ-ವೇಲಾವಪ್ರವಲಯಾಮ್. ೨ ಪರಿತಃ ಖಾತಮ್- ಪರಿಖಾ (ಕೃ. ವೃ.); ಅಪರಿಖಾಃ ಪರಿಖಾಃ ಸಮ್ಪದ್ಯಮಾನಾಃ ಕೃತಾಃ-ಪರಿಖೀಕೃತಾಃ (ಕೃ. ವೃ.); ಪರಿಖೀಕೃತಾಃ ಸಾಗರಾಃ ಯಸ್ಯಾಃ ಸಾ-ಪರಿಖೀಕೃತಸಾಗರಾ (ಷ.ಬ.); ತಾಂ-ಪರಿಖೀಕೃತಸಾಗರಾಮ್. ೩ ಅನ್ಯಸ್ಯ ಶಾಸನಂ-ಅನ್ಯಶಾಸನಮ್ (ಷ. ತ.); ನ ವಿದ್ಯತೇ ಅನ್ಯಶಾಸನಂ ಯಸ್ಯಾಃ ಸಾ-ಅನನ್ಯಶಾಸನಾ (ನ. ಬ.); ತಾಮ್-ಅನನ್ಯಶಾಸನಾಮ್. ೪ ಏಕಾ ಚ ಸಾ ಪುರೀ ಚ-ಏಕಪುರೀ (ವಿ. ಪೂ. ಕ.); ತಾಂ-ಏಕಪುರೀಮ್.

ವ್ಯಾಕರಣವಿಶೇಷ. ೧ ಪರಿಖೀಕೃತ-ಪರಿಖೆಯಲ್ಲದ್ದು ಪರಿಖೆಯಾಯಿತು ಎಂಬರ್ಥದಲ್ಲಿ ಪರಿಖಾ ಶಬ್ದಕ್ಕೆ 'ಚ್ವಿ' (ಇ) ಪ್ರತ್ಯಯವು ಬಂದಿದೆ. ಕೃ,ಭೂ, ಅಸ್-ಎಂಬ ಧಾತುಗಳು ಸೇರಿದಾಗ ಈ ರೀತಿಯಾಗಿ ವಿಕಾರ (change) ವಾಯಿತು ಎಂಬರ್ಥದಲ್ಲಿ ಚ್ವಿ ಪ್ರತ್ಯಯವು ಬರುತ್ತದೆ; ಈ ಪ್ರತ್ಯಯವು ಬಂದಾಗ ಅ ಆಕಾರಗಳಿಗೆ ಈ ಎಂಬಾದೇಶವು ಬರುವದು. ಉದಾ: 'ಕೃಷ್ಣೀ ಕರೋತಿ'-ಕೃಷ್ಣನನ್ನಾಗಿ ಮಾಡುತ್ತಾನೆ ಬ್ರಹ್ಮೀಭವತಿ-ಬ್ರಹ್ಮನಾಗುತ್ತಾನೆ; ಗಙ್ಗೀ ಸ್ಯಾತ್-ಗಂಗೆಯಾದೀತು. ೨ ಅನನ್ಯಶಾಸನಾಂ-ಎಂಬುದರಲ್ಲಿ 'ನಞ್' ಮುಂದೆ 'ಇರು' ಎಂಬರ್ಥದ ಉತ್ತರಪದವು ಲೋಪವಾಗಿದೆ; 'ಅವಿದ್ಯಮಾನಾನ್ಯಶಾಸನಾಂ' ಎಂದೂ ಆಗಬಹುದು. ೩ ಶಶಾಸ–ಶಾಸು ಅನುಶಿಷ್ಟೌ (ಶಾಸ್-ಹೇಳಿಕೊಡು, ಆಳು) ಎಂಬ ೨ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಏ.

ತಸ್ಯ ದಾಕ್ಷಿಣ್ಯರೂಢೇನ ನಾಮ್ನಾ ಮಗಧವಂಶಜಾ ।
ಪತ್ನೀ ಸುದಕ್ಷಿಣೇತ್ಯಾಸೀದಧ್ವರಸ್ಯೇವ ದಕ್ಷಿಣಾ ॥೩೧॥

ಅನ್ವಯ. [ತಸ್ಯ ಮಗಧವಂಶಜಾ ದಾಕ್ಷಿಣ್ಯರೂಢೇನ ನಾಮ್ನಾ ಅಧ್ವರಸ್ಯ ದಕ್ಷಿಣಾ ಇತಿ ಸುದಕ್ಷಿಣಾ ಇತಿ ಪತ್ನೀ ಆಸೀತ್]

ಅರ್ಥ. ತಸ್ಯ-ಆತನಿಗೆ ಮಗಧವಂಶಜಾ-ಮಗಧನ ವಂಶದಲ್ಲಿ ಹುಟ್ಟಿದ ದಾಕ್ಷಿಣ್ಯರೂಢೇನ-(ದಾಕ್ಷಿಣ್ಯ - ದಾಕ್ಷಿಣ್ಯದಿಂದ ರೂಢೇನ-ಪ್ರಸಿದ್ಧವಾದ) ಮರ್ಯಾದೆಯ ನಡೆವಳಿಕೆಯಿಂದ ಪ್ರಸಿದ್ಧವಾಗಿದ್ದ ನಾಮ್ನಾ-ಹೆಸರಿನಿಂದ ಕೂಡಿದ್ದ ಅಧ್ವರಸ್ಯ - ಯಜ್ಞಕ್ಕೆ ದಕ್ಷಿಣಾ ಇತಿ- ದಕ್ಷಿಣೆಯೆಂಬ ಹೆಂಡತಿಯು ಹಾಗೆ ಇದ್ದ ಸುದಕ್ಷಿಣಾ ಇತಿ-ಸುದಕ್ಷಿಣೆಯೆಂಬ ಪತ್ನೀ-ಹೆಂಡತಿಯು ಆಸೀತ್-ಇದ್ದಳು.

ತಾತ್ಪರ್ಯ. ಆ ರಾಜನಿಗೆ ಮಗಧವಂಶದಲ್ಲಿ ಹುಟ್ಟಿದ ಸುದಕ್ಷಿಣೆಯೆಂಬ ಹೆಸರಿನ ಪತ್ನಿಯಿದ್ದಳು. ಆಕೆಯ ಹೆಸರಿಗೆ ತಕ್ಕಂತೆ ಮತ್ತೊಬ್ಬರ ಮನಸ್ಸನ್ನು ಅನುವರ್ತಿಸುವ ಗುಣವಾದ ದಾಕ್ಷಿಣ್ಯವು ಆಕೆಯಲ್ಲಿತ್ತು. ಯಜ್ಞಪುರುಷನಿಗೆ ದಕ್ಷಿಣೆಯೆಂಬ ಪತ್ನಿಯು ಹೇಗೆ ಪ್ರಸಿದ್ಧಳೋ ಹಾಗೆ ದಿಲೀಪನ ಪತ್ನಿಯೂ ಸುಪ್ರಸಿದ್ಧಳು.

ವಿಗ್ರಹವಾಕ್ಯಗಳು. ೧ ದಕ್ಷಿಣಾಯಾಃ ಭಾವಃ-ದಾಕ್ಷಿಣ್ಯಮ್ (ತ. ವೃ.) ತೇನ - ದಾಕ್ಷಿಣ್ಯೇನ; ದಾಕ್ಷಿಣ್ಯೇನ ರೂಢಂ-ದಾಕ್ಷಿಣ್ಯರೂಢಂ (ತೃ. ತ.); ತೇನ-ದಾಕ್ಷಿಣ್ಯರೂಢೇನ. ೨ ಮಗಧಸ್ಯ ವಂಶಃ-ಮಗಧವಂಶಃ (ಷ. ತ.); ತಸ್ಮಿನ್-ಮಗಧವಂಶೇ; ಮಗಧವಂಶೇ ಜಾತಾ-ಮಗಧವಂಶಜಾ (ಕೃ. ವೃ.)

ವ್ಯಾಕರಣವಿಶೇಷ. ೧ ಮಗಧ ಎಂಬುದು ಒಬ್ಬ ಕ್ಷತ್ರಿಯನಿಗೂ ಒಂದು ದೇಶಕ್ಕೂ ಹೆಸರು; ಇಲ್ಲಿ ಮಗಧವಂಶಃ ಎಂದರೆ ಮಗಧ ಎಂಬ ಕ್ಷತ್ರಿಯನ ವಂಶವು ಎಂದರ್ಥ. ಮಗಧ ದೇಶದ ರಾಜನ ವಂಶ ಎಂಬ ಅರ್ಥವು ಬರಬೇಕಾದರೆ ಮಾಗಧವಂಶಃ ಎಂದು ಪ್ರಯೋಗಿಸಬೇಕಾಗುವದು. ೨ ನಾಮ್ನಾ ಸುದಕ್ಷಿಣಾ-ಎಂಬುದಕ್ಕೆ ಹೆಸರಿನಿಂದ ಸುದಕ್ಷಿಣೆಯು ಎಂದು ಅಕ್ಷರಾರ್ಥವಾಗುವದು; ಸುದಕ್ಷಿಣೆಯೆಂಬ ಹೆಸರುಳ್ಳವಳು ಎಂಬುದು ತಾತ್ಪರ್ಯಾರ್ಥವು.

ವಿಚಾರ. ೧ ಯಜ್ಞಪುರುಷನು ಒಬ್ಬ ಗಂಧರ್ವನೆಂದೂ 'ದಕ್ಷಿಣಾ' ಎಂಬಾಕೆಯು ಆತನ ಪತ್ನಿಯೆಂದೂ ವೇದದಲ್ಲಿದೆ. ೨ ಮಗಧವೆಂಬುದು ಈಗಿನ ದಕ್ಷಿಣಬಿಹಾರ್ ದೇಶಕ್ಕೆ ಪೂರ್ವದಲ್ಲಿದ್ದ ಹೆಸರು. ಭರತಖಂಡದ ಅನೇಕರಾಜರು ಇಲ್ಲಿ ಆಳುತ್ತಿದ್ದರು. ಈ ದೇಶಕ್ಕೆ ಕೀಕಟವೆಂದು ಮತ್ತೊಂದು ಹೆಸರು ಈಚೆಗೆ ಬಂದಿತ್ತು. ಬೌದ್ಧಮತವು ಇಲ್ಲಿಯೇ ಹುಟ್ಟಿತು.

ಕಲತ್ರವನ್ತಮಾತ್ಮಾನಮವರೋಧೇ ಮಹತ್ಯಪಿ ।
ತಯಾ ಮೇನೇ ಮನಸ್ವಿನ್ಯಾ ಲಕ್ಷ್ಮ್ಯಾ ಚ ವಸುಧಾಧಿಪಃ ॥೩೨॥

ಅನ್ವಯ. [ವಸುಧಾಧಿಪಃ ಅವರೋಧೇ ಮಹತಿ (ಸತ್ಯ)ಪಿ ಮನಸ್ವಿನ್ಯಾ

ತಯಾ ಲಕ್ಷ್ಮ್ಯಾ ಚ ಆತ್ಮಾನಂ ಕಲತ್ರವಂತಂ ಮೇನೇ ]

ಅರ್ಥ. ವಸುಧಾಧಿಪಃ-(ವಸುಧಾ-ಭೂಮಿಗೆ ಅಧಿಪಃ-ಒಡೆಯನಾದವನು) ರಾಜನು ಅವರೋಧೇ-ಅಂತಃಪುರವು ಮಹತಿ ಸತ್ಯಪಿ-ದೊಡ್ಡದಾಗಿದ್ದಾಗ್ಯೂ ಮನಸ್ವಿನ್ಯಾ - ದೃಢಚಿತ್ತಳಾದ ತಯಾ-ಆಕೆಯಿಂದಲೂ ಲಕ್ಷ್ಮ್ಯಾ ಚ-ಲಕ್ಷ್ಮಿಯಿಂದಲೂ ಆತ್ಮಾನಂ-ತನ್ನನ್ನು ಕಲತ್ರವಂತಂ-ಪತ್ನಿಗಳುಳ್ಳವನನ್ನಾಗಿ ಮೇನೇ-ತಿಳಿದುಕೊಂಡಿದ್ದನು.

ತಾತ್ಪರ್ಯ. ಆ ರಾಜನ ಅಂತಃಪುರದಲ್ಲಿ ಅನೇಕ ಸ್ತ್ರೀಯರಿರುತ್ತಿದ್ದರೂ ಸುದಕ್ಷಿಣೆ, ಲಕ್ಷ್ಮಿ- ಇವರಿಬ್ಬರಿರುವದರಿಂದಲೆ ತನಗೆ ಹೆಂಡಿರಿದ್ದಂತೆ ಎಂದು ಆತನು ಭಾವಿಸಿಕೊಂಡಿದ್ದನು.

ವಿಗ್ರಹವಾಕ್ಯಗಳು. ೧ ಕಲತ್ರಾಣಿ, [ಪ್ರಶಸ್ತಾನಿ] ಅಸ್ಯ ಸನ್ತಿ ಇತಿ-ಕಲತ್ರವಾನ್ (ತ. ವೃ.); ತಮ್-ಕಲತ್ರವನ್ತಂ. ೨ ಮನಃ [ಪ್ರಶಸ್ತಂ] ಅಸ್ಯಾಃ ಅಸ್ತೀತಿ-ಮನಸ್ವಿನೀ (ತ. ವೃ.); ತಯಾ-ಮನಸ್ವಿನ್ಯಾ ೩ ವಸುಧಾಯಾಃ ಅಧಿಪಃ-ವಸುಧಾಧಿಪಃ (ಷ. ತ.).

ವ್ಯಾಕರಣವಿಶೇಷ. ೧ ಕಲತ್ರವಾನ್-ಇಲ್ಲಿ 'ವಾನ್' ಎಂಬುದಕ್ಕೆ ಉಳ್ಳ ಎಂಬುದರ್ಥ. ಇದು ಇಂಥದಕ್ಕೆ ಇದೆ, ಇಂಥದ್ದರಲ್ಲಿದೆ ಎಂಬರ್ಥದಲ್ಲಿ ಮತುಪ್ (ಮತ್) ಎಂಬ ಪ್ರತ್ಯಯವನ್ನು ಸೇರಿಸುತ್ತಾರೆ. ಉದಾ: ಗೋಮಾನ್. ಮಕಾರಾನ್ತ, 'ಅ'-'ಆ'ಕಾರಾನ್ತ ಶಬ್ದಗಳಿಗಾಗಲಿ, ಉಪಾನ್ತ್ಯದಲ್ಲಿ ಈ ವರ್ಣಗಳಿರುವ ಶಬ್ದಗಳಿಗಾಗಲಿ ಮತ್ ಪ್ರತ್ಯಯವನ್ನು ಸೇರಿಸುವಾಗ ಮಕಾರಕ್ಕೆ ವಕಾರಾದೇಶವಾಗುತ್ತದೆ. ಕಲತ್ರಶಬ್ದವು ಅಕಾರಾನ್ತವಾದ್ದರಿಂದ ಕಲತ್ರವಾನ್ ಎಂದಾಗಿದೆ. ೨ ಮನಸ್ವಿನೀ-ಎಂಬುದು ಮನಸ್ವಿನ್ ಎಂಬುದರ ಸ್ತ್ರೀಲಿಂಗ; ಮಾಯಾ, ಮೇಧಾ, ಸ್ರಜ್-ಈ ಶಬ್ದಗಳಿಗೂ ಸಕಾರಾನ್ತಶಬ್ದಕ್ಕೂ 'ಉಳ್ಳ' ಎಂಬರ್ಥದಲ್ಲಿ 'ವಿನಿ' (ವಿನ್) ಪ್ರತ್ಯಯವು ಸೇರುತ್ತದೆ. ೩ ಕಲತ್ರವಾನ್, ಮನಸ್ವೀ-ಇಲ್ಲಿ ಪ್ರಶಂಸಾರ್ಥದಲ್ಲಿ (ಒಳ್ಳೆಯ ಎಂಬರ್ಥದಲ್ಲಿ) ಪ್ರತ್ಯಯಗಳು ಸೇರಿವೆ. ಮನಸ್ಸಿದ್ದವರೆಲ್ಲ ಮನಸ್ವಿಗಳಲ್ಲ; ಒಳ್ಳೆಯ ಮನಸ್ಸಿದ್ದವರಿಗೆ ಮಾತ್ರ ಆ ಹೆಸರು ಸಲ್ಲುತ್ತದೆ. ೪ ಮೇನೇ-ಮನುಅವಬೋಧನೇ (ಮನ್-ಯೋಚಿಸು) ಎಂಬ ೭ನೆಯ ಗಣದ ಧಾತುವಿನ ಲಿಟ್, ಆ. ಪ್ರ. ಏ.

ವಿಚಾರ. ರಾಜ್ಯಲಕ್ಷ್ಮಿಯನ್ನು ಬಿಟ್ಟರೆ ರಾಜನಿಗೆ ತನ್ನ ಹೆಂಡತಿಯಲ್ಲಿದ್ದಷ್ಟು ಪ್ರೇಮವು ಮತ್ತೆ ಯಾರಲ್ಲೂ ಇರಲಿಲ್ಲವೆಂದು ಭಾವ.

ತಸ್ಯಾಮಾತ್ಮಾನುರೂಪಾಯಾಮಾತ್ಮಜನ್ಮಸಮುತ್ಸುಕಃ ।
ವಿಲಮ್ಬಿತಫಲೈಃ ಕಾಲಂ ಸ ನಿನಾಯ ಮನೋರಥೈಃ ॥೩೩॥

ಅನ್ವಯ. [ಸಃ ಆತ್ಮಾನುರೂಪಾಯಾಂ ತಸ್ಯಾಂ ಆತ್ಮಜನ್ಮಸಮುತ್ಸುಕಃ

ವಿಲಮ್ಬಿತಫಲೈಃ ಮನೋರಥೈಃ ಕಾಲಂ ನಿನಾಯ ]

ಅರ್ಥ. ಸಃ-ಆತನು ಆತ್ಮಾನುರೂಪಾಯಾಂ-ತನಗೆ ತಕ್ಕವಳಾದ ತಸ್ಯಾಂ - ಆಕೆಯಲ್ಲಿ ಆತ್ಮಜನ್ಮಸಮುತ್ಸುಕಃ- (ಆತ್ಮ-ತನ್ನ ಜನ್ಮ-ಹುಟ್ಟುವಿಕೆಯಲ್ಲಿ ಸಮುತ್ಸುಕಃ- ಕುತೂಹಲವುಳ್ಳವನಾಗಿ ತಾನು ಪುತ್ರರೂಪದಿಂದ ಹುಟ್ಟಬೇಕೆಂಬುದರಲ್ಲಿ ಕುತೂಹಲವುಳ್ಳವನಾಗಿ ವಿಲಮ್ಬಿತ ಫಲೈಃ- (ವಿಲಮ್ಬಿತ- ತಡವಾದ ಫಲೈಃ - ಫಲವುಳ್ಳ) ಫಲವು ತಡವಾಗಿರುವ ಮನೋರಥೈಃ-ಕೋರಿಕೆಗಳಿಂದ ಕಾಲಂ- ಕಾಲವನ್ನು ನಿನಾಯ- ಕಳೆದನು.

ತಾತ್ಪರ್ಯ. ಆತನು ಇಂದೋ ನಾಳೆಯೋ ಈಕೆಯಲ್ಲಿ ನನಗೆ ಮಗನು ಹುಟ್ಟುವನು ಎಂದು ಯೋಚಿಸುತ್ತಾ ಕಾಲವನ್ನು ಕಳೆಯುತ್ತಿದ್ದನು; ಪುತ್ರೋತ್ಪತ್ತಿಯು ಮಾತ್ರ ಬಹುಕಾಲ ಆಗಲೆ ಇಲ್ಲ.

ವಿಗ್ರಹವಾಕ್ಯಗಳು. ೧ ಅನುಗತಂ ರೂಪಂ ಯಸ್ಯಾಃ ಸಾ-ಅನುರೂಪಾ (ಪ್ರಾ. ಬ.); ಆತ್ಮನಃ ಅನುರೂಪಾ-ಆತ್ಮಾನುರೂಪಾ (ಷ.ತ.); ತಸ್ಯಾಂ-ಆತ್ಮಾನುರೂಪಾಯಾಂ. ೨ ಆತ್ಮನಃ ಜನ್ಮ-ಆತ್ಮಜನ್ಮ (ಷ.ತ); ತಸ್ಮಿನ್ - ಆತ್ಮಜನ್ಮನಿ; ಆತ್ಮಜನ್ಮನಿ ಸಮುತ್ಸುಕಃ-ಆತ್ಮಜನ್ಮಸಮುತ್ಸುಕಃ (ಸ.ತ.) ೩ ವಿಲಮ್ಬಿತಂ ಫಲಂ ಯೇಷಾಂ ತೇ-ವಿಲಮ್ಬಿತಫಲಾಃ (ಷ.ಬ.); ತೈಃ-ವಿಲಮ್ಬಿತಫಲೈಃ.

ವ್ಯಾಕರಣವಿಶೇಷ. ೧ ನಿನಾಯ-ಣೀಞ್‌ಪ್ರಾಪಣೇ (ನೀ-ಒಯ್ಯು,) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ.ಪ್ರ. ಏ.

ವಿಚಾರ. ತಾನೇ ಪುತ್ರರೂಪದಿಂದ ಹುಟ್ಟುತ್ತಾನೆ-ಎಂದು ವೇದವಚನವಿರುವದು. ಇದನ್ನು ಆತ್ಮಜನ್ಮಸಮುತ್ಸುಕಃ- ಎಂಬ ಮಾತಿನಿಂದ ಸೂಚಿಸಿದೆ.

ಸನ್ತಾನಾರ್ಥಾಯ ವಿಧಯೇ ಸ್ವಭುಜಾದವತಾರಿತಾ ।
ತೇನ ಧೂರ್ಜಗತೋ ಗುರ್ವೀ ಸಚಿವೇಷು ನಿಚಿಕ್ಷಿಪೇ ॥೩೪॥

ಅನ್ವಯ. [ತೇನ ಸನ್ತಾನಾರ್ಥಾಯ ವಿಧಯೇ ಸ್ವಭುಜಾತ್ ಅವತಾರಿತಾ ಜಗತಃ ಗುರ್ವೀ ಧೂಃ ಸಚಿವೇಷು ನಿಚಿಕ್ಷಿಪೇ ]

ಅರ್ಥ. ತೇನ-ಆತನಿಂದ ಸನ್ತಾನಾರ್ಥಾಯ-ಸಂತಾನವೆಂಬ ಪ್ರಯೋಜನವುಳ್ಳ ವಿಧಯೇ-ಕೆಲಸಕ್ಕೋಸ್ಕರ ಸ್ವಭುಜಾತ್-ತನ್ನ ತೋಳಿನಿಂದ ಅವತಾರಿತಾ-ಇಳಿಸಲ್ಪಟ್ಟ ಜಗತಃ-ಲೋಕದ ಗುರ್ವೀ-ಹೆಚ್ಚಿನ ಧೂಃ-ಭಾರವು ಸಚಿವೇಷು- ಮಂತ್ರಿಗಳಲ್ಲಿ ನಿಚಿಕ್ಷಿಪೇ- ಇಡಲ್ಪಟ್ಟಿತು.

ತಾತ್ಪರ್ಯ. ಆತನು ಸಂತಾನಕ್ಕಾಗಿ ಏನಾದರೂ ಮಾಡಬೇಕೆಂದು ಯೋಚಿಸಿ

ತಾನು ಆಳುತ್ತಿದ್ದ ರಾಜ್ಯದ ಭಾರವನ್ನು ಮಂತ್ರಿಗಳಿಗೆ ಒಪ್ಪಿಸಿದನು.

ವಿಗ್ರಹವಾಕ್ಯಗಳು. ೧ ಸನ್ತಾನಃ ಅರ್ಥಃ ಯಸ್ಯ ಸಃ-ಸನ್ತಾನಾರ್ಥಃ (ಷ. ಬ.); ತಸ್ಮೈ-ಸನ್ತಾನಾರ್ಥಾಯ ೨ ಸ್ವಸ್ಯ ಭುಜಃ-ಸ್ವಭುಜಃ (ಷ. ತ); ತಸ್ಮಾತ್-ಸ್ವಭುಜಾತ್.

ವ್ಯಾಕರಣವಿಶೇಷ. ೧ ಸ್ವಸ್ಯ ಭುಜಃ ಎಂದಾಗಲಿ ಸ್ವಶ್ಚಾಸೌ ಭುಜಶ್ಚ (ವಿ. ಪೂ. ಕ). ಎಂದಾಗಲಿ ವಿಗ್ರಹ ಬಿಡಿಸಬಹುದು; ಸ್ವಶಬ್ದವು ಇಲ್ಲಿ ಪೂರ್ವಶಬ್ದದಂತೆ ನಡೆಯುವದು. ೨೭ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೨೮) ನೋಡಿ. ೨ ಧೂಃ ರೇಫಾನ್ತ, ಸ್ತ್ರೀಲಿಂಗ. ೩ ನಿಚಿಕ್ಷಿಪೇ-ಕ್ಷಿಪಪ್ರೇರಣೇ (ಕ್ಷಿಪ್-ಎಸೆ) ಎಂಬ ೬ನೆಯ ಗಣದ ಧಾತುವಿಗೆ ನಿ ಎಂಬ ಉಪಸರ್ಗ ಸೇರಿ ಇದು ಎಂದರ್ಥವಾಗಿದೆ; ಲಿಟ್, ಕರ್ಮಣಿ (passive), ಆ. ಪ್ರ. ಏ. ಕರ್ಮಣಿಪ್ರಯೋಗದಲ್ಲಿ ಯಾವಾಗಲೂ ಆತ್ಮನೇಪದವನ್ನೇ ಉಪಯೋಗಿಸುವರು. ಇದರ ಕರ್ತರೀಪ್ರಯೋಗವು 'ಸಃ ಸ್ವಭುಜಾತ್ ಅವತಾರಿತಾಂ ಜಗತಃ ಗುರ್ವೀಂ ಧುರಂ ಸಚಿವೇಷು ನಿಚಿಕ್ಷೇಪ' ಎಂದಾಗುವದು.

ಅಥಾಭ್ಯರ್ಚ್ಯ ವಿಧಾತಾರಂ ಪ್ರಯತೌ ಪುತ್ರಕಾಮ್ಯಯಾ ।
ತೌ ದಂಪತೀ ವಸಿಷ್ಠಸ್ಯ ಗುರೋರ್ಜಗ್ಮತುರಾಶ್ರಮಮ್ ॥೩೫॥

ಅನ್ವಯ. [ಅಥ ಪುತ್ರಕಾಮ್ಯಯಾ ತೌ ದಂಪತೀ ಪ್ರಯತೌ ವಿಧಾತಾರಂ ಅಭ್ಯರ್ಚ್ಯ ಗುರೋಃ ವಸಿಷ್ಠಸ್ಯ ಆಶ್ರಮಮ್ ಜಗ್ಮತುಃ ]

ಅರ್ಥ. ಅಥ-ಆಮೇಲೆ ಪುತ್ರಕಾಮ್ಯಯಾ-ಪುತ್ರೇಚ್ಛೆಯಿಂದ ತೌ- ಆ ದಂಪತೀ - ಗಂಡಹೆಂಡಿರು ಪ್ರಯತೌ-ಶುದ್ಧರಾಗಿ ವಿಧಾತಾರಂ-ಬ್ರಹ್ಮನನ್ನು ಅಭ್ಯರ್ಚ್ಯ- ಪೂಜಿಸಿ ಗುರೋಃ-ಗುರುವಾದ ವಸಿಷ್ಠಸ್ಯ-ವಸಿಷ್ಠನ ಆಶ್ರಮಮ್-ಆಶ್ರಮವನ್ನು ಕುರಿತು ಜಗ್ಮತುಃ-ಹೋದರು.

ವಿಗ್ರಹವಾಕ್ಯಗಳು. ೧ ಪ್ರಯತಾ ಚ ಪ್ರಯತಶ್ಚ- ಪ್ರಯತೌ-(ಏ.ಶೇ). ೨ ಸಾ ಚ ಸ ಚ-ತೌ (ಏ. ಶೇ.). ೩ ಜಾಯಾ ಚ ಪತಿಶ್ಚ-ದಂಪತೀ(ದ್ವ.).

ವ್ಯಾಕರಣವಿಶೇಷ. ೧ ಪ್ರಯತೌ-ಎಂಬಲ್ಲಿ ಪುಂಸ್ತ್ರೀಲಿಂಗದಲ್ಲಿರುವ ಒಂದೇ ರೂಪದ ಎರಡು ಶಬ್ದಗಳು ಸಮಾಸವಾಗಿವೆ; ಇಂಥ ಸಂದರ್ಭದಲ್ಲಿ ಪುಲ್ಲಿಂಗವು ಉಳಿದುಕೊಳ್ಳುವದು; ತೌ ಎಂಬುದೂ ಹೀಗೆಯೆ. ೨ ಪುತ್ರಕಾಮ್ಯಯಾ-ಪುತ್ರಕಾಮ್ಯ ಎಂಬ ಧಾತುವಿಗೆ ಆಕಾರಪ್ರತ್ಯಯವು ಬಂದು ಆಮೇಲೆ ಸ್ತ್ರೀಲಿಂಗದ ಭಾವನಾಮವಾಗಿದೆ. ೩ ದಂಪತೀ ಇದು ನಿತ್ಯದ್ವಿವಚನ. ೪ ಜಗ್ಮತುಃ-ಗಮ್ಲ್‌ಗತೌ (ಗಮ್-ಗಚ್ಛ್-ಹೋಗು) ಎಂಬ ೧ನೆಯ ಗಣದ ಧಾತುವಿನ ಲಿಟ್. ಪ. ಪ್ರ. ದ್ವಿ.

ಸ್ನಿಗ್ಧಗಮ್ಭೀರನಿರ್ಘೋಷಮೇಕಂ ಸ್ಯನ್ದನಮಾಸ್ಥಿತೌ ।
ಪ್ರಾವೃಷೇಣ್ಯಂ ಪಯೋವಾಹಂ ವಿದ್ಯುದೈರಾವತಾವಿವ ॥೩೬॥

ಅನ್ವಯ. [ಸ್ನಿಗ್ಧಗಂಭೀರನಿರ್ಘೋಷಂ ಏಕಂ ಸ್ಯನ್ದನಂ ಪ್ರಾವೃಷೇಣ್ಯಂ ಪಯೋವಾಹಂ ವಿದ್ಯುದೈರಾವತಾವಿವ ಆಸ್ಥಿತೌ (ಜಗ್ಮತುಃ)]

ಅರ್ಥ. ಸ್ನಿಗ್ಧಗಂಭೀರನಿರ್ಘೋಷಂ-(ಸ್ನಿಗ್ಧ-ಇಂಪಾಗಿಯೂ ಗಂಭೀರ - ದೊಡ್ಡದಾಗಿಯೂ ಇರುವ ನಿರ್ಘೋಷಂ-ಧ್ವನಿಯುಳ್ಳ) ಇಂಪಾಗಿಯೂ ದೊಡ್ಡ ದಾಗಿಯೂ ಧ್ವನಿಗೈಯುತ್ತಿರುವ) ಏಕಂ-ಒಂದು ಸ್ಯನ್ದನಂ-ರಥವನ್ನು ಪ್ರಾವೃಷೇ ಣ್ಯಂ-ಮಳೆಗಾಲದ ಪಯೋವಾಹಂ-ಮೋಡವನ್ನು ವಿದ್ಯುದೈರಾವತಾವಿವ-ಮಿಂಚು, ಐರಾವತ ಇವುಗಳಂತೆ ಆಸ್ಥಿತೌ-ಏರಿದವರಾಗಿ [ಜಗ್ಮತುಃ - ಹೋದರು].

ವಿಗ್ರಹವಾಕ್ಯಗಳು. ೧ ಸ್ನಿಗ್ಧಶ್ಚಾಸೌ ಗಂಭೀರಶ್ಚ- ಸ್ನಿಗ್ಧಗಂಭೀರಃ (ವಿ.ಉ.ಕ); ಸ್ನಿಗ್ಧಗಂಭೀರಃ ನಿರ್ಘೋಷಃ ಯಸ್ಯ ಸಃ-ಸ್ನಿಗ್ಧಗಂಭೀರನಿರ್ಘೋಷಃ (ಷ. ಬ.). ೨ ಪ್ರಾವೃಷಿ ಭವಃ-ಪ್ರಾವೃಷೇಣ್ಯಃ (ತ. ವೃ.). ೩ ವಿದ್ಯುಚ್ಚ ಐರಾವತಶ್ಚ-ವಿದ್ಯುದೈರಾ ವತೌ.

ವ್ಯಾಕರಣವಿಶೇಷ. ಈ ಶ್ಲೋಕದಿಂದ ಹಿಡಿದು ೪೫ನೆಯ ಶ್ಲೋಕವು ಮುಗಿಯುವವರೆಗೆ ಇರುವ ದ್ವಿವಚನಗಳು ಹಿಂದಿನ ಶ್ಲೋಕದಲ್ಲಿರುವ 'ದಂಪತೀ' ಎಂಬುದರ ವಿಶೇಷಣವಾಗಿದೆ. ಜಗ್ಮತುಃ ಎಂಬ ಮಾತನ್ನು ಎಲ್ಲಕ್ಕೂ ಸೇರಿಸಿಕೊಳ್ಳಬೇಕು.

ವಿಚಾರ. ಐರಾವತವೆಂದರೆ ಒಂದು ಮೋಡದ ಮೇಲೆ ಏರಿರುವ ಮತ್ತೊಂದು ಮೋಡವೆಂದು ಒಬ್ಬ ವ್ಯಾಖ್ಯಾನಕಾರರು ಬರೆದಿರುತ್ತಾರೆ. ಐರಾ ವತವೆಂಬುದು ಇಂದ್ರನ ಆನೆಯೆಂದೂ ಇದು ಮೋಡಗಳಲ್ಲಿಯೆ ಸಂಚರಿಸು ತ್ತಿರುವದರಿಂದ ಇದಕ್ಕೆ 'ಅಭ್ರಮಾತಂಗ' (ಮೋಡದ ಆನೆ) ಎಂಬ ಹೆಸರೂ ಇರುವದೆಂದೂ ಇನ್ನು ಕೆಲವರು ವ್ಯಾಖ್ಯಾನಕಾರರು ಹೇಳುತ್ತಾರೆ. ಎರಡನೆಯ ಅರ್ಥದಲ್ಲಿ ಐರಾವತವೆಂಬ ಮಾತಿಗೆ ಹೀಗೆ ವ್ಯುತ್ಪತ್ತಿಯನ್ನು ಹೇಳುವರು: ಇರಾ ಅಸ್ಯಾಸ್ತೀತಿ-ಇರಾವಾನ್ (ನೀರುಳ್ಳದ್ದು, ಸಮುದ್ರ); ತಸ್ಮಿನ್-ಇರಾವತೀ; ಇರಾವತೀ ಭವಃ-ಐರಾವತಃ (ಸಮುದ್ರದಲ್ಲಿ ಹುಟ್ಟಿದ ಆನೆ)-ಇಲ್ಲಿ ರಥವನ್ನು ಮೋಡಕ್ಕೂ ಸುದಕ್ಷಿಣೆಯನ್ನು ಮಿಂಚಿಗೂ ದಿಲೀಪನನ್ನು ಐರಾವತಕ್ಕೂ ಕವಿಯು ಹೋಲಿಸಿರುತ್ತಾನೆ.

ಮಾ ಭೂದಾಶ್ರಮಪೀಡೇತಿ ಪರಿಮೇಯಪುರಸ್ಸರೌ ।
ಅನುಭಾವವಿಶೇಷಾತ್ತು ಸೇನಾಪರಿವೃತಾವಿವ ॥೩೭॥

ಅನ್ವಯ. [ಆಶ್ರಮಪೀಡಾ ಮಾಭೂತ್ ಇತಿ ಪರಿಮೇಯಪುರಸ್ಸರೌ ಅನುಭಾವವಿಶೇಷಾತ್ತು ಸೇನಾಪರಿವೃತಾವಿವ (ದಂಪತೀ ಜಗ್ಮತುಃ)]

ಅರ್ಥ. ಆಶ್ರಮಪೀಡಾ-ಆಶ್ರಮಕ್ಕೆ ತೊಂದರೆಯು ಮಾಭೂತ್-ಆಗಬಾರದು ಇತಿ-ಎಂದು ಪರಿಮೇಯಪುರಸ್ಸರೌ-(ಪರಿಮೇಯ- ಲೆಕ್ಕ ಮಾಡಬಹುದಾದಷ್ಟು ಪುರಸ್ಸರೌ-ಪರಿವಾರಗಳುಳ್ಳವರಾಗಿ) ಮಿತವಾದ ಪರಿಜನರೊಡಗೂಡಿ ಅನುಭಾವ ವಿಶೇಷಾತ್ತು-(ಅನುಭಾವ- ತೇಜಸ್ಸಿನ ವಿಶೇಷಾತ್ತು-ವಿಶೇಷದಿಂದಲಾದರೋ) ತಮ್ಮ ಪ್ರಭಾವದಿಂದಲೋ ಎಂದರೆ ಸೇನಾಪರಿವೃತಾವಿವ-ಸೇನೆಯಿಂದ ಸುತ್ತಲ್ಪಟ್ಟ ವರೋ ಎನ್ನುವಂತಿರುವ [ದಂಪತೀ-ದಂಪತಿಗಳು ಜಗ್ಮತುಃ-ಹೋದರು.]

ತಾತ್ಪರ್ಯ. ದೊಡ್ಡ ಸೇನೆಯೊಡನೆ ಹೊರಟರೆ ವಸಿಷ್ಠರ ಆಶ್ರಮಕ್ಕೆ ತೊಂದರೆಯಾದೀತೆಂದು ಅವರು ಕೆಲವು ಜನ ಪರಿಜನರನ್ನು ಮಾತ್ರ ಕರೆದುಕೊಂಡು ಬಂದಿದ್ದರು; ಆದರೂ ಅವರ ಪ್ರಭಾವವನ್ನು ನೋಡಿದರೆ ಅವರ ಸುತ್ತಲೂ ಸೇನೆ ಯಿರುವಂತೆಯೆ ತೋರುತ್ತಿತ್ತು.

ವಿಗ್ರಹವಾಕ್ಯಗಳು.

೧ ಆಶ್ರಮಸ್ಯ ಪೀಡಾ-ಆಶ್ರಮಪೀಡಾ ೨ ಪರಿಮಾತುಂ ಶಕ್ಯಾಃ-ಪರಿಮೇಯಾಃ (ಕೃ.ವೃ.); ಪರಿಮೇಯಾಃ ಪುರಸ್ಸರಾಃ ಯಯೋಃ ತೌ - ಪರಿಮೇಯಪುರಸ್ಸರೌ (ಷ.ಬ). ೩ ಅನುಗತೋ ಭಾವಃ- ಅನುಭಾವಃ (ಪ್ರಾ.ಸ) ಅನುಭಾವಸ್ಯ ವಿಶೇಷಃ- ಅನುಭಾವವಿಶೇಷಃ (ಷ.ತ.); ತಸ್ಮಾತ್-ಅನುಭಾವವಿಶೇಷಾತ್. ೪ ಸೇನಯಾ ಪರಿವೃತೌ - ಸೇನಾಪರಿವೃತೌ (ತೃ.ತ.).

ವ್ಯಾಕರಣವಿಶೇಷ. ೧ ಮಾ ಭೂತ್-ಬೇಡ ಎಂಬರ್ಥದ ಮಾಙ್ (ಮಾ) ಎಂಬ ಅವ್ಯಯವು ಸೇರಿದರೆ ಲುಙ್ ರೂಪವನ್ನುಪಯೋಗಿಸುವರು; ಈ ಸಂದರ್ಭದಲ್ಲಿ ಲುಙ್‌ರೂಪಕ್ಕೆ ಬರಬೇಕಾದ ಅಕಾರಾಗಮವು ಬರುವುದಿಲ್ಲ.

ಸೇವ್ಯಮಾನೌ ಸುಖಸ್ಪರ್ಶೈಃ ಶಾಲನಿರ್ಯಾಸಗನ್ಧಿಭಿಃ ।
ಪುಷ್ಪರೇಣೂತ್ಕಿರೈರ್ವಾತೈರಾಧೂತವನರಾಜಿಭಿಃ ॥೩೮॥

ಅನ್ವಯ. [ಸುಖಸ್ಪರ್ಶೈಃ ಶಾಲನಿರ್ಯಾಸಗನ್ಧಿಭಿಃ ಪುಷ್ಪರೇಣೂತ್ಕಿರೈಃ ಆಧೂತವನರಾಜಿಭಿಃ ವಾತೈಃ ಸೇವ್ಯಮಾನೌ ಜಗ್ಮತುಃ]

ಅರ್ಥ. ಸುಖಸ್ಪರ್ಶೈಃ-(ಸುಖ-ಹಿತಕರವಾದ ಸ್ಪರ್ಶೈಃ-ಸ್ಪರ್ಶವುಳ್ಳ) ತಂಪಾಗಿ ಬೀಸುವ ಶಾಲನಿರ್ಯಾಸಗನ್ಧಿಭಿಃ-(ಶಾಲ-ಶಾಲವೃಕ್ಷದ ನಿರ್ಯಾಸ-ರಸದ ಗಂಧಿಭಿಃ - ವಾಸನೆಯುಳ್ಳ) ಶಾಲವೆಂಬ ಮರದ ಹಾಲಿನ ವಾಸನೆಯಿಂದ ಕೂಡಿದವಾಗಿಯೂ ಪುಷ್ಪರೇಣೂತ್ಕಿರೈಃ-ಹೂವಿನ ಹುಡಿಯನ್ನು ಎರಚುವವುಗಳಾಗಿಯೂ ಆಧೂತವನರಾಜಿಭಿಃ- (ಆಧೂತ-ಸ್ವಲ್ಪ ಅಲ್ಲಾಡಿಸಲ್ಪಟ್ಟ ವನ-ವನವೃಕ್ಷಗಳ

ರಾಜಿಭಿಃ-ಸಾಲುಗಳುಳ್ಳ) ಕಾಡಿನಮರಗಳನ್ನು ಅಲುಗಾಡಿಸಿಕೊಂಡು ಬರುವವುಗಳಾಗಿಯೂ ಇರುವ ವಾತೈಃ - ಗಾಳಿಗಳಿಂದ ಸೇವ್ಯಮಾನೌ-ಸೇವಿಸಲ್ಪಡುವವರಾಗಿ [ಜಗ್ಮತುಃ-ಹೋದರು.]

ವಿಗ್ರಹವಾಕ್ಯಗಳು. ೧ ಸೇವ್ಯಮಾನಶ್ಚ ಸೇವ್ಯಮಾನಾ ಚ-ಸೇವ್ಯಮಾನೌ (ಏ. ಶೇ.). ೨ ಸುಖಃ ಸ್ಪರ್ಶಃ ಯೇಷಾಂ ತೇ-ಸುಖಸ್ಪರ್ಶಾಃ(ಷ. ಬ); ತೈಃ-ಸುಖಸ್ಪರ್ಶೈಃ. ೩ ಶಾಲಸ್ಯ ನಿರ್ಯಾಸಃ-ಶಾಲನಿರ್ಯಾಸಃ (ಷ. ತ); ಶಾಲನಿರ್ಯಾಸಸ್ಯ ಗನ್ಧಃ - ಶಾಲನಿರ್ಯಾಸಗನ್ಧಃ (ಷ. ತ.); ಶಾಲನಿರ್ಯಾಸಗನ್ಧಃ ಏಷಾಂ ಅಸ್ತೀತಿ -ಶಾಲನಿರ್ಯಾಸಗನ್ಧಿನಃ (ತ. ವೃ.); ತೈಃ- ಶಾಲನಿರ್ಯಾಸಗನ್ಧಿಭಿಃ. ೪ ಪುಷ್ಪಾಣಾಂ ರೇಣವಃ-ಪುಷ್ಪರೇಣವಃ (ಷ. ತ.); ತೇಷಾಂ-ಪುಷ್ಪರೇಣೂನಾಂ; ಉತ್ಕಿರನ್ತೀತಿ ಉತ್ಕಿರಾಃ (ಕೃ. ವೃ.); ಪುಷ್ಪರೇಣೂನಾಂ ಉತ್ಕಿರಾಃ-ಪುಷ್ಪರೇಣೂತ್ಕಿರಾಃ-(ಷ. ತ.); ತೈಃ-ಪುಷ್ಪರೇಣೂತ್ಕಿರೈಃ. ೫ ಆಧೂತಾಃ ವನರಾಜಯಃ ಯೈಃ ತೇ-ಆಧೂತವನರಾಜಯಃ (ತೃ. ಬ.); ತೈಃ-ಆಧೂತ ವನರಾಜಿಭಿಃ.

ವ್ಯಾಕರಣವಿಶೇಷ. ೧ ಸೇವ್ಯಮಾನೌ-ಪುಲ್ಲಿಂಗವೊಂದೇ ಉಳಿದುಕೊಂಡಿದೆ; ೩೫ನೆಯ ಶ್ಲೋಕದ (ಪು. ೩೫) ಟಿಪ್ಪಣಿ ನೋಡಿ. ೨ ಶಾಲನಿರ್ಯಾಸಗಂಧಿಭಿಃ - ಇದು ಇಕಾರಾನ್ತವಲ್ಲ; ಶಾಲನಿರ್ಯಾಸಸ್ಯ ಗಂಧಃ ಯೇಷಾಂ ತೇ-ಶಾಲನಿರ್ಯಾಸಗಂಧಯಃ ಎಂದು ವಿಗ್ರಹ ಮಾಡಕೂಡದು. ಗಂಧಶಬ್ದಕ್ಕೆ ಇಕಾರವು ಅಂತಾದೇಶವಾಗಬೇಕಾದರೆ ಉತ್, ಪೂತಿ, ಸು, ಸುರಭಿ ಎಂಬ ಶಬ್ದಗಳು ಪೂರ್ವಪದವಾಗಿರಬೇಕು, ಅಥವಾ ಗಂಧವೆಂದರೆ ಸ್ವಲ್ಪವೆಂಬ ಅರ್ಥವಿರಬೇಕು; ಇಲ್ಲದಿದ್ದರೆ ಉಪಮಾನವನ್ನು ಹೇಳುವ ಮಾತು ಪೂರ್ವಪದವಾಗಿರಬೇಕು. ೩ ಶಾಲ ಎಂಬುದಕ್ಕೆ ಸಾಲ ಎಂಬ ರೂಪವೂ ಉಂಟು. ೪ ಆಧೂತ-ಎಂಬಲ್ಲಿ ಆ ಎಂಬ ಉಪಸರ್ಗಕ್ಕೆ ಸ್ವಲ್ಪ ಎಂದರ್ಥ.

ವಿಚಾರ. ಗಾಳಿಯು ತಂಪಾಗಿಯೂ ಸುವಾಸನೆಯಾಗಿಯೂ ಮೆಲ್ಲಗೆ ಬೀಸುವದಾಗಿಯೂ ಇದ್ದರೆ ಹಿತಕರವು. ಈ ಮೂರು ಗುಣಗಳನ್ನು ವರ್ಣಿಸುವದು ಕವಿಸಮಯ (poetic convention). ಇಲ್ಲಿ 'ಶಾಲಮರದ ಹಾಲಿನವಾಸನೆಯುಳ್ಳ', 'ಹೂವಿನ ಧೂಳನ್ನು ಎರಚುವ'-ಎಂಬ ವಿಶೇಷಣಗಳು ಸುವಾಸನೆಯನ್ನು ಸೂಚಿಸುತ್ತವೆ; 'ಕಾಡಿನ ಮರಗಳನ್ನು ಸ್ವಲ್ಪ ಅಲ್ಲಾಡಿಸಿರುವ' ಎಂಬುದು ಮೆಲ್ಲಗೆ ಬೀಸುವದೆಂಬ ಗುಣವನ್ನು ತಿಳಿಸುತ್ತದೆ.

ಮನೋಽಭಿರಾಮಾಃ ಶೃಣ್ವನ್ತೌ ರಥನೇಮಿಸ್ವನೋನ್ಮುಖೈಃ ।
ಷಡ್ಜಸಂವಾದಿನೀಃ ಕೇಕಾ ದ್ವಿಧಾ ಭಿನ್ನಾಃ ಶಿಖಣ್ಡಿಭಿಃ ॥೩೯॥

ಅನ್ವಯ. [ರಥನೇಮಿಸ್ವನೋನ್ಮುಖೈಃ ಶಿಖಣ್ಡಿಭಿಃ ದ್ವಿಧಾ ಭಿನ್ನೈಃ

ಷಡ್ಜಸಂವಾದಿನೀಃ ಮನೋಽಭಿರಾಮಾಃ ಕೇಕಾಃ ಶೃಣ್ವನ್ತೌ (ಜಗ್ಮತುಃ)]

ಅರ್ಥ. ರಥನೇಮಿಸ್ವನೋನ್ಮುಖೈಃ-(ರಥ-ರಥದ ನೇಮಿ ಹಳಿಗಳ ಸ್ವನ - ಶಬ್ದದಿಂದ ಉನ್ಮುಖೈಃ-ಎತ್ತಿದ ಮುಖವುಳ್ಳ) ರಥದ ಚಕ್ರದ ಸದ್ದನ್ನು ಕೇಳಿ ಕತ್ತನ್ನು ಎತ್ತಿರುವ ಶಿಖಣ್ಡಿಭಿಃ-ನವಿಲುಗಳಿಂದ ದ್ವಿಧಾ- ಎರಡು ಬಗೆಯಾಗಿ ಭಿನ್ನೈಃ-ವಿಂಗಡವಾಗಿರುವ ಷಡ್ಜಸಂವಾದಿನೀಃ- ಷಡ್ಜದಂತೆ ಇರುವ ಮನೋಽಭಿ ರಾಮಾಃ-ಮನಸ್ಸನ್ನು ಎಳೆಯುವ ಕೇಕಾಃ- ಕೇಕಾಧ್ವನಿಗಳನ್ನು ಶೃಣ್ವನ್ತೌ-ಕೇಳುತ್ತಾ [ಜಗ್ಮತುಃ- ಹೋದರು]

ತಾತ್ಪರ್ಯ. ಅವರ ಗಾಡಿಯ ಚಕ್ರದ ಸದ್ದನ್ನು ಕೇಳಿದ ನವಿಲುಗಳು ಅದನ್ನು ಗುಡುಗೆಂದು ಭ್ರಮಿಸಿ ಕತ್ತುಗಳನ್ನೆತ್ತಿಕೊಂಡು ಗಟ್ಟಿಯಾಗಿ ಕೇಕೆಹಾಕು ತ್ತಿದ್ದವು. ಅವುಗಳ ಸ್ವರವು ಷಡ್ಜಸ್ವರದಂತೆ ಎರಡು ಬಗೆಯಾಗಿ ಕೇಳಬರುತ್ತಾ ಮನೋಹರವಾಗಿತ್ತು.

ವಿಗ್ರಹವಾಕ್ಯಗಳು. ೧ ಮನಸಃ ಅಭಿರಾಮಾಃ-ಮನೋಽಭಿರಾಮಾಃ. ೨ ಶೃಣ್ವತೀ ಚ ಶೃಣ್ವಂಶ್ಚ-ಶೃಣ್ವನ್ತೌ. (ಏ.ಶೇ). ೩ ರಥಸ್ಯ ನೇಮೀ ರಥನೇಮೀ (ಷ.ತ.); ತಯೋಃ-ರಥನೇಮ್ಯೋಃ; ರಥನೇಮ್ಯೋಃ ಸ್ವನಃ-ರಥನೇಮಿಸ್ವನಃ (ಷ. ತ.); ತೇನ-ರಥನೇಮಿಸ್ವನೇನ; ರಥನೇಮಿಸ್ವನೇನ ಉನ್ಮುಖೈಃ-ರಥನೇಮಿಸ್ವನೋ ನ್ಮುಖೈಃ (ತೃ.ತ.). ೪ ಷಡ್ಜೇನ ಸಂವಾದಿನ್ಯಃ-ಷಡ್ಜಸಂವಾದಿನ್ಯಃ (ತೃ.ತ.); ತಾಃ-ಷಡ್ಜಸಂವಾದಿನೀಃ ೫ ಶಿಖಣ್ಡಿನ್ಯಶ್ಚ ಶಿಖಣ್ಡಿನಶ್ಚ ಶಿಖಣ್ಡಿನಃ (ವಿ.ಶೇ.); ತೈಃ-ಶಿಖಣ್ಡಿಭಿಃ.

ವ್ಯಾಕರಣವಿಶೇಷ. ಶಿಖಣ್ಡಿಭಿಃ-ಎಂಬಲ್ಲಿ ಪುಲ್ಲಿಂಗವು ಮಾತ್ರ ಸಮಾಸದಲ್ಲಿ ಉಳಿದಿದೆ.

ವಿಚಾರ. ನಾಸಾಕಣ್ಠಮುರಸ್ತಾಲು ಜಿಹ್ವಾದನ್ತಾಂಶ್ಚ ಸಂಸ್ಪೃಶನ್ ।

ಷಡ್ಭ್ಯಃ ಸಂಜಾಯತೇ ಯಸ್ಮಾತ್ತಸ್ಮಾತ್ ಷಡ್ಜ ಇತಿ ಸ್ಮೃತಃ ॥

ಎಂದು ಹೇಳಿರುವಂತೆ ಷಡ್ಜಸ್ವರವು ಆರು ಸ್ಥಾನಗಳನ್ನು ಮುಟ್ಟಿ ಹುಟ್ಟುತ್ತದೆ; ಆದ್ದರಿಂದ ಷಡ್ಜ (ಆರು ಸ್ಥಾನಗಳಿಂದ ಹುಟ್ಟಿದ್ದು) ಎಂಬ ಹೆಸರು ಬಂತು. ನವಿಲುಗಳ ಧ್ವನಿಯು ಷಡ್ಜದ ಹಾಗೆ ಇರುವದೆಂದೂ ಷಡ್ಜದಲ್ಲಿ ಶುದ್ಧ, ವಿಕೃತ ಇಲ್ಲದಿದ್ದರೆ ಚ್ಯುತ, ಅಚ್ಯುತ-ಎಂಬದಾಗಿ ಎರಡು ಬಗೆಯೆಂದೂ ಸಂಗೀತಗಾರರು ಹೇಳುತ್ತಾರೆ. ನವಿಲುಗಳಲ್ಲಿ ಗಂಡು ಹೆಣ್ಣು ಬೇರೆ ಬೇರೆ ಬಗೆಯಾಗಿ ಕೂಗುತ್ತವೆ; ಆದ್ದರಿಂದ ಎರಡು ಬಗೆಯಾದ ಕೇಕಾಧ್ವನಿಗಳು ಎಂದು ಕವಿಯು ವರ್ಣಿಸಿರುತ್ತಾನೆ.

ಪರಸ್ಪರಾಕ್ಷಿಸಾದೃಶ್ಯಮದೂರೋಜ್ಝಿತವರ್ತ್ಮಸು ।
ಮೃಗದ್ವಂದ್ವೇಷು ಪಶ್ಯನ್ತೌ ಸ್ಯನ್ದನಾಬದ್ಧದೃಷ್ಟಿಷು ॥೪೦॥

ಅನ್ವಯ. [ಅದೂರೋಜ್ಝಿತವರ್ತ್ಮಸು ಸ್ಯನ್ದನಾಬದ್ಧದೃಷ್ಟಿಷು ಮೃಗ ದ್ವಂದ್ವೇಷು ಪರಸ್ಪರಾಕ್ಷಿಸಾದೃಶ್ಯಂ ಸಾದೃಶ್ಯಂ ಪಶ್ಯನ್ತೌ (ಜಗ್ಮತುಃ)]

ಅರ್ಥ. ಅದೂರೋಜ್ಝಿತವರ್ತ್ಮಸು-(ಅದೂರ-ಹತ್ತಿರದಲ್ಲಿಯೆ ಉಜ್ಝಿತ - ಬಿಡಲ್ಪಟ್ಟ ವರ್ತ್ಮಸು-ದಾರಿಗಳುಳ್ಳ) ದಾರಿಯನ್ನು ಬಿಟ್ಟು ಹತ್ತಿರವಾಗಿಯೇ ಇರುವ ಸ್ಯನ್ದನಾಬದ್ಧದೃಷ್ಟಿಷು-(ಸ್ಯನ್ದನ-ತೇರಿನಲ್ಲಿ ಆಬದ್ಧ-ಕಟ್ಟಿ ಹಾಕಲ್ಪಟ್ಟ ದೃಷ್ಟಿಷು - ಕಣ್ಣುಗಳುಳ್ಳ) ರಥವನ್ನೆ ನಿಟ್ಟಿಸಿ ನೋಡುತ್ತಿರುವ ಮೃಗದ್ವಂದ್ವೇಷು-(ಮೃಗ - ಜಿಂಕೆಗಳ ದ್ವಂದ್ವೇಷು-ಜೋಡಿಗಳಲ್ಲಿ) ಪರಸ್ಪರಾಕ್ಷಿಸಾದೃಶ್ಯಂ - (ಪರಸ್ಪರ-ಒಬ್ಬ ರೊಬ್ಬರ ಅಕ್ಷಿ-ಕಣ್ಣುಗಳ ಸಾದೃಶ್ಯಂ-ಹೋಲಿಕೆಯನ್ನು)ಒಬ್ಬರು ಮತ್ತೊಬ್ಬರ ಕಣ್ಣುಗಳ ಹೋಲಿಕೆಯನ್ನು ಪಶ್ಯನ್ತೌ-ಕಾಣುತ್ತಾ [ಜಗ್ಮತುಃ-ಹೋದರು.]

ತಾತ್ಪರ್ಯ. ರಥದ ದಾರಿಯ ಹತ್ತಿರದಲ್ಲಿಯೆ ಗಂಡು ಹೆಣ್ಣು ಜಿಂಕೆಗಳ ಹಿಂಡುಗಳು ನಿಂತಿದ್ದವು. ಹೆಣ್ಣು ಜಿಂಕೆಗಳ ಕಣ್ಣುಗಳು ಸುದಕ್ಷಿಣೆಯ ಕಣ್ಣಿ ನಂತಿವೆಯೆಂದು ದಿಲೀಪನೂ, ಗಂಡು ಜಿಂಕೆಗಳ ಕಣ್ಣುಗಳು ದಿಲೀಪನ ಕಣ್ಣಿ ನಂತಿವೆಯೆಂದು ಸುದಕ್ಷಿಣೆಯೂ ಕಂಡುಕೊಂಡರು.

ವಿಗ್ರಹವಾಕ್ಯಗಳು. ೧ ಪರಸ್ಪರಸ್ಯ ಅಕ್ಷಿಣೀ- ಪರಸ್ಪರಾಕ್ಷಿಣೀ (ಷ.ತ.); ತಯೋಃ - ಪರಸ್ಪರಾಕ್ಷ್ಣೋಃ; ಪರಸ್ಪರಾಕ್ಷ್ಣೋಃ ಸಾದೃಶ್ಯಂ- ಪರಸ್ಪರಾಕ್ಷಿ ಸಾದೃಶ್ಯಂ (ಷ.ತ.). ೨ ನ ದೂರಂ-ಅದೂರಮ್ (ಅ.ಸ.); ಅದೂರಂ ಉಜ್ಝಿತಂ-ಅದೂರೋಜ್ಝಿತಂ(ಸಾ.ಸ.); ಅದೂರೋಜ್ಝಿತಂ ವರ್ತ್ಮ ಯೈಃ ತಾನಿ-ಅದೂರೋಜ್ಝಿತವರ್ತ್ಮಾನಿ (ತೃ.ಬ.); ತೇಷು-ಅದೂರೋಜ್ಝಿತವರ್ತ ್ಮಸು. ೩ ಮೃಗ್ಯಶ್ಚ ಮೃಗಾಶ್ಚ-ಮೃಗಾಃ (ಏ.ಶೇ.); ತೇಷಾಂ-ಮೃಗಾಣಾಂ; ಮೃಗಾಣಾಂ ದ್ವಂದ್ವಾನಿ-ಮೃಗದ್ವಂದ್ವಾನಿ (ಷ.ತ.); ತೇಷು-ಮೃಗದ್ವಂದ್ವೇಷು. ೪ ಪಶ್ಯನ್ತೀ ಚ ಪಶ್ಯಂಶ್ಚ-ಪಶ್ಯನ್ತೌ (ಏ.ಶೇ). ೫ ಸ್ಯನ್ದನೇ ಆಬದ್ಧಾ-ಸ್ಯನ್ದನಾಬದ್ಧಾ (ಸ.ತ.); ಸ್ಯನ್ದನಾಬದ್ಧಾ ದೃಷ್ಟಿಃ ಯೈಸ್ತಾನಿ - ಸ್ಯನ್ದನಾಬದ್ಧದೃಷ್ಟೀನಿ (ತೃ.ಬ.); ತೇಷು-ಸ್ಯನ್ದನಾಬದ್ಧದೃಷ್ಟಿಷು.

ವ್ಯಾಕರಣವಿಶೇಷ. ೧ ಪರಸ್ಪರಾಕ್ಷಿಸಾದೃಶ್ಯಮ್-ಇದನ್ನು 'ಪರಸ್ಪರಾಕ್ಷಿಭ್ಯಾಂ ಸಾದೃಶ್ಯಂ' ಎಂದೂ ಬಿಡಿಸಬಹುದು (ತೃ.ತ.); ಹೋಲಿಕೆಯನ್ನು ಹೇಳುವ ಮಾತುಗಳಿಗೆ ಷಷ್ಠಿಯಾದರೂ ತೃ ತೀಯೆಯಾದರೂ ಬರುತ್ತದೆ. ೨ ಇಲ್ಲಿರುವ ಏಕಶೇಷಗಳಲ್ಲಿ ಪುಲ್ಲಿಂಗಶಬ್ದಗಳೇ ಉಳಿದುಕೊಂಡಿವೆ.

ಶ್ರೇಣೀಬನ್ಧಾದ್ವಿತನ್ವದ್ಭಿರಸ್ತಮ್ಭಾಂ ತೋರಣಸ್ರಜವ್ ।
ಸಾರಸೈಃ ಕಲನಿರ್ಹ್ರಾದೈಃ ಕ್ವಚಿದುನ್ನಮಿತಾನನೌ ॥೪೧॥

ಅನ್ವಯ. [ಶ್ರೇಣೀಬನ್ಧಾತ್ ಅಸ್ತಮ್ಭಾಂ ತೋರಣಸ್ರಜಂ ವಿತನ್ವದ್ಭಿಃ ಕಲನಿರ್ಹ್ರಾದೈಃ ಸಾರಸೈಃ ಕ್ವಚಿತ್ ಉನ್ನಮಿತಾನನೌ (ಜಗ್ಮತುಃ)]

ಅರ್ಥ. ಶ್ರೇಣೀಬನ್ಧಾತ್-(ಶ್ರೇಣೀ-ಸಾಲಿನ ಬಂಧಾತ್-ಕಟ್ಟುವಿಕೆಯ ಇಂದ) ಸಾಲು ಹಿಡಿದಿರುವದರಿಂದ ಅಸ್ತಮ್ಭಾಂ-ಕಂಬವಿಲ್ಲದ ತೋರಣಸ್ರಜಂ-(ತೋರಣ - ಹೊರಬಾಗಿಲಿನ ಸ್ರಜಂ-ಮಾಲೆಯನ್ನು) ತೋರಣದ ಸರವನ್ನು ವಿತನ್ವದ್ಭಿಃ-ಏರ್ಪಡಿಸುತ್ತಿರುವ ಕಲನಿರ್ಹ್ರಾದೈಃ-(ಕಲ - ಅವ್ಯಕ್ತಮಧುರವಾದ ನಿರ್ಹ್ರಾದೈಃ - ಧ್ವನಿಗಳುಳ್ಳ) ಇಂಪಾಗಿ ಸದ್ದು ಮಾಡುತ್ತಿರುವ ಸಾರಸೈಃ-ಸಾರಸ ಪಕ್ಷಿಗಳಿಂದ ಕ್ವಚಿತ್ - ಕೆಲವು ಕಡೆಗಳಲ್ಲಿ ಉನ್ನಮಿತಾನನೌ-(ಉನ್ನಮಿತ-ಮೇಲಕ್ಕೆ ಎತ್ತಲ್ಪಟ್ಟ ಆನನೌ - ಮುಖವುಳ್ಳವರಾಗಿ) ಕತ್ತುಗಳನ್ನು ಮೇಲಕ್ಕೆತ್ತಿಕೊಂಡು [ಜಗ್ಮತುಃ-ಹೋದರು.]

ತಾತ್ಪರ್ಯ. ಅಲ್ಲಲ್ಲಿ ಸಾರಸವೆಂಬ ಹಕ್ಕಿಗಳು ಇಂಪಾಗಿ ಕೂಗುತ್ತಾ ಕಟ್ಟಿದ ತೋರಣದ ಹಾಗೆ ಮಾಲೆಯಾಗಿ ಹಾರುತ್ತಿದ್ದವು; ಅವುಗಳನ್ನು ಆ ದಂಪತಿಗಳು ಕುತೂಹಲದಿಂದ ಕತ್ತೆತ್ತಿನೋಡುತ್ತಾ ಹೋಗುತ್ತಿದ್ದರು.

ವಿಗ್ರಹವಾಕ್ಯಗಳು. ೧ ಶ್ರೇಣ್ಯಾ ಬನ್ಧಃ-ಶ್ರೇಣೀಬನ್ಧಃ (ಷ.ತ.); ತಸ್ಮಾತ್ - ಶ್ರೇಣೀಬನ್ಧಾತ್. ೨ ನ ವಿದ್ಯತೇ ಸ್ತಂಭಃ ಯಸ್ಯಾಃ ಸಾ-ಅಸ್ತಂಭಾ (ಷ.ತ.); ತಾಂ - ಅಸ್ತಂಭಾಂ. ೩ ತೋರಣಸ್ಯ ಸ್ರಕ್-ತೋರಣಸ್ರಕ್ (ಷ.ತ); ತಾಂ-ತೋರಣ ಸ್ರಜಂ. ೪ ಕಲಃ ನಿರ್ಹ್ರಾದಃ ಯೇಷಾಂ ತೇ-ಕಲನಿರ್ಹ್ರಾದಾಃ (ಷ.ಬ); ತೈಃ - ಕಲನಿರ್ಹ್ರಾದೈಃ. ೫ ಉನ್ನಮಿತಂ ಆನನಂ ಯಯೋಃ ತೌ-ಉನ್ನಮಿತಾನನೌ (ಷ.ಬ.). ೬ ಉನ್ನಮಿತಾನನಾ ಚ ಉನ್ನಮಿತಾನನಶ್ಚ-ಉನ್ನಮಿತಾನನೌ (ಏ.ಶೇ.).

ವ್ಯಾಕರಣವಿಶೇಷ. ಸ್ರಕ್-ಜಕಾರಾನ್ತ ಸ್ತ್ರೀಲಿಂಗ.

ವಿಚಾರ. ತೋರಣಮಾಲೆಯ ಎರಡು ಕೊನೆಯಲ್ಲಿಯೂ ಕಂಬಗಳನ್ನು ನೆಟ್ಟಿರುತ್ತಾರಷ್ಟೆ; ಹಕ್ಕಿಗಳ ಮಾಲೆಗೆ ಅದಿಲ್ಲವಾದ್ದರಿಂದ ಕಂಬವಿಲ್ಲದ ತೋರಣ ಮಾಲೆಯನ್ನು ಹಕ್ಕಿಗಳು ಕಟ್ಟಿವೆಯೊ ಎನ್ನುವಂತಿತ್ತು-ಎಂದು ಕವಿಯು ಉತ್ಪ್ರೇಕ್ಷೆ ಮಾಡಿರುತ್ತಾನೆ.

ಪವನಸ್ಯಾನುಕೂಲತ್ವಾತ್ ಪ್ರಾರ್ಥನಾಸಿದ್ಧಿಶಂಸಿನಃ ।
ರಜೋಭಿಸ್ತುರಗೋತ್ಕೀರ್ಣೈರಸ್ಪೃಷ್ಟಾಲಕವೇಷ್ಟನೌ ॥೪೨॥

ಅನ್ವಯ. [ಪ್ರಾರ್ಥನಾಸಿದ್ಧಿಶಂಸಿನಃ ಪವನಸ್ಯ ಅನುಕೂಲತ್ವಾತ್ ತುರಗೋ

ತ್ಕೀರ್ಣೈಃ ರಜೋಭಿಃ ಅಸ್ಪೃಷ್ಟಾಲಕವೇಷ್ಟನೌ (ಜಗ್ಮತುಃ)]

ಅರ್ಥ. ಪ್ರಾರ್ಥನಾಸಿದ್ಧಿಶಂಸಿನಃ- (ಪ್ರಾರ್ಥನಾ-ಆಸೆಯ ಸಿದ್ಧಿ- ಕೈಗೂಡು ವಿಕೆಯನ್ನು ಶಂಸಿನಃ- ಸೂಚಿಸುತ್ತಿರುವ) ತಮ್ಮ ಆಸೆಯು ನೆರವೇರುವದೆಂದು ಸೂಚಿಸುತ್ತಿರುವ ಪವನಸ್ಯ-ಗಾಳಿಯ ಅನುಕೂಲತ್ವಾತ್- ಅನುಕೂಲವಾಗಿರೋಣ ದರಿಂದ ತುರಗೋತ್ಕೀರ್ಣೈಃ- (ತುರಗ- ಕುದುರೆಗಳಿಂದ ಉತ್ಕೀರ್ಣೈಃ- ಮೇಲಕ್ಕೆಬ್ಬಿ ಸಲ್ಪಟ್ಟ) ಕುದುರೆಗಳು ಎಬ್ಬಿಸಿದ ರಜೋಭಿಃ- ಧೂಳುಗಳಿಂದ ಅಸ್ಪೃಷ್ಟಾಲಕ ವೇಷ್ಟನೌ- (ಅಸ್ಪೃಷ್ಟ- ಮುಟ್ಟಲ್ಪಡದೆ ಇರುವ ಅಲಕ-ಮುಂಗುರುಳು ವೇಷ್ಟನೌ- ರುಮಾಲು ಇವುಗಳುಳ್ಳವರಾಗಿ) ಮುಂಗುರುಳಿಗೂ ರುಮಾಲಿಗೂ ಸೋಕು ಇಲ್ಲ ದವರಾಗಿ [ಜಗ್ಮತುಃ-ಹೋದರು.]

ತಾತ್ಪರ್ಯ. ಗಾಳಿಯು ಶುಭಸೂಚಕವಾಗಿ ಇವರು ಹೋಗುವ ಕಡೆಗೇ ಬೀಸುತ್ತಿದ್ದದ್ದರಿಂದ ಕುದುರೆಗಳ ಗೊರಸುಗಳಿಂದೆದ್ದ ಧೂಳು ಸುದಕ್ಷಿಣೆಯ ಮುಂಗುರುಳಿನ ಮೇಲಾಗಲಿ ದಿಲೀಪನ ರುಮಾಲಿನ ಮೇಲಾಗಲಿ ಕೂತುಕೊಳ್ಳು ತ್ತಿರಲಿಲ್ಲ.

ವಿಗ್ರಹವಾಕ್ಯಗಳು. ೧ ಅನುಕೂಲಸ್ಯ ಭಾವಃ-ಅನುಕೂಲತ್ವಂ (ತ. ವ್ಯ.); ತಸ್ಮಾತ್-ಅನುಕೂಲತ್ವಾತ್. ೨ ಪ್ರಾರ್ಥನಾಯಾಃ ಸಿದ್ಧಿಃ- ಪ್ರಾರ್ಥನಾಸಿದ್ಧಿಃ (ಷ. ತ.); ತಾಂ-ಪ್ರಾರ್ಥನಾಸಿದ್ಧಿಂ; ಪ್ರಾರ್ಥನಾಸಿದ್ಧಿಂ ಶಂಸತೀತಿ- ಪ್ರಾರ್ಥನಾ ಸಿದ್ಧಿಶಂಸೀ; (ಕೃ. ವ್ಯ.); ತಸ್ಯ-ಪ್ರಾರ್ಥನಾಸಿದ್ಧಿಶಂಸಿನಃ. ೩ ಅಲಕಾಶ್ಚ ವೇಷ್ಟನಂ ಚ-ಅಲಕವೇಷ್ಟನಾನಿ (ದ್ವ.); ಅಸ್ಪೃಷ್ಟಾನಿ ಅಲಕವೇಷ್ಟನಾನಿ ಯಯೋಸ್ತೌ- ಅಸ್ಪೃಷ್ಟಾಲಕವೇಷ್ಟನೌ.

ವ್ಯಾಕರಣವಿಶೇಷ. ೧ ಪವನಸ್ಯ ಅನುಕೂಲತ್ವಾತ್-ಎಂಬುದಕ್ಕೆ ಗಾಳಿಯ ಅನುಕೂಲವಾಗಿರು ವಿಕೆಯಿಂದ ಎಂಬುದು ಅಕ್ಷರಾರ್ಥವು; ಗಾಳಿಯು ಅನುಕೂಲವಾಗಿದ್ದದ್ದರಿಂದ ಎಂಬುದು ತಾತ್ಪರ್ಯವು. ಸಂ ಸ್ಕೃತದಲ್ಲಿ ಭಾವನಾಮಗಳ ಪಂಚಮಿಯನ್ನು ಹೀಗೆ ಷಷ್ಠಿಗೆ ಸೇರಿಸಿ ಉಪಯೋಗಿಸುವದು ಬಹಳ. ಉದಾ: ತಸ್ಯ ಗತತ್ವಾತ್=ಅವನು ಹೋದದ್ದರಿಂದ. ೨ ಅಲಕಾಃ ಎಂಬುದು ನಿತ್ಯಬಹುವಚನ.

ವಿಚಾರ. ಪ್ರಯಾಣದ ಮೇಲೆ ಹೊರಡುವಾಗ ಒಳ್ಳೆಯ ವಾಸನೆ ಬಂದರೆ, ಒಳ್ಳೆಯ ಶಬ್ದವು ಕೇಳಿದರೆ ಅಥವಾ ಗಾಳಿಯು ತಾನು ಹೊರಡುವ ಕಡೆಗೇ ಬೀಸುತ್ತಿದ್ದರೆ, ಹೊರಟ ಕಾರ್ಯವು ಕೈಗೂಡುವದು-ಎಂದು ಶಕುನಶಾಸ್ತ್ರದಲ್ಲಿ ಹೇಳಿದೆ.

ಸರಸೀಷ್ವರವಿನ್ದಾನಾಂ ವೀಚಿವಿಕ್ಷೋಭಶೀತಲಮ್ ।
ಆಮೋದಮುಪಜಿಘ್ರನ್ತೌ ಸ್ವನಿಃಶ್ವಾಸಾನುಕಾರಿಣಮ್ ॥೪೩॥

ಅನ್ವಯ. [ಸರಸೀಷು ವೀಚಿವಿಕ್ಷೋಭಶೀತಲಮ್ ಸ್ವನಿಃಶ್ವಾಸಾನುಕಾರಿಣಂ ಅರವಿನ್ದಾನಾಂ ಆಮೋದಂ ಉಪಜಿಘ್ರನ್ತೌ (ಜಗ್ಮತುಃ)]

ಅರ್ಥ. ಸರಸೀಷು-ಕೊಳಗಳಲ್ಲಿ ವೀಚಿವಿಕ್ಷೋಭಶೀತಲಮ್ (ವೀಚಿ-ಅಲೆಗಳ ವಿಕ್ಷೋಭ-ಹೊಡೆದಾಟದಿಂದ ಶೀತಲಂ-ತಣ್ಣಗಿರುವ) ಅಲೆಗಳು ಹೊಡೆದು ಹೊಡೆದು ತಂಪಾಗಿರುವದಾಗಿಯೂ ಸ್ವನಿಃಶ್ವಾಸಾನುಕಾರಿಣಂ- (ಸ್ವ-ತಮ್ಮ ನಿಶ್ವಾಸ - ಉಸಿರನ್ನು ಅನುಕಾರಿಣಂ-ಹೋಲುತ್ತಿರುವ) ತಮ್ಮ ಉಸಿರನ್ನು ಹೋಲುವದಾಗಿಯೂ ಇರುವ ಅರವಿನ್ದಾನಾಂ-ಕಮಲಗಳ ಆಮೋದಂ-ಸುವಾಸನೆಯನ್ನು ಉಪಜಿಘ್ರನ್ತೌ - ಮೂಸುತ್ತಾ [ಜಗ್ಮತುಃ-ಹೋಗುತ್ತಿದ್ದರು.]

ವಿಗ್ರಹವಾಕ್ಯಗಳು. ೧ ವೀಚೀನಾಂ ವಿಕ್ಷೋಭಃ-ವೀಚಿವಿಕ್ಷೋಭಃ (ಷ. ತ.); ತೇನ-ವೀಚಿವಿಕ್ಷೋಭೇನ; ವೀಚಿಚಿಕ್ಷೋಭೇನ ಶೀತಲಂ-ವೀಚಿವಿಕ್ಷೋಭಶೀತಲಂ (ತೃ. ತ.). ೨ ಉಪಜಿಘ್ರತೀ ಚ ಉಪಜಿಘ್ರಂಶ್ಚ-ಉಪಜಿಘ್ರನ್ತೌ (ಏ. ಶೇ.). ೩ ಸ್ವಯೋಃ ನಿಃಶ್ವಾಸಃ-ಸ್ವನಿಃಶ್ವಾಸಃ (ಷ. ತ.); ತಂ-ಸ್ವನಿಃಶ್ವಾಸಂ; ಸ್ವನಿಃಶ್ವಾಸಂ ಅನುಕರೋತೀತಿ-ಸ್ವನಿಃಶ್ವಾಸಾನುಕಾರೀ (ಕೃ. ವೃ.). ತಂ-ಸ್ವನಿಃಶ್ವಾಸಾನುಕಾರಿಣಂ.

ಗ್ರಾಮೇಷ್ವಾತ್ಮವಿಸೃಷ್ಟೇಷು ಯೂಪಚಿಹ್ನೇಷು ಯಜ್ವನಾಮ್ ।
ಅಮೋಘಾಃ ಪ್ರತಿಗೃಹ್ಣನ್ತಾವರ್ಘ್ಯಾನುಪದಮಾಶಿಷಃ ॥೪೪॥

ಅನ್ವಯ. [ಆತ್ಮವಿಸೃಷ್ಟೇಷು ಯೂಪಚಿಹ್ನೇಷು ಗ್ರಾಮೇಷು ಅಮೋಘಾಃ ಯಜ್ವನಾಂ ಆಶಿಷಃ ಅರ್ಘ್ಯಾನುಪದಂ ಪ್ರತಿಗೃಹ್ಣನ್ತೌ (ಜಗ್ಮತುಃ)]

ಅರ್ಥ. ಆತ್ಮವಿಸೃಷ್ಟೇಷು-(ಆತ್ಮ-ತಮ್ಮಿಂದ ವಿಸೃಷ್ಟೇಷು-ಕೊಡಲ್ಪಟ್ಟ) ತಾವು ದಾನಮಾಡಿರುವ ಯೂಪಚಿಹ್ನೇಷು- (ಯೂಪ-ಯೂಪಗಳೆ ಚಿಹ್ನೇಷು-ಗುರುತಾಗಿ ಉಳ್ಳ) ಯೂಪಸ್ತಂಭಗಳಿಂದ ಗುರುತಿಸಬಹುದಾದ ಗ್ರಾಮೇಷು-ಗ್ರಾಮಗಳಲ್ಲಿ ಅಮೋಘಾಃ-(ವ್ಯರ್ಥವಲ್ಲದ) ಸಫಲವಾದ ಯಜ್ವನಾಂ-ಯಾಗ ಮಾಡಿದವರ ಆಶಿಷಃ-ಆಶೀರ್ವಾದಗಳನ್ನು ಅರ್ಘ್ಯಾನುಪದಂ-ಅರ್ಘ್ಯವಾದ ಮೇಲೆ ಪ್ರತಿಗೃಹ್ಣನ್ತೌ- ತೆಗೆದುಕೊಳ್ಳುವವರಾಗಿ [ಜಗ್ಮತುಃ-ಹೋಗುತ್ತಿದ್ದರು.]

ತಾತ್ಪರ್ಯ. ತಾವು ದಾನಮಾಡಿದವುಗಳೆಂದು ಯೂಪಸ್ತಂಭಗಳಿಂದ ಗುರುತಿಸಬಹುದಾಗಿದ್ದ ಅನೇಕ ಗ್ರಾಮಗಳು ಅಲ್ಲಲ್ಲಿ ಕಾಣಬರುತ್ತಿದ್ದವು. ಅವುಗಳಲ್ಲಿ ಯಾಗವನ್ನು ಮಾಡಿದ ಬ್ರಾಹ್ಮಣರು ಇವರಿಗೆ ಸತ್ಕಾರಪೂರ್ವಕವಾಗಿ ಆಶೀರ್ವಾದ ಮಾಡುತ್ತಿದ್ದರು.

ವಿಗ್ರಹವಾಕ್ಯಗಳು. ಆತ್ಮನಾ ವಿಸೃಷ್ಟಾಃ-ಆತ್ಮವಿಸೃಷ್ಟಾಃ; ತೇಷು-ಆತ್ಮವಿಸೃ

ಷ್ಟೇಷು. ೨ ಯೂಪಾಃ ಚಿಹ್ನಾನಿ ಯೇಷಾಂ ತೇ-ಯೂಪಚಿಹ್ನಾಃ (ಷ.ಬ); ತೇಷು - ಯೂಪಚಿಹ್ನೇಷು. ೩ ನ ವೋಘಾಃ-ಅವೋಘಾಃ (ನ.ತ.); ತಾಃ-ಅವೋಘಾಃ ೪ ಅರ್ಘಾರ್ಥಮಿದಂ-ಅರ್ಘ್ಯಮ್ (ತ.ವೃ); ತಸ್ಯ-ಅರ್ಘ್ಯಸ್ಯ; ಪದಸ್ಯ ಪಶ್ಚಾತ್-ಅನುಪದಂ (ಅ.ಸ.); ಅರ್ಘ್ಯಸ್ಯ ಅನುಪದಂ-ಅರ್ಘ್ಯಾನುಪದಮ್ (ಷ.ತ).

ವ್ಯಾಕರಣವಿಶೇಷ. ೧ ತಾನು ಎಂಬ ಆತ್ಮಾರ್ಥಕಸರ್ವನಾಮದರ್ಥವನ್ನು (reflexive pronoun) ಸಂಸ್ಕೃತದಲ್ಲಿ ಆತ್ಮನ್,ಸ್ವ-ಎಂಬ ಶಬ್ದಗಳಿಂದ ತಿಳಿಸುತ್ತಾರೆ. ಆತ್ಮನ್‌ಶಬ್ದವನ್ನು ಈ ಅರ್ಥದಲ್ಲಿ ಏಕವಚನದಲ್ಲಿ ಮಾತ್ರವೆ ಉಪಯೋಗಿಸುತ್ತಾರೆ. ಉದಾ: ಸಾ ಕೃತಾಪರಾಧ ಮಿವಾತ್ಮಾನಮವಗಚ್ಛತಿ-ಆಕೆಯು ತಾನು ಅಪರಾಧಿಯೆಂದು ತಿಳಿದುಕೊಂಡಿದಾಳೆ; ಗೋಪಾಯನ್ತಿ ಕುಲಸ್ತ್ರಿಯ ಆತ್ಮಾನಂ-ಕುಲಸ್ತ್ರೀಯರು ತಮ್ಮನ್ನು ಕಾಪಾಡಿಕೊಳ್ಳುತ್ತಾರೆ. ೨ ಯಜ್ವನಾಮ್-ನಕಾರಾನ್ತ ಪುಲ್ಲಿಂಗ, ಶಾಸ್ತ್ರದಲ್ಲಿ ಹೇಳಿರುವಂತೆ ಯಜ್ಞಮಾಡಿದವನು ಎಂದು ಭೂತಾರ್ಥದಲ್ಲಿ ಡ್ವನಿಪ್ (ವನ್) ಪ್ರತ್ಯಯವು ಬಂದಿದೆ. ೩ ಆಶಿಷಃ-ಸಕಾರಾನ್ತ ಸ್ತ್ರೀಲಿಂಗ.

ವಿಚಾರ. ಯಜ್ಞದ ಪಶುವನ್ನು ಕಟ್ಟುವ ಕಂಬಕ್ಕೆ ಯೂಪವೆಂದು ಹೆಸರು.

ಹೈಯಙ್ಗವೀನಮಾದಾಯ ಘೋಷವೃದ್ಧಾನುಪಸ್ಥಿತಾನ್ ।
ನಾಮಧೇಯಾನಿ ಪೃಚ್ಛನ್ತೌ ವನ್ಯಾನಾಂ ಮಾರ್ಗಶಾಖಿನಾಮ್ ॥೪೫॥

ಅನ್ವಯ. [ಹೈಯಂಗವೀನಂ ಆದಾಯ ಉಪಸ್ಥಿತಾನ್ ಘೋಷವೃದ್ಧಾನ್ ವನ್ಯಾನಾಂ ಮಾರ್ಗಶಾಖಿನಾಂ ನಾಮಧೇಯಾನಿ ಪೃಚ್ಛನ್ತೌ (ಜಗ್ಮತುಃ)]

ಅರ್ಥ. ಹೈಯಂಗವೀನಂ-ಹಿಂದಿನ ದಿನವೇ ಹೊಸದಾಗಿ ಕಾಯಿಸಿದ ಹಸುವಿನ ತುಪ್ಪವನ್ನು ಆದಾಯ-ತೆಗೆದುಕೊಂಡು ಉಪಸ್ಥಿತಾನ್-ಬಂದಿರುವ ಘೋಷವೃದ್ಧಾನ್-ಗೊಲ್ಲರ ಹಟ್ಟಿಯ ಮುದುಕರನ್ನು ವನ್ಯಾನಾಂ-ಕಾಡಿನಲ್ಲಿದ್ದ ಮಾರ್ಗಶಾಖಿನಾಂ- ದಾರಿಯ ಮರಗಳ ನಾಮಧೇಯಾನಿ-ಹೆಸರುಗಳನ್ನು ಪೃಚ್ಛನ್ತೌ-ಕೇಳುತ್ತಾ [ಜಗ್ಮತುಃ-ಹೋಗುತ್ತಿದ್ದರು.]

ವಿಗ್ರಹವಾಕ್ಯಗಳು. ೧ ಗೋಃ ದೋಹಃ-ಗೋದೋಹಃ (ಷ.ತ); ಹ್ಯೋ ಭವಃ ಗೋದೋಹಃ-ಹ್ಯೋಗೋದೋಹಃ (ಸಾ.ಸ); ಹ್ಯೋಗೋದೋಹಸ್ಯ ವಿಕಾರಃ - ಹೈಯಂಗವೀನಮ್ (ತ.ವೃ.); ತತ್-ಹೈಯಂಗವೀನಮ್. ೨ ಘೋಷೇ ವೃದ್ಧಾಃ-ಘೋಷವೃದ್ಧಾಃ (ಸ.ತ.). ೩ ಪೃಚ್ಛನ್ತೀ ಚ ಪೃಚ್ಛಂಶ್ಚ-ಪೃಚ್ಛನ್ತೌ (ಏ.ಶೇ.). ೪ ವನೇ ಭವಾಃ-ವನ್ಯಾಃ (ತ.ವೃ.); ತೇಷಾಂ ವನ್ಯಾನಾಂ ೫ ಶಾಖಾ ಏಷಾಂ ಸನ್ತೀತಿ- ಶಾಖಿನಃ (ತ.ವೃ.) ಮಾರ್ಗೇ ಶಾಖಿನಃ-ಮಾರ್ಗಶಾಖಿನಃ

(ಸ.ತ.); ತೇಷಾಂ-ಮಾರ್ಗಶಾಖಿನಾಮ್.

ವ್ಯಾಕರಣವಿಶೇಷ. ೧ ಹ್ಯಃ-ಎಂಬುದು ನಿನ್ನೆ ಎಂಬರ್ಥದ ಅವ್ಯಯವು. ನಿನ್ನೆ ಕರೆದ ಹಾಲಿಗೆ ಹ್ಯೋಗೋದೋಹವೆಂದು ಹೆಸರು. ಹ್ಯೋಗೋದೋಹ ಎಂಬ ಶಬ್ದಕ್ಕೆ ಅದರ ವಿಕಾರ (ಆ ಹಾಲಿನಿಂದ ಮಾಡಿದ್ದು)ಎಂಬರ್ಥದಲ್ಲಿ ಖಞ್ (ಈನ) ಎಂಬ ಪ್ರತ್ಯಯವು ಬಂದಿರುತ್ತದೆ.

೨ ದುಹ್ ಯಾಚ್ ಪಚ್ ದಣ್ಡ್ ರುಧಿ ಪ್ರಚ್ಛಿ ಚಿ ಬ್ರೂ ಶಾಸು ಜಿ ಮಥ್ ಮುಷಾಂ ।
ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀಹೃಕೃಷ್ ವಹಾಮ್ ॥

ಈ ಶ್ಲೋಕದಲ್ಲಿ ಹೇಳಿರುವ ೧೫ ಧಾತುಗಳೂ ಅವುಗಳ ಅರ್ಥವುಳ್ಳ ಬೇರೆ ಧಾತುಗಳೂ ದ್ವಿಕರ್ಮಕ (verbs which take two objects); ಆದ್ದರಿಂದ ಈ ಶ್ಲೋಕದಲ್ಲಿ 'ಘೋಷವೃದ್ಧಾನ್ (indirect objects) ಮಾರ್ಗಶಾಖಿನಾಂ ನಾಮಧೇಯಾನಿ (direct object) ಪೃಚ್ಛನ್ತೌ' ಎಂದು ಪ್ರಚ್ಛಧಾತುವಿಗೆ ಎರಡು ಕರ್ಮಗಳು ಬಂದಿವೆ. ೩ ಘೋಷಸ್ಯ ವೃದ್ಧಾಃ-ಘೋಷವೃದ್ಧಾಃ (ಷ.ತ.) ಎಂದೂ ವಿಗ್ರಹಬಿಡಿಸಬಹುದು.

ವಿಚಾರ. ದಿಲೀಪನಲ್ಲಿ ಬ್ರಾಹ್ಮಣರು ಮಾತ್ರವೇ ಅಲ್ಲದೆ ಹಳ್ಳಿಯ ದನಕಾಯುವ ಜನರು ಕೂಡ ರಾಜಭಕ್ತಿಯುಳ್ಳವರಾಗಿದ್ದರೆಂಬುದನ್ನೂ ರಾಜನು ಎಲ್ಲರನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಆದರದಿಂದ ಕಾಣುತ್ತಿದ್ದನೆಂಬುದನ್ನೂ ಕವಿಯು ಇಲ್ಲಿ ಸೂಚಿಸಿರುತ್ತಾನೆ.

ಕಾಪ್ಯಭಿಖ್ಯಾ ತಯೋರಾಸೀದ್ವ್ರಜತೋಃ ಶುದ್ಧವೇಷಯೋಃ ।
ಹಿಮನಿರ್ಮುಕ್ತಯೋರ್ಯೋಗೇ ಚಿತ್ರಾಚನ್ದ್ರಮಸೋರಿವ ॥೪೬॥

ಅನ್ವಯ. [ವ್ರಜತೋಃ ಶುದ್ಧವೇಷಯೋಃ ತಯೋಃ ಹಿಮನಿರ್ಮುಕ್ತಯೋಃ ಚಿತ್ರಾಚಂದ್ರಮಸೋರಿವ ಯೋಗೇ ಕಾಪಿ ಅಭಿಖ್ಯಾ ಆಸೀತ್]

ಅರ್ಥ. ವ್ರಜತೋಃ-ಹೋಗುತ್ತಿರುವ ಶುದ್ಧವೇಷಯೋಃ-ಶುದ್ಧವಾದ ವಸ್ತ್ರಾಲಂಕಾರವುಳ್ಳ ತಯೋಃ-ಅವರಿಬ್ಬರಲ್ಲಿ ಹಿಮನಿರ್ಮುಕ್ತಯೋಃ-(ಹಿಮ-ಮಂಜಿನಿಂದ ನಿರ್ಮುಕ್ತ-ಬಿಡಲ್ಪಟ್ಟ) ಮಂಜಿನ ಮುಸುಕು ಹೋದ ಚಿತ್ರಾಚಂದ್ರಮಸೋರಿವ - ಚಿತ್ರಾನಕ್ಷತ್ರ ಮತ್ತು ಚಂದ್ರ ಇವರಿಬ್ಬರು ಹೇಗೋ ಹಾಗೆ ಯೋಗೇ-ಸಂಬಂಧವಾಗಲಾಗಿ ಕಾಪಿ-ಯಾವದೋ ಒಂದು ಬಗೆಯ ಅಭಿಖ್ಯಾ-ಹೊಳಪು ಆಸೀತ್-ಉಂಟಾಗಿತ್ತು.

ತಾತ್ಪರ್ಯ. ಚಳಿಗಾಲವು ಕಳೆದ ಮೇಲೆ ಚೈತ್ರಮಾಸದ ಹುಣ್ಣಿಮೆಯಲ್ಲಿ ಚಿತ್ರಾನಕ್ಷತ್ರವೂ ಪೂರ್ಣಚಂದ್ರನೂ ಕೂಡುವರಷ್ಟೆ; ಆಗ ಅವರು ಹೇಗೆ ಹೊಳೆಯುತ್ತಿರುವರೋ ಹಾಗೆ ಸುದಕ್ಷಿಣೆಯೂ ದಿಲೀಪನೂ ಶುಭ್ರವಾದ ಬಟ್ಟೆಗಳಿಂದ ಪ್ರಕಾಶಿಸುತ್ತಿದ್ದರು.

ವಿಗ್ರಹವಾಕ್ಯಗಳು. ೧ ವ್ರಜನ್ತೀ ಚ ವ್ರಜಂಶ್ಚ-ವ್ರಜನ್ತೌ (ಏ. ಶೇ.) ತಯೋಃ - ವ್ರಜತೋಃ ೨ ಶುದ್ಧಃ ವೇಷಃ ಯಯೋಸ್ತೌ-ಶುದ್ಧವೇಷೌ (ಷ. ಬ.) ತಯ ಒಃ-ಶುದ್ಧವೇಷಯೋಃ ೩ ಹಿಮೇನ ನಿರ್ಮುಕ್ತೌ-ಹಿಮನಿರ್ಮುಕ್ತೌ (ತೃ. ತ.); ತಯೋಃ-ಹಿಮನಿರ್ಮುಕ್ತಯೋಃ ೪ ಚಿತ್ರಾ ಚ ಚನ್ದ್ರಮಾಶ್ಚ ಚಿತ್ರಾಚನ್ದ್ರಮಸೌ (ದ್ವ.). ತಯೋಃ-ಚಿತ್ರಾಚಸ್ದ್ರಮಸೋಃ.

ವ್ಯಾಕರಣವಿಶೇಷ. ೧ ಕಾಪಿ-ಪ್ರಶ್ನಾರ್ಥಕಸರ್ವನಾಮಗಳಿಗೆ ಅಪಿ ಎಂಬ ಅವ್ಯಯವನ್ನು ಸೇರಿಸಿದರೆ 'ಇಂಥದ್ದೆಂದು ಗೊತ್ತಿಲ್ಲದ'. 'ಹೀಗೆಂದು ಹೇಳುವದಕ್ಕೆ ಬರದ' ಎಂಬ (indefinite) ಅರ್ಥವು ಬರುತ್ತದೆ. ಉದಾ: ಕೋಽಪಿ ಪುರುಷಃ=ಯಾವನೋ ಒಬ್ಬ ಮನುಷ್ಯನು; ಕಿಮಪಿ ಕಾರಣಂ=ಏನೋ ಒಂದು ಕಾರಣವು.

ತತ್ತದ್ಭೂಮಿಪತಿಃ ಪತ್ನ್ಯೈ ದರ್ಶಯನ್ ಪ್ರಿಯದರ್ಶನಃ ।
ಅಪಿ ಲಙ್ಘಿತಮಧ್ವಾನಂ ಬುಬುಧೇ ನ ಬುಧೋಪಮಃ ॥೪೭॥

ಅನ್ವಯ. [ಪ್ರಿಯದರ್ಶನಃ ಬುಧೋಪಮಃ ಭೂಮಿಪತಿಃ ಪತ್ನ್ಯೈ ತತ್ತತ್ ದರ್ಶಯನ್ ಲಙ್ಘಿತ ಅಧ್ವಾನಮಪಿ ನ ಬುಬುಧೇ]

ಅರ್ಥ. ಪ್ರಿಯದರ್ಶನಃ-(ಪ್ರಿಯ-ಸಂತೋಷವನ್ನುಂಟುಮಾಡುವ ದರ್ಶನಃ - ನೋಟವುಳ್ಳ) ನೋಡಲು ಸಂತೋಷವಾಗುವ ಬುಧೋಪಮಃ-ಬುಧನಿಗೆ ಸಮನೆನಿಸಿರುವ ಭೂಮಿಪತಿಃ-ರಾಜನು ಪತ್ನ್ಯೈ-ಹೆಂಡತಿಗೆ ತತ್ತತ್-ಅದದನ್ನು ದರ್ಶಯನ್- ತೋರಿಸುತ್ತಾ ಲಙ್ಘಿತ-ದಾಟಲ್ಪಟ್ಟಿರುವ ಅಧ್ವಾನಮಪಿ-ದಾರಿಯನ್ನೆ ನ ಬುಬುಧೇ-ತಿಳಿಯಲಿಲ್ಲ

ತಾತ್ಪರ್ಯ. ದಿಲೀಪನು ದಾರಿಯಲ್ಲಿರುವ ಆಶ್ಚರ್ಯಕರವಾದ ಬಗೆಬಗೆಯ ವಸ್ತುಗಳನ್ನು ಸುದಕ್ಷಿಣೆಗೆ ತೋರಿಸುತ್ತಾ ಹೋದದ್ದರಿಂದ ಅವನಿಗೆ ದಾರಿಯೆಲ್ಲ ಕಳೆದು ಹೋಯಿತೆಂಬುದು ಮನಸ್ಸಿಗೆ ಗೊತ್ತಾಗಲೇ ಇಲ್ಲ.

ವಿಗ್ರಹವಾಕ್ಯಗಳು. ೧ ಭೂಮ್ಯಾಃ ಪತಿಃ-ಭೂಮಿಪತಿಃ (ಷ. ತ.). ೨ ಪ್ರಿಯಂ ದರ್ಶನಂ ಯಸ್ಯ ಸಃ-ಪ್ರಿಯದರ್ಶನಃ (ಷ. ತ.). ೩ ಬುಧಃ ಉಪಮಾ ಯಸ್ಯ ಸಃ ಬುಧೋಪಮಃ (ಷ. ತ.).

ವ್ಯಾಕರಣವಿಶೇಷ. ೧ ಪತಿಶಬ್ದವು ಸಮಾಸದ ಕೊನೆಯಲ್ಲಿದ್ದರೆ ಹರಿಶಬ್ದದಂತೆ ನಡೆಯುವದು; ಇಲ್ಲದಿದ್ದರೆ ಇದಕ್ಕೆ ಪತ್ಯಾ, ಪತ್ಯೇ, ಪತ್ಯುಃ, ಪತ್ಯುಃ, ಪತ್ಯೌ-ಎಂಬ ವಿಶೇಷ ರೂಪಗಳು ಏಕವಚನದಲ್ಲಿ ಬರುತ್ತವೆ. ೨ ಬುಬುಧೇ-ಬುಧಅವಗಮನೇ (ಬುಧ್-ತಿಳಿ) ಎಂಬ ೪ ನೆಯ ಗಣದ ಧಾತುವಿನ ಲಿಟ್, ಆ.ಪ್ರ.ಏ.

ವಿಚಾರ. ಬುಧನು ಪ್ರಜ್ಞಾಕಾರಕನೆಂದು ಜ್ಯೋತಿಷಶಾಸ್ತ್ರದಲ್ಲಿ ಹೇಳಿದೆ. ದಿಲೀಪನಿಗೆ ಬುಧನ ಹೋಲಿಕೆಯನ್ನು ಕವಿಯು ಏತಕ್ಕೆ ಕೊಟ್ಟಿರುವನೆಂಬುದು ಸ್ಪಷ್ಟವಾಗುವದಿಲ್ಲ. ದಾರಿಯಲ್ಲಿರುವ ಆಶ್ಚರ್ಯಗಳನ್ನೆಲ್ಲ ತಾನು ತಿಳಿದಿದ್ದನೆಂಬುದನ್ನು ತೋರಿಸುವದಕ್ಕೆ ಈ ವಿಶೇಷಣವನ್ನು ಕೊಟ್ಟಿದೆಯೆಂದು ಮಲ್ಲಿನಾಥವ್ಯಾಖ್ಯಾನದಲ್ಲಿದೆ; ಬುಧನಂತೆ ತಿಳಿಯಬಲ್ಲವನಾದರೂ ದಾರಿಯನ್ನು ತಿಳಿಯಲಿಲ್ಲ-ಎಂದು ವಿರೋಧಾಭಾಸ(paradox)ವನ್ನು ಕವಿಯು ಉಪಯೋಗಿಸಿರುತ್ತಾನೆಂದು ಮತ್ತೊಂದು ವ್ಯಾಖ್ಯಾನದಲ್ಲಿದೆ. ದಾರಿಯು ಬೇಗನೆ ಸಾಗಿತು ಎಂಬುದು ಶ್ಲೋಕದ ಒಟ್ಟು ಆಶಯವು.

ಸ ದುಷ್ಪ್ರಾಪಯಶಾಃ ಪ್ರಾಪದಾಶ್ರಮಂ ಶ್ರಾನ್ತವಾಹನಃ ।
ಸಾಯಂ ಸಂಯಮಿನಸ್ತಸ್ಯ ಮಹರ್ಷೇರ್ಮಹಿಷೀಸಖಃ ॥೪೮॥

ಅನ್ವಯ. [ದುಷ್ಪ್ರಾಪಯಶಾಃ ಶ್ರಾನ್ತವಾಹನಃ ಮಹಿಷೀಸಖಃ ಸಃ ಸಾಯಂ ಸಂಯಮಿನಃ ತಸ್ಯ ಮಹರ್ಷೇಃ ಆಶ್ರಮಂ ಪ್ರಾಪತ್]

ಅರ್ಥ. ದುಷ್ಪ್ರಾಪಯಶಾಃ-(ದುಷ್ಪ್ರಾಪ-ಪಡೆಯಲಶಕ್ಯವಾದ ಯಶಾಃ - ಕೀರ್ತಿಯುಳ್ಳ) ಮತ್ತೊಬ್ಬರಿಗೆ ಸಿಗಲಾರದಂಥ ಕೀರ್ತಿಯುಳ್ಳ ಶ್ರಾನ್ತವಾಹನಃ - (ಶ್ರಾನ್ತ - ದಣಿದ ವಾಹನಃ-ವಾಹನಗಳುಳ್ಳ) ದಣಿದಿರುವ ಕುದುರೆಗಳುಳ್ಳ ಮಹಿಷೀಸಖಃ-ಹೆಂಡತಿಯೊಡನಿರುವ ಸಃ-ಆತನು ಸಾಯಂ-ಸಂಜೆಯ ವೇಳೆಗೆ ಸಂಯಮಿನಃ - ನಿಯಮವಂತನಾದ ತಸ್ಯ-ಆ ಮಹರ್ಷೇಃ-ಮಹರ್ಷಿಯ ಆಶ್ರಮಂ - ಆಶ್ರಮವನ್ನು ಪ್ರಾಪತ್-ಸೇರಿದನು.

ತಾತ್ಪರ್ಯ. ಆ ರಾಜನು ಸಾಯಂಕಾಲದ ಹೊತ್ತಿಗೆ ಹೆಂಡತಿಯೊಡನೆ ವಸಿಷ್ಠಮಹರ್ಷಿಗಳ ಆಶ್ರಮವನ್ನು ಮುಟ್ಟಿದನು. ಬಲು ದೂರವಾಗಿ ನಡೆದಿದ್ದ ಆತನ ಕುದುರೆಗಳು ದಣಿದಿದ್ದವು.

ವಿಗ್ರಹವಾಕ್ಯಗಳು. ೧ ದುಃಖೇನಾಪಿ ಪ್ರಾಪ್ತುಂ ಅಶಕ್ಯಂ-ದುಷ್ಪ್ರಾಪಂ (ಕೃ.ವೃ.); ದುಷ್ಪ್ರಾಪಂ ಯಶಃ ಯಸ್ಯ ಸಃ-ದುಷ್ಪ್ರಾಪಯಶಾಃ (ಷ.ಬ.). ೨ ಶ್ರಾನ್ತಾನಿ ವಾಹನಾನಿ ಯಸ್ಯ ಸಃ-ಶ್ರಾನ್ತವಾಹನಃ (ಷ.ಬ.). ೩ ಸಂಯಮಃ ಅಸ್ಯಾಸ್ತೀತಿ-ಸಂಯಮೀ (ತ.ವೃ.); ತಸ್ಯ-ಸಂಯಮಿನಃ. ೪ ಮಹಾಂಶ್ಚಾಸೌ ಋಷಿಶ್ಚ-ಮಹರ್ಷಿಃ (ವಿ.ಪೂ.ಕ.) ತಸ್ಯ-ಮಹರ್ಷೇಃ. ೫ ಮಹಿಷ್ಯಾಃ ಸಖಾಃ-ಮಹಿಷೀಸಖಃ.

ವ್ಯಾಕರಣವಿಶೇಷ. ೧ ದುಷ್ಪ್ರಾಪಯಶಾಃ-ಸಕಾರಾನ್ತ ಪುಲ್ಲಿಂಗ. ೨ ಸಾಯಮ್ -

ಮಕಾರಾನ್ತ ಅವ್ಯಯ. ೩ ಮಹಿಷೀಸಖಃ-ಸಖಿಶಬ್ದಕ್ಕೆ ತತ್ಪುರುಷಸಮಾಸದಲ್ಲಿ ಟಚ್ (ಅ) ಪ್ರತ್ಯಯವು ಬಂದಿದೆ. ರಾಜನ್,ಅಹನ್, ಸಖಿ-ಈ ಶಬ್ದಗಳು ತತ್ಪುರುಷಸಮಾಸದ ಕೊನೆಯಲ್ಲಿ ಬಂದರೆ ಈ ಪ್ರತ್ಯಯವು ಬರುವದು. ಮಹಿಷೀಸಖಃ-ಇದಕ್ಕೆ ಅರಸಿಯ ಗೆಳೆಯನೆಂದು ಅಕ್ಷರಾರ್ಥ; ಇಲ್ಲಿ ಹೆಂಡತಿಯೊಡನಿರುವವನು ಎಂಬುದು ತಾತ್ಪರ್ಯ. ೪ ಪ್ರಾಪತ್-ಆಪ್ಲ್ವ್ಯಾಪ್ತೌ (ಆಪ್-ಹೊಂದು, ಹಬ್ಬು) ಎಂಬರ್ಥದ ೫ನೆಯ ಗಣದ ಧಾತುವಿಗೆ ಪ್ರ ಎಂಬ ಉಪಸರ್ಗವು ಸೇರಿದೆ; ಲುಙ್. ಪ.ಪ್ರ.ಏ.

ವನಾನ್ತರಾದುಪಾವೃತ್ತೈಃ ಸಮಿತ್ಕುಶಫಲಾಹರೈಃ ।
ಪೂರ್ಯಮಾಣಮದೃಶ್ಯಾಗ್ನಿಪ್ರತ್ಯುದ್ಯಾತೈಸ್ತಪಸ್ವಿಭಿಃ ॥೪೯॥

ಅನ್ವಯ. [ವನಾನ್ತರಾತ್ ಉಪಾವೃತ್ತೈಃ ಸಮಿತ್ಕುಶಫಲಾಹರೈಃ ಅದೃಶ್ಯಾಗ್ನಿಪ್ರತ್ಯುದ್ಯಾತೈಃ ತಪಸ್ವಿಭಿಃ ಪೂರ್ಯಮಾಣಂ (ಆಶ್ರಮಂ ಪ್ರಾಪತ್)]

ಅರ್ಥ. ವನಾನ್ತರಾತ್-ಇನ್ನೊಂದು ವನದಿಂದ ಉಪಾವೃತ್ತೈಃ-ಹಿಂತಿರುಗಿರುವ ಸಮಿತ್ಕುಶಫಲಾಹರೈಃ-ಅರಳಿಯ ಕಡ್ಡಿ, ದರ್ಭೆ, ಹಣ್ಣು- ಇವುಗಳನ್ನು ತರುತ್ತಿರುವ ಅದೃಶ್ಯಾಗ್ನಿಪ್ರತ್ಯುದ್ಯಾತೈಃ- (ಅದೃಶ್ಯ-ಕಾಣುವದಕ್ಕೆ ಆಗದೆ ಇರುವ ಅಗ್ನಿ-ಅಗ್ನಿಗಳಿಂದ ಪ್ರತ್ಯುದ್ಯಾತೈಃ-ಎದುರುಗೊಳ್ಳಲ್ಪಟ್ಟ) ಅಗ್ನಿಗಳು ಅದೃಶ್ಯವಾಗಿ ಬಂದು ಎದುರುಗೊಳ್ಳುತ್ತಿರುವ ತಪಸ್ವಿಭಿಃ-ತಪಸ್ವಿಗಳಿಂದ ಪೂರ್ಯಮಾಣಂ-ತುಂಬಲ್ಪಡುವ [ಆಶ್ರಮಂ ಪ್ರಾಪತ್]

ತಾತ್ಪರ್ಯ. ಬಹುಜನ ಋಷಿಗಳು ಆ ಆಶ್ರಮಕ್ಕೆ ಬೇರೆ ವನದಿಂದ ಸಮಿತ್ತು, ದರ್ಭೆ, ಹಣ್ಣು ಇವುಗಳನ್ನು ತೆಗೆದುಕೊಂಡು ತಂಡತಂಡವಾಗಿ ಬರುತ್ತಿದ್ದರು. ಅವರನ್ನು ಅಗ್ನಿಗಳು ತಾವು ಮತ್ತೊಬ್ಬರಿಗೆ ಕಾಣಿಸಿಕೊಳ್ಳದೆ ಎದುರುಗೊಳ್ಳುತ್ತಿದ್ದವು.

ವಿಗ್ರಹವಾಕ್ಯಗಳು. ೧ ಅನ್ಯತ್ ವನಂ-ವನಾನ್ತರಂ (ಮ.ವ್ಯ.); ತಸ್ಮಾತ್-ವನಾನ್ತರಾತ್. ೨ ಸಮಿಧಶ್ಚ ಕುಶಾಶ್ಚ ಫಲಾನಿ ಚ - ಸಮಿತ್ಕುಶಫಲಮ್ (ಸ.ದ್ವ.) ತಸ್ಯ ಸಮಿತ್ಕುಶಫಲಸ್ಯ; ಸಮಿತ್ಕುಶಫಲಸ್ಯ ಆಹರಾಃ-ಸಮಿತ್ಕುಶಫಲಾಹರಾಃ (ಷ.ತ); ತೈಃ-ಸಮಿತ್ಕುಶಫಲಾಹರೈಃ. ೩ ದ್ರಷ್ಟುಂ ಶಕ್ಯಾಃ-ದೃಶ್ಯಾಃ (ಕೃ.ವೃ.); ನ ದೃಶ್ಯಾಃ. ಅದೃಶ್ಯಾಃ(ನ.ತ.); ಅದೃಶ್ಯಾಶ್ಚ ತೇ ಅಗ್ನಯಶ್ಚ-ಅದೃಶ್ಯಾಗ್ನಯಃ (ವಿ.ಪೂ.ಕ); ತೈಃ-ಅದೃಶ್ಯಾಗ್ನಿಭಿಃ; ಅದೃಶ್ಯಾಗ್ನಿಭಿಃ ಪ್ರತ್ಯುದ್ಯಾತಾಃ-ಅದೃಶಾಗ್ನಿಪ್ರತ್ಯುದ್ಯಾತಾಃ (ತೃ.ತ.); ತೈಃ-ಅದೃಶ್ಯಾಗ್ನಿಪ್ರತ್ಯುದ್ಯಾತೈಃ. ೪ ತಪಃ ಏಷಾಂ ಅಸ್ತೀತಿ - ತಪಸ್ವಿನಃ (ತ.ವೃ.); ತೈಃ-ತಪಸ್ವಿಭಿಃ.

ವ್ಯಾಕರಣವಿಶೇಷ. ೧ ವನಾನ್ತರಂ-ನಿತ್ಯಸಮಾಸ, ಸ್ವಪದವಿಗ್ರಹವಿಲ್ಲ. ೨ ಪ್ರಾಣಿಗಳಲ್ಲದ

ಜಾತಿವಾಚಕಶಬ್ದಗಳು ಬಹುವಚನದಲ್ಲಿದ್ದರೆ ಅವುಗಳನ್ನು ಸೇರಿಸುವಾಗ ಸಮಾಹಾರದ್ವಂದ್ವವಾಗುತ್ತವೆ. ೩ ಆಹರ್ಯೈಃ - ಹೃಧಾತುವಿಗೆ ಆ ಎಂಬ ಉಪಸರ್ಗವು ಸೇರಿರುವಾಗ ತಾಚ್ಛೀಲ್ಯ (habit) ವನ್ನು ಹೇಳುವದಕ್ಕೆ ಅಚ್ (ಅ) ಪ್ರತ್ಯಯವು ಬಂದು 'ಹರ' ಎಂಬ ರೂಪವಾಗುವದು; ತಾಚ್ಛೀಲ್ಯವೆಂಬ ಅರ್ಥವಿಲ್ಲದಿದ್ದರೆ 'ಹಾರಃ' ಎಂಬ ರೂಪವಾಗುವದು. ಉದಾ: ಭಾರಾಹಾರಃ=ಹೊರೆಯನ್ನು ಹೊತ್ತು ತರುವವನು. ೪ ತಪಸ್ವಿಭಿಃ-ವಿನ್ ಪ್ರತ್ಯಯ ಬಂದಿದೆ; ೩೨ನೆಯ ಶ್ಲೋಕದ ೨ನೆಯ ಟಿಪ್ಪಣಿಯನ್ನು (ಪು. ೩೩) ನೋಡಿ.

ವಿಚಾರ. ಹಿಂದಿನ ಶ್ಲೋಕದಿಂದ ೫೩ನೆಯ ಶ್ಲೋಕವು ಮುಗಿಯುವವರೆಗೂ ಒಂದೇ ವಾಕ್ಯ; ಇಲ್ಲಿರುವ ದ್ವಿತೀಯೆಗಳು ಆಶ್ರಮದ ವಿಶೇಷಣಗಳು. 'ಆಶ್ರಮಂ ಪ್ರಾಪತ್' ಎಂಬ ಮಾತುಗಳನ್ನು ಸೇರಿಸಿ ಅನ್ವಯಮಾಡಿಕೊಳ್ಳಬೇಕು. ಅಗ್ನಿಯನ್ನಿಟ್ಟು ಹೋಮಮಾಡುವವರು ಹೊರಗೆ ಹೋಗಿ ಹಿಂತಿರುಗಿದಾಗ ತಂದೆಯನ್ನು ಮಕ್ಕಳು ಎದುರುಗೊಳ್ಳುವ ಹಾಗೆ ಅಗ್ನಿಗಳು ಅವರನ್ನು ಎದುರುಗೊಳ್ಳುತ್ತವೆಯೆಂದು ವೇದದಲ್ಲಿದೆ.

ಆಕೀರ್ಣಮೃಷಿಪತ್ನೀನಾಮುಟಜದ್ವಾರರೋಧಿಭಿಃ ।
ಅಪತ್ಯೈರಿವ ನೀವಾರಭಾಗಧೇಯೋಚಿತೈರ್ಮೃಗೈಃ ॥೫೦॥

ಅನ್ವಯ. [ನೀವಾರಭಾಗಧೇಯೋಚಿತೈಃ ಉಟಜದ್ವಾರರೋಧಿಭಿಃ ಮೃಗೈಃ ಋಷಿಪತ್ನೀನಾಂ ಅಪತ್ಯೈರಿವ ಆಕೀರ್ಣಂ (ಆಶ್ರಮಂ ಪ್ರಾಪತ್)]

ಅರ್ಥ. ನೀವಾರಭಾಗಧೇಯೋಚಿತೈಃ - (ನೀವಾರ-ನೀವಾರಧಾನ್ಯದ ಭಾಗಧೇಯ-ಭಾಗಕ್ಕೆ ಉಚಿತೈಃ-ಯೋಗ್ಯಗಳಾದ) ತಂದ ನೀವಾರಧಾನ್ಯದಲ್ಲಿ ಸ್ವಲ್ಪ ಭಾಗವನ್ನು ತಿನ್ನುವ ಅಭ್ಯಾಸವುಳ್ಳ ಉಟಜದ್ವಾರರೋಧಿಭಿಃ - (ಉಟಜ - ಎಲೆಮನೆಗಳ ದ್ವಾರ-ಬಾಗಿಲುಗಳನ್ನು ರೋಧಿಭಿಃ-ಅಡ್ಡಿಪಡಿಸಿರುವ) ಪರ್ಣಶಾಲೆಗಳ ಬಾಗಿಲುಗಳಿಗೆ ಅಡ್ಡವಾಗಿ ನಿಂತಿರುವ ಮೃಗೈಃ-ಜಿಂಕೆಗಳಿಂದ ಋಷಿಪತ್ನೀನಾಂ-ಋಷಿಗಳ ಹೆಂಡಿರ ಅಪತ್ಯೈರಿವ-ಮಕ್ಕಳಿಂದಲೋ ಎಂಬಂತೆ ಆಕೀರ್ಣಂ- ಕಿಕ್ಕಿರಿಯಲ್ಪಟ್ಟಿರುವ [ಆಶ್ರಮಂ ಪ್ರಾಪತ್.]

ತಾತ್ಪರ್ಯ. ಆ ಆಶ್ರಮದಲ್ಲಿ ಋಷಿಗಳು ಕೂಡಿಸಿಟ್ಟಿದ್ದ ನೀವಾರ ಧಾನ್ಯದಲ್ಲಿ ಜಿಂಕೆಗಳಿಗೂ ಸ್ವಲ್ಪವನ್ನು ಹಾಕುವ ವಾಡಿಕೆಯನ್ನು ಋಷಿಪತ್ನಿಯರು ಇಟ್ಟುಕೊಂಡಿದ್ದದ್ದರಿಂದ ಮಕ್ಕಳು ಬಾಗಿಲಲ್ಲಿ ನಿಂತು ತಿಂಡಿಯನ್ನು ಕೊಡೆಂದು ತಾಯಿಯರನ್ನು ಕಾಡುವ ಹಾಗೆ ಜಿಂಕೆಗಳು ಆಶ್ರಮದ ಬಾಗಿಲುಗಳಲ್ಲಿ ಹಿಂಡುಹಿಂಡುಗಟ್ಟಲೆ ನಿಂತಿದ್ದವು.

ವಿಗ್ರಹವಾಕ್ಯಗಳು. ೧ ಋಷೀಣಾಂ ಪತ್ನ್ಯಃ-ಋಷಿಪತ್ನ್ಯಃ (ಷ.ತ.); ತಾಸಾಂ-ಋಷಿಪತ್ನೀನಾಮ್. ೨ ಉಟಜಾನಾಂ ದ್ವಾರಾಣಿ-ಉಟಜದ್ವಾರಾಣಿ (ಷ.ತ); ಉಟಜದ್ವಾರಾಣಿ ರುನ್ಧನ್ತಿ ಇತಿ-ಉಟಜದ್ವಾರರೋಧಿನಃ; ತೈಃ- ಉಟಜ ದ್ವಾರರೋಧಿಭಿಃ. ೩ ಭಾಗ ಏವ-ಭಾಗಧೇಯಃ (ತ.ವೃ.); ನೀವಾರಾಣಾಂ ಭಾಗಧೇಯಃ-ನೀವಾರಭಾಗಧೇಯಃ (ಷ.ತ.); ತಸ್ಯ-ನೀವಾರಭಾಗಧೇಯಸ್ಯ; ನೀವಾರಭಾಗಧೇಯಸ್ಯ ಉಚಿತೈಃ-ನೀವಾರಭಾಗಧೇಯೋಚಿತೈಃ (ಷ.ತ.).

ವ್ಯಾಕರಣವಿಶೇಷ. ೧ ಭಾಗಧೇಯ-ಭಾಗ ಎಂಬ ಶಬ್ದಕ್ಕೆ ಧೇಯ ಪ್ರತ್ಯಯವು ಬಂದಿದೆ; ಭಾಗವೆಂದೇ ಅರ್ಥ. ರೂಪ, ನಾಮ, ಭಾಗ ಎಂಬ ಶಬ್ದಗಳಿಗೆ ಸ್ವಾರ್ಥದಲ್ಲಿ (original meaning of the word) ಎಂದರೆ ಶಬ್ದದ ಮೂಲಾರ್ಥದಲ್ಲಿ ಧೇಯಪ್ರತ್ಯಯವು ಬರುವದು. ೨ ಅಪತ್ಯೈಃ-ಅಕಾರಾನ್ತ ನಪುಂಸಕಲಿಂಗ.

ಸೇಕಾನ್ತೇ ಮುನಿಕನ್ಯಾಭಿಸ್ತತ್ಕ್ಷಣೋಜ್ಝಿತವೃಕ್ಷಕಮ್ ।
ವಿಶ್ವಾಸಾಯ ವಿಹಙ್ಗಾನಾಮಾಲವಾಲಾಮ್ಬುಪಾಯಿನಾಮ್ ॥೫೧॥

ಅನ್ವಯ. [ಮುನಿಕನ್ಯಾಭಿಃ ಸೇಕಾನ್ತೇ ಆಲವಾಲಾಮ್ಬುಪಾಯಿನಾಂ ವಿಹಙ್ಗಾನಾಂ ವಿಶ್ವಾಸಾಯ ತತ್ಕ್ಷಣೋಜ್ಝಿತವೃಕ್ಷಕಂ (ಆಶ್ರಮಂ ಪ್ರಾಪತ್)]

ಅರ್ಥ. ಮುನಿಕನ್ಯಾಭಿಃ-ಋಷಿಗಳ ಹೆಣ್ಣುಮಕ್ಕಗಳಿಂದ ಸೇಕಾನ್ತೇ-ನೀರು ಹಾಕಿದ ಮೇಲೆ ಆಲವಾಲಾಮ್ಬುಪಾಯಿನಾಂ- (ಆಲವಾಲ-ಪಾತಿಗಳಲ್ಲಿ ಅಮ್ಬು ಪಾಯಿನಾಂ-ನೀರನ್ನು ಕುಡಿಯುವ) ಪಾತಿಗಳಲ್ಲಿರುವ ನೀರನ್ನು ಕುಡಿಯುವ ವಿಹಙ್ಗಾನಾಂ-ಹಕ್ಕಿಗಳಿಗೆ ವಿಶ್ವಾಸಾಯ-ನಂಬಿಕೆಗೋಸ್ಕರ ತತ್ಕ್ಷಣೋಜ್ಝಿತವೃಕ್ಷಕಂ - (ತತ್ಕ್ಷಣ-ಆ ಕ್ಷಣದಲ್ಲಿ ಉಜ್ಝಿತ-ಬಿಡಲ್ಪಟ್ಟ ವೃಕ್ಷಕಂ-ಗಿಡಗಳುಳ್ಳ) ಆ ಕ್ಷಣ ದಲ್ಲಿಯೇ ತೊರೆದ ಗಿಡಗಳುಳ್ಳ [ಆಶ್ರಮಂ ಪ್ರಾಪತ್.]

ತಾತ್ಪರ್ಯ. ಪಾತಿಯಲ್ಲಿ ಇದ್ದ ನೀರನ್ನು ಕುಡಿಯುವದಕ್ಕೆ ಬರುವ ಹಕ್ಕಿಗಳಿಗೆ ವಿಶ್ವಾಸವುಂಟಾಗಲೆಂದು ಆ ಆಶ್ರಮದ ಮುನಿಗಳ ಹುಡುಗಿಯರು ಗಿಡಗಳಿಗೆ ನೀರನ್ನು ಹಾಕಿದ ಕೂಡಲೆ ಆ ಸ್ಥಳವನ್ನು ಬಿಟ್ಟು ಹೋಗುತ್ತಿದ್ದರು.

ವಿಗ್ರಹವಾಕ್ಯಗಳು. ೧ ಸೇಕಸ್ಯ ಅನ್ತಃ-ಸೇಕಾನ್ತಃ (ಷ.ತ.); ತಸ್ಮಿನ್ ಸೇಕಾನ್ತೇ. ೨ ಮುನೀನಾಂ ಕನ್ಯಾಃ-ಮುನಿಕನ್ಯಾಃ (ಷ.ತ.); ತಾಭಿಃ-ಮುನಿಕನ್ಯಾಭಿಃ. ೩ ಸ ಚಾಸೌ ಕ್ಷಣಶ್ಚ-ತತ್ಕ್ಷಣಃ (ವಿ.ಪೂ.ಕ.); ತಸ್ಮಿನ್-ತತ್ಕ್ಷಣೇ; ತತ್ಕ್ಷಣೇ ಉಜ್ಝಿತಾಃ-ತತ್ಕ್ಷಣೋಜ್ಝಿತಾಃ (ಸ.ತ.); ತತ್ಕ್ಷಣೋಜ್ಝಿತಾಃ ವೃಕ್ಷಕಾಃ ಯಸ್ಮಿನ್ ಸಃ-ತತ್ಕ್ಷಣೋಜ್ಝಿತವೃಕ್ಷಕಃ (ಸ.ಬ.); ತಂ-ತತ್ಕ್ಷಣೋಜ್ಝಿತವೃಕ್ಷಕಮ್. ೪ ಆಲವಾಲೇ ಅಮ್ಬು-ಆಲವಾಲಾಮ್ಬು (ಸ.ತ.); ಆಲವಾಲಾಮ್ಬು ಪಿಬನ್ತೀತಿ -

ಆಲವಾಲಾಮ್ಬುಪಾಯಿನಃ (ಕೃ. ವೃ.); ತೇಷಾಂ-ಆಲವಾಲಾಮ್ಬುಪಾಯಿನಾಮ್.

ವ್ಯಾಕರಣವಿಶೇಷ. ವಿಶ್ವಾಸಾಯ=ವಿಶ್ವಾಸಂ ಉತ್ಪಾದಯಿತುಂ; ಚತುರ್ಥೀವಿಭಕ್ತಿ ಬಂದಿರುವದಕ್ಕೆ ೯ನೆಯ ಶ್ಲೋಕದ ೨ನೆಯ ಟಿಪ್ಪಣಿಯನ್ನು (ಪು, ೧೦) ನೋಡಿ. ೨ ವೃಕ್ಷಕಮ್-ವೃಕ್ಷಶಬ್ದದ ಮೇಲೆ ಹ್ರಸ್ವಾರ್ಥದಲ್ಲಿ (diminutive) ಕ ಎಂಬ ಪ್ರತ್ಯಯವು ಬಂದಿದೆ.

ಆತಪಾತ್ಯಯಸಂಕ್ಷಿಪ್ತನೀವಾರಾಸು ನಿಷಾದಿಭಿಃ ।
ಮೃಗೈರ್ವರ್ತಿತರೋಮನ್ಥಮುಟಜಾಙ್ಗನಭೂಮಿಷು ॥೫೨॥

ಅನ್ವಯ. [ಆತಪಾತ್ಯಯಸಂಕ್ಷಿಪ್ತನೀವಾರಾಸು ಉಟಜಾಙ್ಗನಭೂಮಿಷು ನಿಷಾದಿಭಿಃ ಮೃಗೈಃ ವರ್ತಿತರೋಮನ್ಥಂ (ಆಶ್ರಮಂ ಪ್ರಾಪತ್)]

ಅರ್ಥ. ಆತಪಾತ್ಯಯಸಂಕ್ಷಿಪ್ತನೀವಾರಾಸು- (ಆತಪ-ಬಿಸಿಲಿನ ಅತ್ಯಯ - ಹೋಗುವಿಕೆಯಲ್ಲಿ ಸಂಕ್ಷಿಪ್ತ-ರಾಶಿಹಾಕಲ್ಪಟ್ಟ ನೀವಾರಾಸು-ನೀವಾರಧಾನ್ಯವುಳ್ಳ) ಬಿಸಿಲು ತಂಪುತ್ತಲೂ ನೀವಾರವನ್ನು ರಾಶಿಹಾಕಿರುವ ಉಟಜಾಙ್ಗನಭೂಮಿಷು- (ಉಟಜ-ಎಲೆಯ ಮನೆಗಳ ಅಙ್ಗನ-ಅಂಗಳದ ಭೂಮಿಷು-ನೆಲಗಳಲ್ಲಿ) ಆಶ್ರಮದ ಅಂಗಳದ ಬಯಲುಗಳಲ್ಲಿ ನಿಷಾದಿಭಿಃ-ಕೂತಿರುವ ಮೃಗೈಃ-ಜಿಂಕೆಗಳಿಂದ ವರ್ತಿತರೋಮನ್ಥಂ-(ವರ್ತಿತ-ತಿರಿವಿಹಾಕಲ್ಪಟ್ಟ ರೋಮನ್ಥಂ-ಮೆಲುಕುಳ್ಳ) ಮೆಲುಕು ಹಾಕುತ್ತಿರುವ [ಆಶ್ರಮಂ ಪ್ರಾಪತ್.]

ತಾತ್ಪರ್ಯ. ಎಲೆಮನೆಗಳ ಅಂಗಳದಲ್ಲಿ ಹರವಿದ್ದ ನೀವಾರಧಾನ್ಯವನ್ನು ಸಂಜೆಯಲ್ಲಿ ರಾಶಿಮಾಡಿರುತ್ತಿದ್ದರು; ಜಿಂಕೆಗಳು ಆ ರಾಶಿಗಳ ಪಕ್ಕದಲ್ಲಿ ಮಲಗಿಕೊಂಡು ಮೆಲಕುಹಾಕುತ್ತಿದ್ದವು.

ವಿಗ್ರಹವಾಕ್ಯಗಳು. ೧ ಆತಪಸ್ಯ ಅತ್ಯಯಃ-ಆತಪಾತ್ಯಯಃ (ಷ. ತ.); ತಸ್ಮಿನ್ - ಆತಪಾತ್ಯಯೇ; ಆತಪಾತ್ಯಯೇ ಸಂಕ್ಷಿಪ್ತಾಃ-ಆತಪಾತ್ಯಯಸಂಕ್ಷಿಪ್ತಾಃ (ಸ. ತ); ಆತಪಾತ್ಯಯಸಂಕ್ಷಿಪ್ತಾಃ ನೀವಾರಾಃ ಯಾಸು ತಾಃ-ಆತಪಾತ್ಯಯಸಂಕ್ಷಿಪ್ತನೀವಾರಾಃ (ಸ. ಬ); ತಾಸು- ಆತಪಾತ್ಯಯಸಂಕ್ಷಿಪ್ತನೀವಾರಾಸು. ೨ ನಿಷೀದನ್ತೀತಿ - ನಿಷಾದಿನಃ(ಕೃ. ವೃ.); ತೈಃ-ನಿಷಾದಿಭಿಃ. ೩ ವರ್ತಿತಃ ರೋಮನ್ಥಃ ಯಸ್ಮಿನ್ ಸಃ - ವರ್ತಿತರೋಮನ್ಥಃ (ಸ. ಬ.); ತಂ-ವರ್ತಿತರೋಮನ್ಥಂ. ೪ ಉಟಜಾನಾಂ ಅಙ್ಗನಾನಿ-ಉಟಜಾಙ್ಗನಾನಿ(ಷ. ತ.); ತೇಷಾಂ-ಉಟಜಾಙ್ಗನಾನಾಂ; ಉಟಜಾಙ್ಗನಾನಾಂ ಭೂಮಯಃ-ಉಟಜಾಙ್ಗನಭೂಮಯಃ (ಷ. ತ.); ತಾಸು-ಉಟಜಾಙ್ಗನಭೂಮಿಷು.

ವ್ಯಾಕರಣವಿಶೇಷ. ೧ ಕನ್ನಡದಲ್ಲಿ ಮೆಲುಕು ಹಾಕು(chew the cud) ಎಂದು ಹೇಳುವ

ಹಾಗೆ ಸಂಸ್ಕೃತದಲ್ಲಿ ರೋಮನ್ಥಂ ವರ್ತಯ ಎಂದು ಪ್ರಯೋಗಿಸುತ್ತಾರೆ. ೨ ಅಙ್ಗನಶಬ್ದವು ಅಙ್ಗಣ ಎಂದು ಣಾನ್ತವಾಗಿರುವದೂ ಉಂಟು.

ವಿಚಾರ. ೫೦, ೫೧, ೫೨ - ಈ ಶ್ಲೋಕಗಳಲ್ಲಿ ಆಶ್ರಮದಲ್ಲಿ ಮೃಗಪಕ್ಷಿಗಳಿಗೆ ಕೊಟ್ಟಿದ್ದ ಸಲುಗೆಯನ್ನು ಕವಿಯು ವಿವರಿಸಿರುತ್ತಾನೆ.

ಅಭ್ಯುತ್ಥಿತಾಗ್ನಿಪಿಶುನೈರತಿಥೀನಾಶ್ರಮೋನ್ಮುಖಾನ್ ।
ಪುನಾನಂ ಪವನೋದ್ಧೂತೈರ್ಧೂಮೈರಾಹುತಿಗನ್ಧಿಭಿಃ ॥೫೩॥

ಅನ್ವಯ. [ಅಭ್ಯುತ್ಥಿತಾಗ್ನಿಪಿಶುನೈಃ ಪವನೋದ್ಧೂತೈಃ ಆಹುತಿಗಂಧಿಭಿಃ ಧೂಮೈಃ ಆಶ್ರಮೋನ್ಮುಖಾನ್ ಅತಿಥೀನ್ ಪುನಾನಂ (ಆಶ್ರಮಂ ಪ್ರಾಪತ್)]

ಅರ್ಥ. ಅಭ್ಯುತ್ಥಿತಾಗ್ನಿಪಿಶುನೈಃ - (ಅಭ್ಯುತ್ಥಿತ-ಮೇಲಕ್ಕೆದ್ದ ಅಗ್ನಿ-ಅಗ್ನಿಗಳ ಪಿಶುನೈಃ-ಸೂಚಕಗಳಾದ) ಧಗಧಗನೆ ಉರಿಯುತ್ತಿರುವ ಅಗ್ನಿಗಳನ್ನು ಸೂಚಿಸುವವುಗಳಾಗಿಯೂ ಪವನೋದ್ಧೂತೈಃ-ಗಾಳಿಯಿಂದ ಮೇಲಕ್ಕೆಬ್ಬಿಸಲ್ಪಟ್ಟವುಗಳಾಗಿಯೂ ಆಹುತಿಗಂಧಿಭಿಃ-ಹೋಮದ ಸಾಮಾನಿನ ವಾಸನೆಯುಳ್ಳವುಗಳಾಗಿಯೂ ಇರುವ ಧೂಮೈಃ-ಹೊಗೆಗಳಿಂದ ಆಶ್ರಮೋನ್ಮುಖಾನ್-ಆಶ್ರಮದ ಕಡೆಗೆ ಬರುವ ಅತಿಥೀನ್ - ಅತಿಥೀಗಳನ್ನು ಪುನಾನಂ-ಪವಿತ್ರಗೊಳಿಸುವ [ಆಶ್ರಮಂ ಪ್ರಾಪತ್.]

ತಾತ್ಪರ್ಯ. ಹೋಮದ್ರವ್ಯದ ವಾಸನೆಯನ್ನು ಬೀರುವ ಹೊಗೆಯನ್ನು ಗಾಳಿಯು ಹೊಡೆದುಕೊಂಡು ಬರುತ್ತಿದ್ದದ್ದರಿಂದ ಆಶ್ರಮದ ಕಡೆಗೆ ಬರುವವರಿಗೆ ಅಗ್ನಿಗಳು ಚೆನ್ನಾಗಿ ಹತ್ತಿಕೊಂಡು ಉರಿಯುತ್ತಿವೆಯೆಂದು ಗೊತ್ತಾಗುವಂತಿತ್ತು.

ವಿಗ್ರಹವಾಕ್ಯಗಳು. ೧ ಅಭ್ಯುತ್ಥಿತಾಶ್ಚ ತೇ ಅಗ್ನಯಶ್ಚ-ಅಭ್ಯುತ್ಥಿತಾಗ್ನಯ (ವಿ.ಪೂ.ಕ.); ತೇಷಾಂ-ಅಭ್ಯುತ್ಥಿತಾಗ್ನೀನಾಂ; ಅಭ್ಯುತ್ಥಿತಾಗ್ನೀನಾಂ ಪಿಶುನಾಃ-ಅಭ್ಯುತ್ಥಿತಾಗ್ನಿಪಿಶುನಾಃ (ಷ.ತ.); ತೈಃ-ಅಭ್ಯುತ್ಥಿತಾಗ್ನಿಪಿಶುನೈಃ. ೨ ಆಶ್ರಮಸ್ಯ ಉನ್ಮುಖಾಃ - ಆಶ್ರಮೋನ್ಮುಖಾಃ (ಷ.ತ.) ತಾನ್-ಆಶ್ರಮೋನ್ಮುಖಾನ್. ೩ ಪುನೀತೇ ಇತಿ ಪುನಾನಃ (ಕೃ.ವೃ.) ತಂ-ಪುನಾನಮ್. ೪ ಪವನೇನ ಉದ್ಧೂತಾಃ-ಪವನೋದ್ಧೂತಾಃ (ತೃ.ತ.) ತೈಃ-ಪವನೋದ್ಧೂತೈಃ. ೫ ಆಹುತೀನಾಂ ಗನ್ಧಃ-ಅಹುತಿಗನ್ಧಃ (ಷ.ತ.); ಆಹುತಿಗನ್ಧಃ ಏಷಾಂ ಅಸ್ತೀತಿ-ಆಹುತಿಗನ್ಧಿನಃ (ತ.ವೃ.) ತೈಃ-ಆಹುತಿಗನ್ಧಿಭಿಃ.

ವ್ಯಾಕರಣವಿಶೇಷ. ಆಹುತಿಗನ್ಧಿಭಿಃ-ಇದು ನಕಾರಾನ್ತ ಪುಲ್ಲಿಂಗ; ೩೮ನೆಯ ಶ್ಲೋಕದ ೨ನೆಯ ಟಿಪ್ಪಣಿಯನ್ನು (ಪು.೩೮) ನೋಡಿ.

ವಿಚಾರ. ಅಗ್ನಿಯು ಉರಿಯೆದ್ದಮೇಲೆಯೆ ಹೋಮವನ್ನು ಮಾಡಬೇಕೆಂದು

ಶ್ರುತಿವಚನವಿರುವದು.

ಅಥ ಯನ್ತಾರಮಾದಿಶ್ಯ ಧುರ್ಯಾನ್ವಿಶ್ರಾಮಯೇತಿ ಸಃ ।
ತಾಮವಾರೋಹಯತ್ಪತ್ನೀಂ ರಥಾದವತತಾರ ಚ ॥೫೪॥

ಅನ್ವಯ. [ಅಥ ಸಃ ಯನ್ತಾರಂ ಧುರ್ಯಾನ್ ವಿಶ್ರಾಮಯ ಇತಿ ಆದಿಶ್ಯ ತಾಂ ಪತ್ನೀಂ ರಥಾತ್ ಅವಾರೋಹಯತ್ ಅವತತಾರ ಚ]

ಅರ್ಥ. ಅಥ-ಆಮೇಲೆ ಸಃ-ಆತನು ಯನ್ತಾರಂ-ಸಾರಥಿಯನ್ನು ಕುರಿತು ಧುರ್ಯಾನ್-ಕುದುರೆಗಳನ್ನು ವಿಶ್ರಾಮಯ-ವಿಶ್ರಾಂತಿಗೊಳಿಸು ಇತಿ- ಎಂದು ಆದಿಶ್ಯ - ಕಟ್ಟುಮಾಡಿ ತಾಂ-ಆ ಪತ್ನೀಂ-ಹೆಂಡತಿಯನ್ನು ರಥಾತ್-ಗಾಡಿಯಿಂದ ಅವಾರೋಹಯತ್-ಇಳಿಸಿದನು; ಅವತತಾರ ಚ- ಮತ್ತು (ತಾನೂ)ಇಳಿದನು.

ವಿಗ್ರಹವಾಕ್ಯಗಳು. ಧುರಂ ವಹನ್ತೀತಿ-ಧುರ್ಯಾಃ (ಕೃ.ವೃ.); ತಾನ್ - ಧುರ್ಯಾನ್.

ವ್ಯಾಕರಣವಿಶೇಷ. ೧ ವಿಶ್ರಾಮಯ-ಶ್ರಮು ತಪಸಿ ಖೇದೇ ಚ (ಶ್ರಮ್-ತಪಸ್ಸು ಮಾಡು, ಆಯಾಸಪಡು) ಎಂಬ ೪ನೆಯ ಗಣದ ಧಾತುವಿಗೆ ಣಿಚ್ (ಇ) ಪ್ರತ್ಯಯವು (causative) ಬಂದಿದೆ; ಲೋಟ್, ಪ.ಮ.ಏ. 'ಅಮ್' ಎಂಬುದು ಕೊನೆಯಲ್ಲಿರುವ ಧಾತುವಿಗೆ ಣಿಚ್ ಸೇರುವಾಗ ವೃದ್ಧಿಯಾಗುವದಿಲ್ಲವೆಂಬುದು ನಿಯಮವು. ಉದಾ: ರಮಯತಿ, ಗಮಯತಿ. ಇದರಂತೆ ಇಲ್ಲಿ ವಿಶ್ರಮಯತಿ ಎಂದು ಹ್ರಸ್ವವೇ ಬರಬೇಕು; ಹ್ರಸ್ವವಾಗದೆ ಇರುವದೂ ಉಂಟೆಂದು ಕೆಲವು ಕಡೆಯಲ್ಲಿ ಪ್ರಯೋಗದಿಂದ ತಿಳಿಯಬರುತ್ತದೆ. ೨. ಅವಾರೋಹಯತ್ - ರುಹ ಬೀಜಜನ್ಮನಿ ಪ್ರಾದುರ್ಭಾವೇಚ (ರುಹ್-ಬೆಳೆ) ಎಂಬ ೧ನೆಯ ಗಣದ ಧಾತುವಿಗೆ ಅವ - ಎಂಬ ಉಪಸರ್ಗವು ಸೇರಿ ಇಳಿ ಎಂಬರ್ಥವಾಗಿದೆ; ಣಿಜನ್ತ ಲಙ್, ಪ.ಪ್ರ.ಏ. ಅವರೋಪಯತ್ ಎಂಬ ಪಾಠವೂ ಉಂಟು; ಆಗಲೂ ಇದೇ ಧಾತು, ಇದೇ ರೂಪ. ೩ ಅವತತಾರ- ತೄಪ್ಲವನತರಣಯೋಃ (ತೃ-ತೇಲು, ದಾಟು) ಎಂಬ ೧ನೆಯ ಗಣದ ಧಾತುವಿಗೆ ಅವ ಎಂಬ ಉಪಸರ್ಗ ಸೇರಿ ಇಳಿ ಎಂಬರ್ಥವಾಗಿದೆ; ಲಿಟ್, ಪ.ಪ್ರ.ಏ. ಅವರುರೋಹ ಎಂಬ ಪಾಠವಿದ್ದರೆ ರುಹ್‌ಧಾತುವಿನ ಲಿಟ್.

ತಸ್ಮೈ ಸಭ್ಯಾಃ ಸಭಾರ್ಯಾಯ ಗೋಪ್ತ್ರೇ ಗುಪ್ತತಮೇನ್ದ್ರಿಯಾಃ ।
ಅರ್ಹಣಾಮರ್ಹತೇ ಚಕ್ರುರ್ಮುನಯೋ ನಯಚಕ್ಷುಷೇ ॥೫೫॥

ಅನ್ವಯ. [ಸಭ್ಯಾಃ ಗುಪ್ತತಮೇನ್ದ್ರಿಯಾಃ ಮುನಯಃ ಸಭಾರ್ಯಾಯ ಗೋಪ್ತ್ರೇ ನಯಚಕ್ಷುಷೇ ಅರ್ಹತೇ ತಸ್ಮೈ ಅರ್ಹಣಾಂ ಚಕ್ರುಃ]

ಅರ್ಥ. ಸಭ್ಯಾಃ - ಸಭ್ಯರಾಗಿಯೂ ಗುಪ್ತತಮೇನ್ದ್ರಿಯಾಃ- (ಗುಪ್ತತಮ-ಬಹಳ

ವಾಗಿ ಕಾಪಾಡಲ್ಪಟ್ಟ ಇನ್ದ್ರಿಯಾಃ- ಇನ್ದ್ರಿಯಗಳುಳ್ಳ) ಇಂದ್ರಿಯಗಳನ್ನು ಪೂರ್ತಿಯಾಗಿ ಗೆದ್ದಿರುವವರಾಗಿಯೂ. ಇದ್ದ ಮುನಯಃ-ಋಷಿಗಳು ಸಭಾರ್ಯಾಯ - ಹೆಂಡತಿಯೊಡಗೂಡಿದವನಾಗಿರೂ ಗೋಪ್ತ್ರೇ- [ಪ್ರಜೆಗಳನ್ನು] ಕಾಪಾಡುವವನಾಗಿಯೂ. ನಯಚಕ್ಷುಷೇ- (ನಯ-ಶಾಸ್ತ್ರವು ಚಕ್ಷುಷೇ-ಕಣ್ಣಾಗುಳ್ಳ) ಶಾಸ್ತ್ರವು ತೋರಿಸುವ ದಾರಿಯನ್ನೆ ಹಿಡಿಯುವವನಾಗಿಯೂ ಅರ್ಹತೇ-ಪೂಜ್ಯನಾಗಿಯೂ ಇದ್ದ ತಸ್ಮೈ-ಆತನಿಗೆ ಅರ್ಹಣಾಂ-ಸತ್ಕಾರವನ್ನು ಚಕ್ರುಃ- ಮಾಡಿದರು.

ವಿಗ್ರಹವಾಕ್ಯಗಳು. ೧ ಸಭಾಯಾಂ ಸಾಧವಃ-ಸಭ್ಯಾಃ (ತ. ವ್ಯ.) ೨ ಭಾರ್ಯಯಾ ಸಹ ವರ್ತತ ಇತಿ-ಸಭಾರ್ಯಃ (ಸಹ. ಬ.); ತಸ್ಮೈ-ಸಭಾರ್ಯಾಯ. ೩ ಅತಿಶಯೇನ ಗುಪ್ತಾನಿ-ಗುಪ್ತತಮಾನಿ (ತ. ವ್ಯ.); ಗುಪ್ತತಮಾನಿ ಇನ್ದ್ರಿಯಾಣಿ ಯೈಸ್ತೇ-ಗುಪ್ತತಮೇನ್ದ್ರಿಯಾಃ (ತ್ರ್ಯ. ಬ.); ೪ ನಯಃ ಚಕ್ಷುಃ ಯಸ್ಯ ಸಃ-ನಯಚಕ್ಷುಃ (ಷ. ಬ.); ತಸ್ಮೈ-ನಯಚಕ್ಷುಷೇ.

ವ್ಯಾಕರಣವಿಶೇಷ. ೧ ಸಭ್ಯಾಃ-ಇದರ ವ್ಯುತ್ಪತ್ತಿಯನ್ನು ನೋಡಿದರೆ ಸಭೆಗೆ ತಕ್ಕವರು ಎಂದು ಅರ್ಥವಾಗುತ್ತದೆ; ಒಳ್ಳೆಯ ನಡೆಯನ್ನು ಬಲ್ಲ (polite, courteous) ಎಂಬ ಅರ್ಥವೂ ಬಳಕೆಯಲ್ಲಿ ಉಂಟು. ೨ ಸಭಾರ್ಯಾಯ-ಬಹುವ್ರೀಹಿಯಲ್ಲಿ ಸಹ ಎಂಬ ಸ ಎಂಬ ರೂಪವು ವಿಕಲ್ಪವಾಗಿ ಬರುವದು; ಸಹಭಾರ್ಯಾಯ ಎಂದೂ ಆಗಬಹುದು. ೩ ಗೋಪ್ತ್ರೇ-ಋಕಾರಾನ್ತಪುಲ್ಲಿಂಗ. ೪ ನಯಚಕ್ಷುಷೇ-ಸಕಾರಾನ್ತ ಪುಲ್ಲಿಂಗದ ಚತುರ್ಥೀವಿಭಕ್ತಿ; ನಯಚಕ್ಷುರ್ಭ್ಯಾಂ, ನಯಚಕ್ಷುರ್ಭ್ಯಃ-ಎಂದು ದ್ವಿವಚನಬಹುವಚನಗಳು. ೫ ಚಕ್ರುಃ- ಡುಕೃಞ್‌ಕರಣೇ (ಕೃ ಮಾಡು) ಎಂಬ ಆನೆಯ ಗಣದ ಧಾತುವಿನ ಲಿಟ್, ಪ. ಪ್ರ. ಬ.

ವಿಧೇಃ ಸಾಯಂತನಸ್ಯಾನ್ತೇ ಸ ದದರ್ಶ ತಪೋನಿಧಿಮ್ ।
ಅನ್ವಾಸಿತಮರುನ್ಧತ್ಯಾ ಸ್ವಾಹಯೇವ ಹವಿರ್ಭುಜಮ್ ॥೫೬॥

ಅನ್ವಯ. [ಸಃ ಸಾಯನ್ತನಸ್ಯ ವಿಧೇಃ ಅನ್ತೇ ಅರುನ್ಧತ್ಯಾ ಅನ್ವಾಸಿತಂ ತಪೋನಿಧಿಂ ಸ್ವಾಹಯಾ (ಅನ್ವಾಸಿತಂ) ಹವಿರ್ಭುಜಮಿವ ದದರ್ಶ]

ಅರ್ಥ. ಸಃ-ಆತನು ಸಾಯನ್ತನಸ್ಯ-ಸಂಜೆಯ ವಿಧೇಃ-ಕರ್ಮದ ಅನ್ತೇ-ಕೊನೆಯಲ್ಲಿ ಅರುನ್ಧತ್ಯಾ-ಅರುಂಧತಿಯಿಂದ- ಅನ್ವಾಸಿತಂ-ಹಿಂದಿದ್ದು ಸೇವಿಸಲ್ಪಟ್ಟ ತಪೋನಿಧಿಂ (ತಪಃ-ತಪಸ್ಸೆ ನಿಧಿಂ-ನಿಧಿಯಾಗುಳ್ಳ) ತಪಸ್ವಿಯನ್ನು ಸ್ವಾಹಯಾ-ಸ್ವಾಹಾದೇವಿಯಿಂದ + ಅನ್ವಾಸಿತಂ-ಸೇವಿಸಲ್ಪಟ್ಟ ಹವಿರ್ಭುಜಮಿವ-ಅಗ್ನಿಯನ್ನು ಹೇಗೋ ಹಾಗೆ ದದರ್ಶ-ನೋಡಿದನು.

ತಾತ್ಪರ್ಯ. ವಸಿಷ್ಠರು ಸಂಜೆಯ ಕರ್ಮಾನುಷ್ಠಾನವನ್ನು ಮುಗಿಸಿ ಕೂತಿದ್ದರು; ಅವರ ಹಿಂದುಗಡೆಯಲ್ಲಿ ಹೆಂಡತಿಯಾದ ಅರುಂಧತಿಯೂ ಕುಳಿತಿದ್ದಳು.

ಸ್ವಾಹಾದೇವಿಯ ಜೊತೆಯಲ್ಲಿರುವ ಅಗ್ನಿಯಂತಿದ್ದ ಅವರನ್ನು ರಾಜನು ಕಂಡನು.

ವಿಗ್ರಹವಾಕ್ಯಗಳು. ಸಾಯಂ ಭವಃ-ಸಾಯಂತನಃ (ತ. ವೃ.); ತಸ್ಯ-ಸಾಯಂತನಸ್ಯ. ೨ ತಪಸಾಂ ನಿಧಿಃ-ತಪೋನಿಧಿಃ (ಷ. ತ); ತಂ-ತಪೋನಿಧಿಮ್. ೩ ಹವೀಂಷಿ ಭುಙ್ಕ್ತೇ ಇತಿ-ಹವಿರ್ಭುಕ್ (ಕೃ. ವೃ.); ತಂ-ಹವಿರ್ಭುಜಮ್.

ವ್ಯಾಕರಣವಿಶೇಷ. ೧ ಸಾಯಂತನಸ್ಯ-ಸಾಯಂ ಎಂಬ ಕಾಲವಾಚಕಾವ್ಯಯದ ಮೇಲೆ 'ತನ' ಎಂಬ ಪ್ರತ್ಯಯವು ಬಂದಿದೆ. ೨೦ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೨೨) ನೋಡಿ. ೨ ಅನ್ವಾಸಿತಂ-ಅನು ಎಂಬ ಉಪಸರ್ಗವು ಸೇರಿದ ಮೇಲೆ ಆಸ್-ಕೂತುಕೊ ಎಂಬ ಧಾತು ಸಕರ್ಮಕವಾಗಿದೆ; ಆದ್ದರಿಂದ ಅನ್ವಾಸಿತಂ ಎಂಬುದು ಕರ್ಮಾರ್ಥಕಭೂತಕೃದಂತ (passive participle) ೩ ದದರ್ಶ-ದೃಶಿರ್ ಪ್ರೇಕ್ಷಣೇ (ದೃಶ್, ಪಶ್ಯ್-ನೋಡು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಏ.

ವಿಚಾರ. ಸಮಿತ್ಪುಷ್ಪಕುಶಾಗ್ನ್ಯಂಬುಮೃದನ್ನಾಕ್ಷತಪಾಣಿಕಃ ।
ಜಪಂ ಹೋಮಂ ಚ ಕುರ್ವಾಣೋ ನಾಭಿವಾದ್ಯೋ ದ್ವಿಜೋ ಭವೇತ್ ॥
ಸಮಿತ್ತು, ಹೂವು, ದರ್ಭೆ, ಬೆಂಕಿ, ನೀರು, ಮೃತ್ತಿಕೆ, ಅನ್ನ,ಅಕ್ಷತೆ-ಇವುಗಳನ್ನು ಕೈಯಲ್ಲಿಟ್ಟುಕೊಂಡಿರುವಾಗಲೂ ಜಪಹೋಮಗಳನ್ನು ಮಾಡುತ್ತಿರುವಾಗಲೂ ಬ್ರಾಹ್ಮಣನಿಗೆ ನಮಸ್ಕಾರ ಮಾಡಬಾರದು-ಎಂದು ಶಾಸ್ತ್ರವಚನವಿದೆ. ಆದ್ದರಿಂದ 'ಸಾಯಂಕಾಲದ ಕರ್ಮಾನುಷ್ಠಾನವಾದ ಬಳಿಕ ಕಂಡನು' - ಎಂದು ವರ್ಣಿಸಿರುತ್ತಾನೆ. 'ಅಗ್ನಿಯಂತೆ ಇರುವ' ಎಂಬ ಹೋಲಿಕೆಯಿಂದ ವಸಿಷ್ಠಮಹರ್ಷಿಗಳು ತೇಜಸ್ವಿಗಳೂ ಪರಿಶುದ್ಧರೂ ಆಗಿದ್ದರೆಂದು ಹೇಳಿದಂತೆ ಆಯಿತು.

ತಯೋರ್ಜಗೃಹತುಃ ಪಾದಾನ್ ರಾಜಾ ರಾಜ್ಞೀ ಚ ಮಾಗಧೀ ।
ತೌ ಗುರುರ್ಗುರುಪತ್ನೀ ಚ ಪ್ರೀತ್ಯಾ ಪ್ರತಿನನನ್ದತುಃ ॥೫೭॥

ಅನ್ವಯ. [ಮಾಗಧೀ ರಾಜ್ಞೀ ರಾಜಾ ಚ ತಯೋಃ ಪಾದಾನ್ ಜಗೃಹತುಃ ಗುರುಪತ್ನೀ ಗುರುಃ ಚ ತೌ ಪ್ರೀತ್ಯಾ ಪ್ರತಿನನನ್ದತುಃ]

ಅರ್ಥ. ಮಾಗಧೀ-ಮಗಧರಾಜನ ಮಗಳಾದ ರಾಜ್ಞೀ-ರಾಣಿಯೂ ರಾಜಾ ಚ-ರಾಜನೂ ತಯೋಃ-ಅವರಿಬ್ಬರ ಪಾದಾನ್ - ಕಾಲುಗಳನ್ನು ಜಗೃಹತುಃ-ಹಿಡಿದುಕೊಂಡರು. ಗುರುಪತ್ನೀ-ಗುರುವಿನ ಹೆಂಡತಿಯೂ ಗುರುಃ ಚ-ಗುರುವೂ ತೌ - ಅವರಿಬ್ಬರನ್ನು ಪ್ರೀತ್ಯಾ-ಪ್ರೇಮದಿಂದ ಪ್ರತಿನನನ್ದತುಃ-ಗೌರವಿಸಿದರು.

ವಿಗ್ರಹವಾಕ್ಯಗಳು. ೧ ಸಾ ಚ ಸ ಚ-ತೌ (ಏ. ಶೇ.); ತಯೋಃ. ೨ ಮಗಧಸ್ಯ ಅಪತ್ಯಂ ಸ್ತ್ರೀ-ಮಾಗಧೀ (ತ. ವೃ.). ೩ ಗುರೋಃ ಪತ್ನೀ-ಗುರುಪತ್ನೀ (ಷ. ತ.).

ವ್ಯಾಕರಣವಿಶೇಷ. ೧ ಪಾದಾನ್-ಇದಕ್ಕೆ ಬದಲು ಪಾದೌ ಎಂಬ ಪಾಠವೂ ಉಂಟು, ಆಗ ಪಾದಜಾತಿಯನ್ನು ಮನಸ್ಸಿನಲ್ಲಿಟ್ಟು ಕವಿಯು ದ್ವಿತ್ವವನ್ನುಪಯೋಗಿಸಿದ್ದಾನೆಂದು ತಿಳಿಯಬೇಕು-ಎಂದು ಒಬ್ಬ ವ್ಯಾಖ್ಯಾನಕಾರನು ಬರೆದಿರುತ್ತಾನೆ. ೨ ಮಾಗಧೀ- ದೇಶ, ಕ್ಷತ್ರಿಯ ಇವೆರಡನ್ನೂ ಹೇಳುವ ಶಬ್ದಗಳಿಂದ ಬಂದಿರುವ ಅಪತ್ಯಾರ್ಥದ (offspring) ಮತ್ತು ರಾಣಿಯೆಂಬರ್ಥದ ಸ್ತ್ರೀಲಿಂಗಶಬ್ದಗಳಿಗೆ ಆದಿವೃದ್ಧಿಯಾಗುವದಿಲ್ಲವಾದರೂ ಪಾಞ್ಚಾಲೀ, ವೈದರ್ಭೀ, ಆಙ್ಗೀ, ವಾಙ್ಗೀ, ಮಾಗಧೀ ಮುಂತಾದ ಕೆಲವು ಶಬ್ದಗಳಿಗೆ ಆಗುತ್ತದೆ. ೩ ತೌ-ಎಂಬ ಸಮಾಸದಲ್ಲಿ ಪುಲ್ಲಿಂಗವೊಂದೇ ಉಳಿದುಕೊಂಡಿದೆ. ೪ ಜಗೃಹತುಃ-ಗ್ರಹ ಆದಾನೇ (ಗೃಹ್ ಹಿಡಿ) ಎಂಬ ೯ನೆಯ ಗಣದ ಧಾತುವಿನ ಲಿಟ್, ಪ. ಪ್ರ. ದ್ವಿ; ಪಾದಾನ್ ಜಗೃಹತುಃ-ಎಂಬ ಮಾತಿಗೆ ಹೆಜ್ಜೆಯನ್ನು ಮುಟ್ಟಿ ನಮಸ್ಕರಿಸಿದರು ಎಂದರ್ಥ. ೫ ಪ್ರತಿನನನ್ದತುಃ- (ಟು)ನದಿ ಸಮೃದ್ಧೌ (ನದ್, ನನ್ದ್-ಸಂತೋಷಪಡು) ೧ನೆಯ ಗಣದ ಧಾತುವಿಗೆ ಪ್ರತಿ ಎಂಬ ಉಪಸರ್ಗವು ಸೇರಿ ಪ್ರೀತಿಯಿಂದ ಬರಮಾಡಿಕೊ (welcome) ಎಂಬ ಅರ್ಥವಾಗಿದೆ. ಲಿಟ್, ಪ. ಪ್ರ. ದ್ವಿ. ೬ ಜಗೃಹತುಃ ಪ್ರತಿನನನ್ದತುಃ- ಇವು ಎರಡು ಏಕವಚನದ ನಾಮಪದಗಳ ಸಮುಚ್ಚಯದಲ್ಲಿ ಅನ್ವಯಿಸುವದರಿಂದ ದ್ವಿವಚನವು ವಿಕಲ್ಪವಾಗಿ ಬಂದಿದೆ; ಜಗ್ರಾಹ, ಪ್ರತಿನನನ್ದ ಎಂದು ಏಕವಚನವನ್ನೂ ಉಪಯೋಗಿಸಬಹುದು.

ತಮಾತಿಥ್ಯಕ್ರಿಯಾಶಾನ್ತರಥಕ್ಷೋಭಪರಿಶ್ರಮಮ್ ।
ಪಪ್ರಚ್ಛ ಕುಶಲಂ ರಾಜ್ಯೇ ರಾಜ್ಯಾಶ್ರಮಮುನಿಂ ಮುನಿಃ ॥೫೮॥

ಅನ್ವಯ. [ಮುನಿಃ ಆತಿಥ್ಯಕ್ರಿಯಾಶಾನ್ತರಥಕ್ಷೋಭಪರಿಶ್ರಮಮ್ ರಾಜ್ಯಾಶ್ರಮಮುನಿಂ ತಂ ರಾಜ್ಯೇ ಕುಶಲಂ ಪಪ್ರಚ್ಛ]

ಅರ್ಥ. ಮುನಿಃ-ಋಷಿಯು ಆತಿಥ್ಯಕ್ರಿಯಾಶಾನ್ತರಥಕ್ಷೋಭಪರಿಶ್ರಮಮ್-(ಆತಿಥ್ಯಕ್ರಿಯಾ-ಅತಿಥಿಸತ್ಕಾರದಿಂದ ಶಾನ್ತ-ಹೋಗಲಾಡಿಸಲ್ಪಟ್ಟ ರಥಕ್ಷೋಭ - ಗಾಡಿಯ ಕುಲುಕಾಟದ ಪರಿಶ್ರಮಂ- ಆಯಾಸವುಳ್ಳ) ರಥದಲ್ಲಿ ಅಲುಗಾಟದಿಂದ ಆಗಿದ್ದ ಆಯಾಸವನ್ನು ಅತಿಥಿಸತ್ಕಾರದಿಂದ ಪರಿಹರಿಸಿಕೊಂಡಿದ್ದ ರಾಜ್ಯಾಶ್ರಮ ಮುನಿಂ-ರಾಜ್ಯವೆಂಬ ಆಶ್ರಮದಲ್ಲಿ ಮುನಿಯಾಗಿದ್ದ ತಂ-ಆತನನ್ನು ರಾಜ್ಯೇ - ರಾಜ್ಯದಲ್ಲಿ ಕುಶಲಂ-ಕ್ಷೇಮವನ್ನು ಪಪ್ರಚ್ಛ-ಕೇಳಿದನು.

ವಿಗ್ರಹವಾಕ್ಯಗಳು. ೧ ಅತಿಥಯೇ ಇದಂ-ಆತಿಥ್ಯಂ (ತ.ವೃ.); ಆತಿಥ್ಯಸ್ಯ ಕ್ರಿಯಾ-ಆತಿಥ್ಯಕ್ರಿಯಾ (ಷ.ತ); ತಯಾ-ಆತಿಥ್ಯಕ್ರಿಯಯಾ; ಆತಿಥ್ಯಕ್ರಿಯಯಾ ಶಾನ್ತಃ -ಆತಿಥ್ಯಕ್ರಿಯಾಶಾನ್ತಃ (ತೃ.ತ). ರಥಸ್ಯ ಕ್ಷೋಭಃ ರಥಕ್ಷೋಭಃ (ಷ.ತ.); ತೇನ-ರಥಕ್ಷೋಭೇಣ; ರಥಕ್ಷೋಭೇಣ ಪರಿಶ್ರಮಃ-ರಥಕ್ಷೋಭ ಪರಿಶ್ರಮಃ (ತೃ.ತ.); ಆತಿಥ್ಯಕ್ರಿಯಾಶಾನ್ತಃ ರಥಕ್ಷೋಭಪರಿಶ್ರಮಃ ಯಸ್ಯ ಸಃ - ಆತಿಥ್ಯಕ್ರಿಯಾಶಾನ್ತರಥಕ್ಷೋಭಪರಿಶ್ರಮಃ (ಷ.ಬ.); ತಂ - ಆತಿಥ್ಯಕ್ರಿಯಾಶಾನ್ತ

ರಥಕ್ಷೋಭಪರಿಶ್ರಮಮ್. ೨ ರಾಜ್ಯಮೇವ ಆಶ್ರಮಃ-ರಾಜ್ಯಾಶ್ರಮಃ (ಅ.ಪೂ.ಕ); ತಸ್ಮಿನ್-ರಾಜ್ಯಾಶ್ರಮೇ; ರಾಜ್ಯಾಶ್ರಮೇ ಮುನಿಃ-ರಾಜ್ಯಾಶ್ರಮಮುನಿಃ (ಸ.ತ.); ತಂ-ರಾಜ್ಯಾಶ್ರಮಮುನಿಮ್. ರಾಜ್ಯಾಶ್ರಮಸ್ಯ ಮುನಿಃ- ರಾಜ್ಯಾಶ್ರಮಮುನಿಃ (ಷ.ತ.) ಎಂದೂ ಬಿಡಿಸಬಹುದು.

ವ್ಯಾಕರಣವಿಶೇಷ. ೧ ಪಪ್ರಚ್ಛ-ಪ್ರಚ್ಛ ಜ್ಞೀಪ್ಸಾಯಾಂ (ಪ್ರಚ್ಛ್, ಪೃಚ್ಛ್-ಕೇಳು) ಎಂಬ ೬ನೆಯ ಗಣದ ಲಿಟ್, ಪ.ಪ್ರ.ಏ. ೨ ರಾಜ್ಯ-ಎಂಬ ಶಬ್ದಕ್ಕೆ ರಾಜನ ಕೆಲಸ (government) ಎಂಬುದು ಮುಖ್ಯಾರ್ಥ; ಇಲ್ಲಿ ರಾಜನೆ ಮುಂತಾದ ಸಪ್ತಾಂಗವೆಂಬ ಅರ್ಥದಲ್ಲಿ ಅದನ್ನು ಉಪಯೋಗಿಸಿದೆ.

ವಿಚಾರ. ೧ ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬನ್ಧುಮನಾಮಯಮ್ । ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಮಾರೋಗ್ಯಮೇವ ಚ ॥ ಎಂಬಂತೆ ಬ್ರಾಹ್ಮಣನನ್ನು ಕುಶಲವೆ? ಎಂದೂ ಕ್ಷತ್ರಿಯನನ್ನು ಅನಾಮಯವೆ (ಯಾವ ತೊಂದರೆಯೂ ಇಲ್ಲವಷ್ಟೆ)? ಎಂದೂ ವೈಶ್ಯನನ್ನು ಕ್ಷೇಮವೆ (ಸಂಪಾದಿಸಿದ್ದು ಸುರಕ್ಷಿತವೆ)? ಎಂದು ಶೂದ್ರನನ್ನು ಆರೋಗ್ಯವೆ? ಎಂದೂ ಕೇಳಬೇಕು; ಇಲ್ಲಿ ದಿಲೀಪನನ್ನು ಕುಶಲ ಪ್ರಶ್ನೆಯನ್ನು ಕೇಳಿರುವದರಿಂದ ಅವನು ಇತರ ಕ್ಷತ್ರಿಯರಿಗಿಂತಲೂ ಮೇಲಾದವನೆಂದು ಹೇಳಿದಂತೆ ಆಯಿತು; ಆದ್ದರಿಂದಲೆ ರಾಜ್ಯವೆಂಬ ಆಶ್ರಮದಲ್ಲಿ ದಿಲೀಪನು ಮುನಿಯಾಗಿದ್ದನು ಎಂದು ಹೇಳಿರುತ್ತದೆ.

ಅಥಾಥರ್ವನಿಧೇಸ್ತಸ್ಯ ವಿಜಿತಾರಿಪುರಃ ಪುರಃ ।
ಅರ್ಥ್ಯಾಮರ್ಥಪತಿರ್ವಾಚಮಾದದೇ ವದತಾಂ ವರಃ ॥೫೯॥

ಅನ್ವಯ. [ಅಥ ವಿಜಿತಾರಿಪುರಃ ವದತಾಂ ವರಃ ಅರ್ಥಪತಿಃ ಅಥರ್ವನಿಧೇಃ ತಸ್ಯ ಪುರಃ ಅರ್ಥ್ಯಾಂ ವಾಚಂ ಆದದೇ]

ಅರ್ಥ. ಅಥ-ಆಮೇಲೆ ವಿಜಿತಾರಿಪುರಃ-(ವಿಜಿತ-ಗೆಲ್ಲಲ್ಪಟ್ಟ ಅರಿ-ಶತ್ರುಗಳ ಪುರಃ-ಪಟ್ಟಣಗಳುಳ್ಳ) ಶತ್ರುಗಳ ಪುರಗಳನ್ನು ಜಯಿಸಿರುವ ವದತಾಂ-ಮಾತುಗಾರರ ವರಃ-ಶ್ರೇಷ್ಠನಾದ ಅರ್ಥಪತಿಃ-ರಾಜನು ಅಥರ್ವನಿಧೇಃ-ಅಥರ್ವವೇದದ ನಿಧಿಯಾದ ತಸ್ಯ-ಆತನ ಪುರಃ-ಮುಂದೆ ಅರ್ಥ್ಯಾಂ-ಅರ್ಥದಿಂದ ಕೂಡಿರುವ ವಾಚಂ-ಮಾತನ್ನು ಆದದೇ-ತೆಗೆದುಕೊಂಡನು.

ವಿಗ್ರಹವಾಕ್ಯಗಳು. ೧ ಅಥರ್ವಣಃ ನಿಧಿಃ-ಅಥರ್ವನಿಧಿಃ (ಷ.ತ); ತಸ್ಯ - ಅಥರ್ವನಿಧೇಃ ೨ ಅರೀಣಾಂ ಪುರಾಣಿ-ಅರಿಪುರಾಣಿ (ಷ.ತ); ವಿಜಿತಾನಿ ಅರಿ ಪುರಾಣಿ ಯೇನ ಸಃ-ವಿಜಿತಾರಿಪುರಃ (ತೃ.ಬ.). ೩ ಅರ್ಥಾತ್ ಅನಪೇತಾ-ಅರ್ಥ್ಯಾ (ತ.ವೃ); ತಾಂ-ಅರ್ಥ್ಯಾಮ್. ೪ ಅರ್ಥಾನಾಂ ಪತಿಃ-ಅರ್ಥಪತಿಃ (ಷ.ತ).

ವ್ಯಾಕರಣವಿಶೇಷ. ೧ ಪುರಃ-ಅವ್ಯಯ. ೨ ಅರ್ಥ್ಯಾಂ-ಅನಪೇತ (ಇವುಗಳನ್ನು ಬಿಡದ, ಇವುಗಳಿಂದ ಕೂಡಿದ) ಎಂಬರ್ಥದಲ್ಲಿ ಧರ್ಮ, ಪಥಿನ್, ಅರ್ಥ, ನ್ಯಾಯ ಈ ಶಬ್ದಗಳಿಗೆ ಯತ್ (ಯ) ಪ್ರತ್ಯಯವು ಬರುವದು; ಅರ್ಥ್ಯಾಂ ಎಂದರೆ ಅರ್ಥಗರ್ಭಿತವಾದ ಎಂಬರ್ಥ. ೩ ವಾಚಂ-ಚಕಾರಾನ್ತ ಸ್ತ್ರೀಲಿಂಗ; ವಾಚಂ ಆದದೇ-ಎಂಬುದಕ್ಕೆ ಮಾತನ್ನು ತೆಗೆದುಕೊಂಡನು ಎಂಬುದು ಅಕ್ಷರಾರ್ಥ, ಮಾತನಾಡುವದಕ್ಕೆ ಪ್ರಾರಂಭಿಸಿದನು ಎಂದು ತಾತ್ಪರ್ಯ. ೪ ಆದದೇ- ಡುದಾಞ್ದಾನೇ (ದಾ-ಕೊಡು) ಎಂಬ ೩ನೆಯ ಗಣದ ಧಾತುವಿಗೆ ಆ ಎಂಬ ಉಪಸರ್ಗ ಸೇರಿದೆ; ಲಿಟ್, ಆ. ಪ್ರ. ಏ.

ವಿಚಾರ. ವೇದೋಕ್ತಕರ್ಮದಲ್ಲಿಯೂ ದಂಡನೀತಿಯಲ್ಲಿಯೂ ಪುರೋಹಿತನು ಕುಶಲನಾಗಿರಬೇಕೆಂದೂ ಅಥರ್ವವೇದದಲ್ಲಿ ಹೇಳಿರುವಂತೆ ದೋಷಪರಿಹಾರವನ್ನು ಮಾಡುವ ಮತ್ತು ಒಳ್ಳೆಯದನ್ನು ಮಾಡುವ ಶಾಂತಿಕಪೌಷ್ಟಿಕಕರ್ಮಗಳನ್ನು ಮಾಡಬಲ್ಲವನಾಗಿರಬೇಕೆಂದೂ ಕಾಮನ್ದಕನೀತಿಶಾಸ್ತ್ರದಲ್ಲಿದೆ; ಅಥರ್ವನಿಧೇಃ ಎಂಬ ವಿಶೇಷಣದಿಂದ ವಸಿಷ್ಠರಲ್ಲಿ ಪುರೋಹಿತರಿಗಿರಬೇಕಾದ ಯೋಗ್ಯತೆ ಇತ್ತೆಂಬ ಅಭಿಪ್ರಾಯವು ತೋರುವದು.

ಉಪಪನ್ನಂ ನನು ಶಿವಂ ಸಪ್ತಸ್ವಙ್ಗೇಷು ಯಸ್ಯ ಮೇ ।
ದೈವೀನಾಂ ಮಾನುಷೀಣಾಂ ಚ ಪ್ರತಿಕರ್ತಾ ತ್ವಮಾಪದಾಮ್ ॥೬೦॥

ಅನ್ವಯ. [ಯಸ್ಯ ಮೇ ದೈವೀನಾಂ ಮಾನುಷೀಣಾಂ ಚ ಆಪದಾಂ ತ್ವಂ ಪ್ರತಿಕರ್ತಾ (ಅಸಿ) (ತಸ್ಯ ಮೇ) ಸಪ್ತಸು ಅಙ್ಗೇಷು ಶಿವಂ ಉಪಪನ್ನಂ ನನು]

ಅರ್ಥ. ಯಸ್ಯ-ಯಾವ ಮೇ-ನನ್ನ ದೈವೀನಾಂ-ದೇವತೆಗಳಿಂದಾಗುವ ಮಾನುಷೀಣಾಂ ಚ-ಮತ್ತು ಮನುಷ್ಯರಿಂದಾಗುವ ಆಪದಾಂ-ತೊಂದರೆಗಳಿಗೆ ತ್ವಂ-ನೀನು ಪ್ರತಿಕರ್ತಾ-ಪ್ರತೀಕಾರ ಮಾಡುವಾತನು+ಅಸಿ-ಆಗಿದ್ದೀಯೊ + ತಸ್ಯ ಮೇ-ಆ ನನಗೆ ಸಪ್ತಸು-ಏಳು ಅಙ್ಗೇಷು-ರಾಜ್ಯಾಂಗಗಳಲ್ಲಿ ಶಿವಂ-ಕುಶಲವು ಉಪಪನ್ನಂ ನನು - ಯುಕ್ತವೆ ಅಲ್ಲವೆ?

ತಾತ್ಪರ್ಯ. ದೈವಿಕವಾದ ಆಪತ್ತುಗಳನ್ನೂ ಮನುಷ್ಯರಿಂದಾಗುವ ಆಪತ್ತುಗಳನ್ನೂ ಪರಿಹರಿಸಬಲ್ಲ ತಾವು ಗುರುಗಳಾಗಿರುವಾಗ ನನಗೆ ರಾಜ್ಯದ ಸಕಲಭಾಗಗಳಲ್ಲಿಯೂ ಕುಶಲವೆ ಸರಿ.

ವಿಗ್ರಹವಾಕ್ಯಗಳು. ೧ ದೇವೇಭ್ಯ ಆಗತಾಃ-ದೈವ್ಯಃ (ತ.ವೃ.) ತಾಸಾಂ - ದೈವೀನಾಂ. ೨ ಮಾನುಷೇಭ್ಯ ಆಗತಾಃ- ಮಾನುಷ್ಯಃ (ತ.ವೃ.); ತಾಸಾಂ - ಮಾನುಷೀಣಾಂ.

ವ್ಯಾಕರಣವಿಶೇಷ. ೧ ನನು-ಪ್ರಶ್ನೆ, ಅವಧಾರಣೆ, ಅನುಮತಿ, ಸಮಾಧಾನ, ಕರೆಯು

ವದು-ಎಂಬರ್ಥಗಳಲ್ಲಿ ಈ ಅವ್ಯಯವನ್ನು ಉಪಯೋಗಿಸುವರು; ಇಲ್ಲಿ ಅವಧಾರಣೆ (emphasis) ಎಂಬರ್ಥದಲ್ಲಿ ಬಂದಿದೆ. ಯುಕ್ತವೇ ಸರಿ ಎಂದರ್ಥ. ೨ ಸಪ್ತಸು ನಕರಾನ್ತ ನಪುಂಸಕ; ಇದು ನಿತ್ಯಬಹು ವಚನ, ಮೂರು ಲಿಂಗದಲ್ಲಿಯೂ ಒಂದೇ ರೂಪ. ೩ ಆಪದಾಮ್-ದಕರಾನ್ತ ಸ್ತ್ರೀಲಿಂಗ ಇದು ಕರ್ಮಣಿ ಷಷ್ಠೀ; ಆಪದಾಂ ಪ್ರತಿಕರ್ತಾ-ಎಂದರೆ ಆಪತ್ತುಗಳನ್ನು ಹೋಗಲಾಡಿಸುವವನು ಎಂದರ್ಥ. ೪ ಪ್ರತಿಕರ್ತಾ ಎಂಬುದಕ್ಕೆ 'ಪ್ರತಿಹನ್ತಾ' ಎಂದು ಪಾಠವುಂಟು, ನಾಶಮಾಡುವವನು ಎಂದರ್ಥ; ಪ್ರತಿಹರ್ತಾ-ಎಂದೂ ಪಾಠವುಂಟು, ಪರಿಹರಿಸುವವನು ಎಂದು ಅರ್ಥ.

ವಿಚಾರ. ೧ ರಾಜನು, ಮಂತ್ರಿ, ಸ್ನೇಹಿತರಾಜ, ಕೋಶ, ರಾಷ್ಟ್ರ, ದುರ್ಗ, ಸೈನ್ಯ-ಇವು ರಾಜ್ಯದ ಸಪ್ತಾಂಗಗಳು. ೨ ಆಪತ್ತುಗಳನ್ನು ಕಾಮನ್ದಕನೀತಿಶಾಸ್ತ್ರದಲ್ಲಿ ವಿಂಗಡಿಸಿ ಹೇಳಿರುವದು ಹೇಗೆಂದರೆ:-ದೈವಿಕವಾದ ಆಪತ್ತುಗಳು:- ಹುತಾಶನೋ ಜಲಂ ವ್ಯಾಧಿರ್ದುರ್ಭಿಕ್ಷಂ ಮರಣಂ ತಥಾ । ಇತಿ ಪಞ್ಚವಿಧಂ ದೈವಂ ಮಾನುಷಂ ವ್ಯಸನಂ ತತಃ ॥ ಮಾನುಷವಾದ ಆಪತ್ತುಗಳು:- ಆಯುಕ್ತಕೇಭ್ಯಶ್ಚೌರೇಭ್ಯಃ ಪರೇಭ್ಯೋ ರಾಜವಲ್ಲಭಾತ್ । ಪೃಥಿವೀಪತಿಲೋಭಾಚ್ಚ ನರಾಣಾಂ ಪಞ್ಚಧಾ ಮತಮ್ ॥ (ಅಧಿಕಾರಿಗಳು, ಕಳ್ಳರು, ಶತ್ರುಗಳು, ಅರಸನಿಗೆ ಬೇಕಾದವರು-ಇವರಿಂದ ಆಗುವ ವಿಪತ್ತುಗಳೂ ರಾಜನ ದುರಾಶೆಯಿಂದ ಆಗುವ ವಿಪತ್ತೂ-ಇವೈದೂ ಮಾನುಷ ವಿಪತ್ತುಗಳು.)

ತವ ಮನ್ತ್ರಕೃತೋ ಮನ್ತ್ರೈರ್ದೂರಾತ್ ಪ್ರಶಮಿತಾರಿಭಿಃ ।
ಪ್ರತ್ಯಾದಿಶ್ಯನ್ತ ಇವ ಮೇ ದೃಷ್ಟಲಕ್ಷ್ಯಭಿದಃ ಶರಾಃ ॥೬೧॥

ಅನ್ವಯ. [ದೂರಾತ್ ಪ್ರಶಮಿತಾರಿಭಿಃ ಮನ್ತ್ರಕೃತಃ ತವ ಮನ್ತ್ರೈಃ ದೃಷ್ಟ ಲಕ್ಷ್ಯಭಿದಃ ಮೇ ಶರಾಃ ಪ್ರತ್ಯಾದಿಶ್ಯನ್ತ ಇವ]

ಅರ್ಥ. ದೂರಾತ್-ದೂರದಿಂದಲೆ ಪ್ರಶಮಿತಾರಿಭಿಃ-(ಪ್ರಶಮಿತ-ನಾಶ ಗೊಳಿಸಲ್ಪಟ್ಟ ಅರಿಭಿಃ-ಶತ್ರುಗಳುಳ್ಳ) ಶತ್ರುಗಳನ್ನು ನಾಶಪಡಿಸಿರುವ ಮನ್ತ್ರ ಕೃತಃ-ಮಂತ್ರವನ್ನು ಸೃಷ್ಟಿಮಾಡಿರುವ ತವ- ನಿನ್ನ ಮನ್ತ್ರೈಃ - ಮನ್ತ್ರಗಳಿಂದ ದೃಷ್ಟಲಕ್ಷ್ಯಭಿದಃ - (ದೃಷ್ಟ-ನೋಡಲ್ಪಟ್ಟ ಲಕ್ಷ್ಯ-ಗುರಿಯನ್ನು ಭಿದಃ-ಭೇದಿಸುವ) ಪ್ರತ್ಯಕ್ಷವಾದ ಗುರಿಯನ್ನು ಮಾತ್ರ ಹೊಡೆಯಬಲ್ಲ ಮೇ - ನನ್ನ ಶರಾಃ - ಬಾಣಗಳು ಪ್ರತ್ಯಾದಿಶ್ಯನ್ತ ಇವ-ತಿರಸ್ಕರಿಸಲ್ಪಟ್ಟಿವೆಯೊ ಎಂಬಂತೆ ಇವೆ.

ತಾತ್ಪರ್ಯ. ಹೊಸ ಮಂತ್ರಗಳನ್ನು ಕಂಡುಹಿಡಿದಂಥ ಮಹನೀಯರಾದ ತಾವು ಮಂತ್ರಗಳನ್ನುಚ್ಚರಿಸಿದ ಮಾತ್ರದಿಂದ ನನ್ನ ಶತ್ರುಗಳು ನಾಶವಾಗುತ್ತಿರು ವುದರಿಂದ ನನ್ನ ಬಾಣಗಳಿಂದ ಆಗಬೇಕಾದದ್ದೇನೂ ಇಲ್ಲವೆಂದು ಮಂತ್ರಗಳು

ಅವನ್ನು ತಿರಸ್ಕರಿಸುವಂತೆ ಇದೆ.

ವಿಗ್ರಹವಾಕ್ಯಗಳು. ೧ ಮನ್ತ್ರಾನ್ ಕೃತವಾನ್-ಮನ್ತ್ರಕೃತ್ (ಕೃ. ವೃ.); ತಸ್ಯ-ಮನ್ತ್ರಕೃತಃ ೨ ಪ್ರಶಮಿತಾಃ ಅರಯಃ ಯೈಸ್ತೇ-ಪ್ರಶಮಿತಾರಯಃ (ತೃ. ಬ.); ತೈಃ-ಪ್ರಶಮಿತಾರಿಭಿಃ ೩ ದೃಷ್ಟಂ ಚ ತತ್ ಲಕ್ಷ್ಯಂ ಚ-ದೃಷ್ಟಲಕ್ಷ್ಯಂ (ವಿ. ಪೂ. ಕ.); ದೃಷ್ಟಲಕ್ಷ್ಯಂ ಭಿನ್ದನ್ತೀತಿ-ದೃಷ್ಟಲಕ್ಷ್ಯಭಿದಃ (ಕೃ. ವೃ.).

ವ್ಯಾಕರಣವಿಶೇಷ. ೧ ಮನ್ತ್ರಕೃತಃ-ಮಂತ್ರವನ್ನು ಮಾಡಿದವನು ಎಂಬರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದಿದೆ. ಕ್ವಿಪ್ ಪ್ರತ್ಯಯದ ಹಿಂದಿನ ಧಾತುವು ಹ್ರಸ್ವಸ್ವರಾನ್ತವಾಗಿದ್ದರೆ 'ತ್' ಎಂಬ ಆಗಮವು ಬರುವದು; ಕ್ವಿಪ್ ಪ್ರತ್ಯಯಕ್ಕೆ ಯಾವಾಗಲೂ ಲೋಪವಾಗುತ್ತದೆ. ಈ ಪ್ರತ್ಯಯವು ಭೂತಕಾಲದ ಅರ್ಥದಲ್ಲಿ ಮಾತ್ರ ಬರುವದರಿಂದ ಮನ್ತ್ರಂ ಕರೋತೀತಿ-ಮನ್ತ್ರಕೃತ್ ಎಂದಾಗಲಿ ಮನ್ತ್ರಂ ಕರಿಷ್ಯತೀತಿ-ಮನ್ತ್ರಕೃತ್ ಎಂದಾಗಲಿ ವಿಗ್ರಹವಾಗಲಾರದು. ೨ ಪ್ರತ್ಯಾದಿಶ್ಯನ್ತೇ-ದಿಶ ಅತಿಸರ್ಜನೇ (ದಿಶ್-ತೋರಿಸು,ಅರ್ಪಣೆಮಾಡು) ಎಂಬ ೬ನೆಯ ಗಣದ ಧಾತುವಿಗೆ ಪ್ರತಿ, ಆ-ಎಂಬ ಉಪಸರ್ಗಗಳು ಸೇರಿ ನಿರಾಕರಿಸು ಎಂಬರ್ಥ ಬಂದಿದೆ; ಕರ್ಮಣಿ ಲಟ್, ಆ. ಪ್ರ. ಬ.

ವಿಚಾರ. ಮಾನುಷವಾದ ಆಪತ್ತು ವಸಿಷ್ಠರಿಂದ ಹೇಗೆ ಪರಿಹರಿಸಲ್ಪಟ್ಟಿದೆ ಎಂಬುದನ್ನು ಇಲ್ಲಿ ಹೇಳಿದೆ.

ಹವಿರಾವರ್ಜಿತಂ ಹೋತಸ್ತ್ವಯಾ ವಿಧಿವದಗ್ನಿಷು ।
ವೃಷ್ಟಿರ್ಭವತಿ ಸಸ್ಯಾನಾಮ್, ಅವಗ್ರಹವಿಶೋಷಿಣಾಮ್ ॥೬೨॥

ಅನ್ವಯ. [ಹೋತಃ ತ್ವಯಾ ವಿಧಿವತ್ ಅಗ್ನಿಷು ಆವರ್ಜಿತಂ ಹವಿಃ ಅವಗ್ರಹವಿಶೋಷಿಣಾಂ ಸಸ್ಯಾನಾಂ ವೃಷ್ಟಿಃ ಭವತಿ]

ಅರ್ಥ. ಹೋತಃ-ಹೋಮಮಾಡುವಾತನೆ ತ್ವಯಾ-ನಿನ್ನಿಂದ ವಿಧಿವತ್ - ಶಾಸ್ತ್ರೋಕ್ತವಿಧಿಯಂತೆ ಅಗ್ನಿಷು-ಅಗ್ನಿಗಳಲ್ಲಿ ಆವರ್ಜಿತಂ-ಹಾಕಲ್ಪಟ್ಟ ಹವಿಃ - ಹೋಮದ್ರವ್ಯವು ಅವಗ್ರಹವಿಶೋಷಿಣಾಂ-(ಅವಗ್ರಹ-ಮಳೆಯಿಲ್ಲದಿರುವಿಕೆಯಿಂದ ವಿಶೋಷಿಣಾಂ-ಒಣಗುತ್ತಿರುವ) ಮಳೆಯಿಲ್ಲದೆ ಒಣಗುತ್ತಿರುವ ಸಸ್ಯಾನಾಂ-ಪೈರು ಗಳಿಗೆ ವೃಷ್ಟಿಃ-ಮಳೆಯು ಭವತಿ-ಆಗುತ್ತದೆ.

ವಿಗ್ರಹವಾಕ್ಯಗಳು. ೧ ಜುಹೋತೀತಿ-ಹೋತಾ (ಕೃ. ವೃ.); ತಸ್ಯ ಸಂಬುದ್ಧಿಃ - ಹೋತಃ. ೨ ವಿಧಿಮರ್ಹತಿ ವಿಧಿವತ್ (ತ. ವೃ.) ೩ ಅವಗ್ರಹೇಣ ವಿಶುಷ್ಯನ್ತೀತಿ - ಅವಗ್ರಹವಿಶೋಷಿಣಃ (ಕೃ. ವೃ.); ತೇಷಾಂ-ಅವಗ್ರಹವಿಶೋಷಿಣಾಮ್.

ವ್ಯಾಕರಣವಿಶೇಷ. ೧ ವಿಧಿವತ್-ಅವ್ಯಯ. ೨ ಸಸ್ಯಾನಾಂ-ಇದಕ್ಕೆ ಶಸ್ಯಾನಾಂ-ಎಂಬ ರೂಪವೂ ಉಂಟು.

ವಿಚಾರ. ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥ ಅಗ್ನಿಯಲ್ಲಿ ಮಾಡಿದ ಹೋಮವು ಸೂರ್ಯನನ್ನು ಸೇರುವದೆಂದೂ ಸೂರ್ಯನಿಂದ ಮಳೆಯಾಗಿ ಮಳೆಯಿಂದ ಆಹಾರವೂ ಆಹಾರದಿಂದ ಪ್ರಾಣಿಗಳೂ ಉಂಟಾಗುವವೆಂದೂ ಸ್ಮೃತಿಯುಂಟು. ಈ ಅರ್ಥವನ್ನು ಕವಿಯು ಸೂಚಿಸಿರುತ್ತಾನೆ. ದೈವಿಕವಾದ ಆಪತ್ತು ವಸಿಷ್ಠರಿಂದ ಹೇಗೆ ಪರಿಹಾರವಾಗಿರುವದೆಂಬದನ್ನು ಇಲ್ಲಿ ತಿಳಿಸಿರುತ್ತದೆ.

ಪುರುಷಾಯುಷಜೀವಿನ್ಯೋ ನಿರಾತಙ್ಕಾ ನಿರೀತಯಃ ।
ಯನ್ಮದೀಯಾಃ ಪ್ರಜಾಸ್ತಸ್ಯ ಹೇತುಸ್ತ್ವದ್ಬ್ರಹ್ಮವರ್ಚಸಮ್ ॥೬೩॥

ಅನ್ವಯ. [ಮದೀಯಾಃ ಪ್ರಜಾಃ ಪುರುಷಾಯುಷಜೀವಿನ್ಯಃ ನಿರಾತಙ್ಕಾಃ ನಿರೀತಯಃ (ಇತಿ) ಯತ್ ತಸ್ಯ ಹೇತುಃ ತ್ವದ್ಬ್ರಹ್ಮವರ್ಚಸಮ್]

ಅರ್ಥ. ಮದೀಯಾಃ-ನನ್ನ ಪ್ರಜಾಃ-ಪ್ರಜೆಗಳು ಪುರುಷಾಯುಷಜೀವಿನ್ಯಃ - ಪುರುಷಾಯುಸ್ಸನ್ನು ಜೀವಿಸುವವರು ನಿರಾತಙ್ಕಾಃ- ಭಯವಿಲ್ಲದವರು ನಿರೀತಯಃ - ಈತಿಬಾಧೆಗಳಿಲ್ಲದವರು + ಇತಿ ಯತ್-ಹೀಗೆಂಬುದು ಯಾವದೋ ತಸ್ಯ - ಅದರ ಹೇತುಃ-ಕಾರಣವು ತ್ವದ್ಬ್ರಹ್ಮವರ್ಚಸಮ್-ನಿನ್ನ ಬ್ರಹ್ಮವರ್ಚಸ್ಸು.

ತಾತ್ಪರ್ಯ. ನನ್ನ ಪ್ರಜೆಗಳು ಭಯವಿಲ್ಲದೆಯೂ ಈತಿಬಾಧೆಗಳಿಲ್ಲದೆಯೂ ಪೂರ್ಣಾಯುಸ್ಸುಳ್ಳವರಾಗಿರುವದಕ್ಕೆ ನಿಮ್ಮ ಬ್ರಹ್ಮವರ್ಚಸ್ಸೆ ಕಾರಣವು.

ವಿಗ್ರಹವಾಕ್ಯಗಳು. ೧ ಪುರುಷಸ್ಯ ಆಯುಃ - ಪುರುಷಾಯುಷಮ್ (ಷ. ತ.); ಪುರುಷಾಯುಷಂ ಜೀವನ್ತೀತಿ-ಪುರುಷಾಯುಷಜೀವಿನ್ಯಃ (ಕೃ. ವೃ.) ೨ ನಿರ್ಗತಃ ಆತಙ್ಕಃ ಯಾಭ್ಯಸ್ತಾಃ- ನಿರಾತಙ್ಕಾಃ (ಪ್ರಾ. ಬ.) ೩ ನಿರ್ಗತಾಃ ಈತಯಃ ಯಾಭ್ಯಸ್ತಾಃ - ನಿರೀತಯಃ (ಪ್ರಾ. ಬ) ೪ ಮಮ ಇಮಾಃ-ಮದೀಯಾಃ (ತ. ವೃ.) ೫ ಬ್ರಹ್ಮಣೋ ವರ್ಚಃ-ಬ್ರಹ್ಮವರ್ಚಸಮ್ (ಷ. ತ.); ತವ ಬ್ರಹ್ಮವರ್ಚಸಂ-ತ್ವದ್ಬ್ರಹ್ಮವರ್ಚಸಮ್.

ವ್ಯಾಕರಣವಿಶೇಷ. ಆಯುಃ ಎಂಬುದು ಸಕಾರಾನ್ತವಾದರೂ ಸಮೀಪದಲ್ಲಿ ಅಚ್(ಅ) ಪ್ರತ್ಯಯವು ಬಂದು ಪುರುಷಾಯುಷಶಬ್ದವು ಅಕಾರಾನ್ತವಾಗಿದೆ; ಬ್ರಹ್ಮವರ್ಚಸಶಬ್ದವೂ ಹೀಗೆಯೆ.

ವಿಚಾರ. ಈತಿಬಾಧೆಗಳು ಆರು. ಕಾಮಂದಕನೀತಿಯಲ್ಲಿ ಇವುಗಳನ್ನು ವಿವರಿಸುವದು ಹೇಗೆಂದರೆ:-

ಅತಿವೃಷ್ಟಿರನಾವೃಷ್ಟಿರ್ಮೂಷಕಾಃ ಶಲಭಾಃ ಶುಕಾಃ ।
ಅತ್ಯಾಸನ್ನಾಶ್ಚ ರಾಜಾನಃ ಷಡೇತಾ ಈತಯಃ ಸ್ಮೃತಾಃ ॥

ತ್ವಯ್ಯೈವಂ ಚಿನ್ತ್ಯಮಾನಸ್ಯ ಗುರುಣಾ ಬ್ರಹ್ಮಯೋನಿನಾ ।
ಸಾನುಬನ್ಧಾಃ ಕಥಂ ನ ಸ್ಯುಃ ಸಮ್ಪದೋ ಮೇ ನಿರಾಪದಃ ॥೬೪॥

ಅನ್ವಯ. [ಬ್ರಹ್ಮಯೋನಿನಾ ಗುರುಣಾ ತ್ವಯಾ ಏವಂ ಚಿನ್ತ್ಯಮಾನಸ್ಯ ನಿರಾಪದಃ ಮೇ ಸಂಪದಃ ಸಾನುಬನ್ಧಾಃ ಕಥಂ ಹೇಗೆ ನ ಸ್ಯುಃ]

ಅರ್ಥ. ಬ್ರಹ್ಮಯೋನಿನಾ -(ಬ್ರಹ್ಮ-ಬ್ರಹ್ಮನು ಯೋನಿನಾ-ಕಾರಣವಾಗುಳ್ಳ) ಬ್ರಹ್ಮನ ಮಗನಾದ ಗುರುಣಾ-ಗುರುವಾದ ತ್ವಯಾ-ನಿನ್ನಿಂದ ಏವಂ-ಹೀಗೆ ಚಿನ್ತ್ಯಮಾನಸ್ಯ-ಯೋಚಿಸಲ್ಪಡುತ್ತಿರುವ ನಿರಾಪದಃ- ಆಪತ್ತುಗಳಿಲ್ಲದ ಮೇ-ನನ್ನ ಸಂಪದಃ-ಸಂಪತ್ತುಗಳು ಸಾನುಬನ್ಧಾಃ-ಒಂದೇ ಸಮನಾದವುಗಳಾಗಿ ಕಥಂ ಹೇಗೆ ನ ಸ್ಯುಃ-ಆಗದೆ ಇದ್ದಾವು?

ತಾತ್ಪರ್ಯ. ತಾವು ಹೀಗೆ ನನ್ನ ಯೋಗಕ್ಷೇಮದ ಯೋಚನೆಯಲ್ಲಿರುವದರಿಂದ ನನ್ನ ಸಂಪತ್ತು ಒಂದೇ ಸಮನೆ ವೃದ್ಧಿಹೊಂದುತ್ತಿರುವದೂ ಯಾವ ಆಪತ್ತು ಇಲ್ಲದಿರುವದೂ ಏನೂ ಆಶ್ಚರ್ಯವಲ್ಲ.

ವಿಗ್ರಹವಾಕ್ಯಗಳು. ೧ ಚಿನ್ತ್ಯತೇ ಇತಿ-ಚಿನ್ತ್ಯಮಾನಃ (ಕೃ.ವೃ.); ತಸ್ಯ-ಚಿನ್ತ್ಯಮಾನಸ್ಯ. ೨ ಬ್ರಹ್ಮಾ ಯೋನಿಃ ಯಸ್ಯ ಸಃ-ಬ್ರಹ್ಮಯೋನಿಃ (ಷ.ಬ.); ತೇನ-ಬ್ರಹ್ಮಯೋನಿನಾ. ೩ ಅನುಬನ್ಧೇನ ಸಹ ವರ್ತನ್ತ ಇತಿ-ಸಾನುಬನ್ಧಾಃ (ಸಹ.ಬ.). ೪ ನಿರ್ಗತಾಃ ಆಪದಃ ಯಸ್ಮಾತ್ ಸಃ-ನಿರಾಪತ್ (ಪ್ರಾ.ಬ.); ತಸ್ಯ-ನಿರಾಪದಃ.

ವ್ಯಾಕರಣವಿಶೇಷ. ೧ ಸಾನುಬನ್ಧಾಃ- ಅನುಬಂಧವೆಂದರೆ ಒಂದೇ ಸಮನೆ ಇರುವಿಕೆ (continuity); ಅದರೊಡನೆ ಕೂಡಿರುವದು ಎಂದರೆ ವಿಚ್ಛಿತ್ತಿಯಿಲ್ಲದೆ(uninterrup-ted) ಇರುವದು. ೨ ಸಂಪದಃ-ದಕಾರಾನ್ತ ಸ್ತ್ರೀಲಿಂಗ. ೩ ಸ್ಯುಃ-ಅಸ ಭುವಿ (ಅಸ್-ಇರು) ೨ನೆ ಗಣ, ಲಿಙ್, ಪ.ಪ್ರ.ಬ.

ವಿಚಾರ. ವಸಿಷ್ಠರು ಬ್ರಹ್ಮನ ಮಾನಸಪುತ್ರರೆಂದು ಪುರಾಣದಲ್ಲಿ ಹೇಳಿದೆ.

ಕಿಂ ತು ವಧ್ವಾಂ ತವೈತಸ್ಯಾಮದೃಷ್ಟಸದೃಶಪ್ರಜಮ್ ।
ನ ಮಾಮವತಿ ಸದ್ವೀಪಾ ರತ್ನಸೂರಪಿ ಮೇದಿನೀ ॥೬೫॥

ಅನ್ವಯ. [ಕಿಂ ತು ತವ ಏತಸ್ಯಾಂ ವಧ್ವಾಂ ಅದೃಷ್ಟಸದೃಶಪ್ರಜಂ ಮಾಂ ಸದ್ವೀಪಾ ರತ್ನಸೂರಪಿ ಮೇದಿನೀ ನ ಅವತಿ]

ಅರ್ಥ. ಕಿಂ ತು-ಆದರೆ ತವ-ನಿನ್ನ ಏತಸ್ಯಾಂ-ಈ ವಧ್ವಾಂ-ಸೊಸೆಯಲ್ಲಿ ಅದೃಷ್ಟಸದೃಶಪ್ರಜಂ-(ಅದೃಷ್ಟ-ಕಾಣಲ್ಪಡದೆ ಇರುವ ಸದೃಶ-ಸಮಾನವಾದ

ಪ್ರಜಂ - ಸಂತಾನವುಳ್ಳ) ಅನುರೂಪವಾದ ಸಂತಾನವನ್ನು ಕಾಣದ ಮಾಂ-ನನ್ನನ್ನು ಸದ್ವೀಪಾ-ದ್ವೀಪಗಳಿಂದ ಕೂಡಿ ರತ್ನಸೂರಪಿ-ರತ್ನಗಳನ್ನು ಕೊಡುವಂಥದ್ದಾಗಿದ್ದರೂ ಮೇದಿನೀ-ಭೂಮಿಯು ನ ಅವತಿ-ಸಂತೋಷಗೊಳಿಸುವದಿಲ್ಲ.

ತಾತ್ಪರ್ಯ. ಆದರೆ ಈ ಸುದಕ್ಷಿಣೆಯಲ್ಲಿ ತಕ್ಕ ಮಗನನ್ನು ಪಡೆಯದಿರುವ ನನಗೆ ಸಕಲದ್ವೀಪಗಳಿಂದ ಕೂಡಿ ರತ್ನಭರಿತವಾದ ಭೂಮಿಯಿಂದ ಕೂಡ ಮನಸ್ಸಿಗೆ ಸಂತೋಷವಾಗುವ ಹಾಗಿಲ್ಲ.

ವಿಗ್ರಹವಾಕ್ಯಗಳು. ೧ ನ ದೃಷ್ಟಾ-ಅದೃಷ್ಟಾ (ನ.ತ.); ಸದೃಶಾ ಚ ಸಾ ಪ್ರಜಾ ಚ-ಸದೃಶಪ್ರಜಾ (ವಿ.ಪೂ.ಕ.); ಅದೃಷ್ಟಾ ಸದೃಶಪ್ರಜಾ ಯೇನ ಸಃ-ಅದೃಷ್ಟಸದೃಶಪ್ರಜಃ (ತೃ.ಬ.); ತಂ-ಅದೃಷ್ಟಸದೃಶಪ್ರಜಮ್. ೨ ದ್ವಿರ್ಗತಾಃ ಆಪಃ ಯೇಷು ತಾನಿ-ದ್ವೀಪಾನಿ (ಸ.ಬ.); ತೈಃ-ದ್ವೀಪೈಃ; ದ್ವೀಪೈಃ ಸಹ ವರ್ತತ ಇತಿ-ಸದ್ವೀಪಾ. ೩ ರತ್ನಾನಿ ಸೂಯತೇ ಇತಿ-ರತ್ನಸೂಃ (ಕೃ.ವೃ).

ವ್ಯಾಕರಣವಿಶೇಷ. ಅವತಿ ಅವ-ರಕ್ಷಣಗತಿಕಾನ್ತಿಪ್ರೀತಿತೃಪ್ತ್ಯವಗಮಪ್ರವೇಶಶ್ರವಣ ಸ್ವಾಮ್ಯರ್ಥಯಾಚನಕ್ರಿಯೇಚ್ಛಾದೀಪ್ತ್ಯವಾಪ್ತ್ಯಾಲಿಙ್ಗನಹಿಂಸಾದಾನಭಾಗವೃದ್ಧಿಷು (ಅವ್ - ರಕ್ಷಿಸು, ಹೋಗು, ಹೊಳೆ,ಪ್ರೀತಿಸು, ತೃಪ್ತಿಗೊಳಿಸು, ತಿಳಿ, ಪ್ರವೇಶಿಸು, ಕೇಳು, ಆಳು, ಬೇಡು. ಮಾಡುವದಕ್ಕೆ ಬಯಸು, ಮಿಂಚು, ಪಡೆ, ಅಪ್ಪಿಕೊ, ಕೊಲ್ಲು, ತೆಗೆದುಕೊ, ಹಂಚು, ಬೆಳೆ) ಎಂಬ ಒಂದನೆಯ ಗಣದ ಧಾತುವಿನ ಲಟ್.ಪ.ಪ್ರ.ಏ. ಇಲ್ಲಿ ಪ್ರೀತಿಗೊಳಿಸು (please) ಎಂಬರ್ಥದಲ್ಲಿ ಪ್ರಯೋಗಮಾಡಿರುತ್ತದೆ.

ವಿಚಾರ. ಸದ್ವೀಪಾ ಎಂಬುದರಿಂದ ತಾನು ಚಕ್ರವರ್ತಿಯಾಗಿದೇನೆಂದು ಹೇಳಿದಂತಾಯಿತು; ರತ್ನಸೂಃ - ಎಂದದ್ದರಿಂದ ಧನಸಂಪತ್ತಿಗೇನೂ ಕಡಿಮೆಯಿಲ್ಲವೆಂದಂತೆ ಆಯಿತು. ಎಲ್ಲಾ ರತ್ನಗಳಿದ್ದರೂ ಪುತ್ರರತ್ನವಿಲ್ಲದ ತನಗೆ ಚಕ್ರವರ್ತಿಯ ಪದವಿಯು ಕೂಡ ಸಂತೋಷಗೊಳಿಸುವ ಹಾಗಿಲ್ಲವೆಂದು ಭಾವ. ಸುದಕ್ಷಿಣೆಯನ್ನು ವಸಿಷ್ಠರ ಸೊಸೆಯೆಂದಿರುವದು ಉಪಚಾರಕ್ಕೆ.

ನೂನಂ ಮತ್ತಃ ಪರಃ ವಂಶ್ಯಾಃ ಪಿಣ್ಡವಿಚ್ಛೇದದರ್ಶಿನಃ ।
ನ ಪ್ರಕಾಮಭುಜಃ ಶ್ರಾದ್ಧೇ ಸ್ವಧಾಸಂಗ್ರಹತತ್ಪರಾಃ ॥೬೬॥

ಅನ್ವಯ. [ಮತ್ತಃ ಪರಂ ಪಿಣ್ಡವಿಚ್ಛೇದದರ್ಶಿನಃ ವಂಶ್ಯಾಃ ಸ್ವಧಾಸಂಗ್ರಹ ತತ್ಪರಾಃ ಪ್ರಕಾಮಭುಜಃ ನ (ಭವನ್ತಿ) ನೂನಂ]

ಅರ್ಥ. ಮತ್ತಃ ಪರಂ-ನನ್ನ ತರುವಾಯ ಪಿಣ್ಡವಿಚ್ಛೇದದರ್ಶಿನಃ-(ಪಿಂಡ - ಪಿಂಡದ ವಿಚ್ಛೇದ-ನಿಂತುಹೋಗುವಿಕೆಯನ್ನು ದರ್ಶಿನಃ-ಕಾಣುವವರಾದ) ಇನ್ನು ಮೇಲೆ ಪಿಂಡದಾನವು ನಿಂತುಹೋಗಬಹುದೆಂದು ಯೋಚಿಸುವ ವಂಶ್ಯಾಃ-ಪಿತೃಗಳು

ಸ್ವಧಾಸಂಗ್ರಹತತ್ಪರಾಃ-(ಸ್ವಧಾ-ಪಿತೃಭೋಜನದ ಸಂಗ್ರಹ-ಕೂಡಿಹಾಕುವದರಲ್ಲಿ ತತ್ಪರಾಃ-ಆಸಕ್ತರಾಗಿ) ಭೋಜನವನ್ನು ಮುಂದಕ್ಕೆ ಕೂಡಿಹಾಕಿಟ್ಟುಕೊಳ್ಳಬೇಕೆಂದು ಪ್ರಕಾಮಭುಜಃ-ಸಾಕಾಗುವಷ್ಟು ಭೋಜನಮಾಡುವವರು ನ + ಭವನ್ತಿ-ಆಗುವ ದಿಲ್ಲ; ನೂನಂ-ನಿಶ್ಚಯವು.

ತಾತ್ಪರ್ಯ. ಇವನಿಗೆ ಮಕ್ಕಳಿಲ್ಲದ್ದರಿಂದ ಇನ್ನು ಮುಂದೆ ನಮಗೆ ಪಿಂಡ ದಾನವನ್ನು ಕೊಡುವವರು ಇರುವದಿಲ್ಲ; ಆದ್ದರಿಂದ ಮುಂದಕ್ಕೆ ಈ ಭೋಜನದಲ್ಲಿ ಸ್ವಲ್ಪವನ್ನು ಉಳಿಸಿಕೊಂಡಿರಬೇಕು-ಎಂದು ನನ್ನ ಪಿತೃಗಳು ಶ್ರಾದ್ಧದಲ್ಲಿ ಅರೆ ಹೊಟ್ಟೆಯಾಗಿಯೆ ಭೋಜನಮಾಡುವರೆಂದು ತಿಳಿಯಬೇಕಾಗಿದೆ.

ವಿಗ್ರಹವಾಕ್ಯಗಳು. ೧ ವಂಶೇ ಭವಾಃ-ವಂಶ್ಯಾಃ (ತ. ವೃ.). ೨ ಪಿಣ್ಡಸ್ಯ ವಿಚ್ಛೇದಃ-ಪಿಣ್ಡವಿಚ್ಛೇದಃ (ಷ. ತ.); ತಂ-ಪಿಣ್ಡವಿಚ್ಛೇದಮ್; ಪಿಣ್ಡವಿಚ್ಛೇದಂ ಪಶ್ಯನ್ತೀತಿ - ಪಿಣ್ಡವಿಚ್ಛೇದದರ್ಶಿನಃ (ಕೃ. ವೃ.) ೩ ಪ್ರಕಾಮಂ ಭುಞ್ಜತೇ ಇತಿ-ಪ್ರಕಾಮಭುಜಃ (ಕೃ. ವೃ.) ೪ ಸ್ವಧಾ ಸಙ್ಗ್ರಹಃ-ಸ್ವಧಾಸಙ್ಗ್ರಹಃ (ಷ. ತ.); ತಸ್ಮಿನ್-ಸ್ವಧಾಸಙ್ಗ್ರಹೇ; ಸಃ ಪರಃ ಯೇಷಾಂ ತೇ-ತತ್ಪರಾಃ (ಷ. ಬ); ಸ್ವಧಾ ಸಙ್ಗ್ರಹೇ ತತ್ಪರಾಃ - ಸ್ವಧಾಸಙ್ಗ್ರಹತತ್ಪರಾಃ (ಸ. ತ.).

ವ್ಯಾಕರಣವಿಶೇಷ. ೧ ಮತ್ತಃ ಪರಂ-'ಪರಂ' ಎಂಬ ಅವ್ಯಯದ ಯೋಗವಿದ್ದರೆ ಪಂಚಮೀವಿಭಕ್ತಿ ಬರುತ್ತದೆ; ಮತ್ತಃ ಎಂಬಲ್ಲಿರುವ ತಸಿಲ್ (ತಃ) ಎಂಬ ಪ್ರತ್ಯಯವು ಪಂಚಮಿಯ ಅರ್ಥದಲ್ಲಿ ಬಂದಿದೆ. ೨ ಸ್ವಧಾ ಎಂಬುದು ಅವ್ಯಯ.

ಮತ್ಪರಂ ದುರ್ಲಭಂ ಮತ್ವಾ ನೂನಮಾವರ್ಜಿತಂ ಮಯಾ ।
ಪಯಃ ಪೂರ್ವೈಃ ಸ್ವನಿಃಶ್ವಾಸೈಃ ಕವೋಷ್ಣಮುಪಭುಜ್ಯತೇ ॥೬೭॥

ಅನ್ವಯ. [ಮತ್ ಪರಂ ದುರ್ಲಭಂ ಮತ್ವಾ ಮಯಾ ಆವರ್ಜಿತಂ ಪಯಃ ಪೂರ್ವೈಃ ಸ್ವನಿಃಶ್ವಾಸೈಃ ಕವೋಷ್ಣಂ ಉಪಭುಜ್ಯತೇ ನೂನಂ]

ಅರ್ಥ. ಮತ್ ಪರಂ-ನನ್ನ ತರುವಾಯ ದುರ್ಲಭಂ-ಸಿಗಲಾರದ್ದೆಂದು ಮತ್ವಾ - ತಿಳಿದು ಮಯಾ-ನನ್ನಿಂದ ಆವರ್ಜಿತಂ-ಕೊಡಲ್ಪಟ್ಟ ಪಯಃ-ನೀರು ಪೂರ್ವೈಃ-ಪಿತೃಗಳಿಂದ ಸ್ವನಿಃಶ್ವಾಸೈಃ-ತಮ್ಮ ನಿಟ್ಟುಸಿರುಗಳಿಂದ ಕವೋಷ್ಣಂ - ಉಗುರುಬೆಚ್ಚಗಾಗಿರುವಂತೆ ಉಪಭುಜ್ಯತೇ ನೂನಂ-ಕುಡಿಯಲ್ಪಡುತ್ತಿದೆಯೆಂದು ತೋರುತ್ತದೆ.

ತಾತ್ಪರ್ಯ. ಪಿತೃಗಳಿಗೆ ತಣ್ಣಗಿರುವ ತಿಲೋದಕವನ್ನು ಕೊಡುವದೂ ನನ್ನಿಂದ ಆಗುವ ಹಾಗಿಲ್ಲ; ಏಕೆಂದರೆ ಇವನ ತರುವಾಯ ಇನ್ನು ನಮಗೆ ತರ್ಪಣ

ವನ್ನು ಕೊಡುವವರಿಲ್ಲವಲ್ಲ ಎಂದು ಪಿತೃಗಳು ನಿಟ್ಟುಸಿರು ಬಿಡುವದರಿಂದ ಅದು ಬಿಸಿಯಾಗುತ್ತಿರಬೇಕು.

ವಿಗ್ರಹವಾಕ್ಯಗಳು. ೧ ದುಃಖೇನಾಪಿ ಲಬ್ಧುಮಶಕ್ಯಂ-ದುರ್ಲಭಮ್ (ಕೃ.ವೃ.). ೨ ಸ್ವೇಷಾಂ ನಿಃಶ್ವಾಸಾಃ-ಸ್ವನಿಃಶ್ವಾಸಾಃ (ಷ.ತ.); ತೈಃ-ಸ್ವನಿಃಶ್ವಾಸೈಃ. ೩. ಈಷತ್ ಉಷ್ಣಂ-ಕವೋಷ್ಣಮ್ (ವಿ.ಪೂ.ಕ.).

ವ್ಯಾಕರಣವಿಶೇಷ. ೧ ಮತ್-ಪರಂಶಬ್ದದ ಯೋಗದಿಂದ ಪಂಚಮೀವಿಭಕ್ತಿ ಬಂದಿದೆ. ೨ ಪಯಃ-ಸಕಾರಾನ್ತ ನಪುಂಸಕಲಿಂಗ. ೩ ಸ್ವನಿಶ್ವಾಸೈಃ-ಸ್ವಶಬ್ದದ ವಿಚಾರದಲ್ಲಿ ೨೭ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೨೮) ನೋಡಿ. ೪ ಕವೋಷ್ಣಂ-ನಿತ್ಯಸಮಾಸ. ಸ್ವಲ್ಪ ಎಂಬರ್ಥದ ಕು ಶಬ್ದಕ್ಕೆ ಕವ ಎಂಬ ಆದೇಶ ಬಂದಿದೆ; ಕೋಷ್ಣಂ, ಕದುಷ್ಣಂ ಎಂಬ ರೂಪಗಳು ಉಂಟು. ಇವೆಲ್ಲಕ್ಕೂ ಉಗುರುಬೆಚ್ಚನೆಯ (lukewarm) ಎಂಬರ್ಥವಿದೆ.

> ಸೋಽಹಮಿಜ್ಯಾವಿಶುದ್ಧಾತ್ಮಾ ಪ್ರಜಾಲೋಪನಿಮೀಲಿತಃ ।
> ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕ ಇವಾಚಲಃ ॥೬೮॥

ಅನ್ವಯ. [ಇಜ್ಯಾವಿಶುದ್ಧಾತ್ಮಾ ಪ್ರಜಾಲೋಪನಿಮೀಲಿತಃ ಸೋಽಹಂ ಲೋಕಾಲೋಕಃ ಅಚಲ ಇವ ಪ್ರಕಾಶಶ್ಚ ಅಪ್ರಕಾಶಶ್ಚ (ಅಸ್ಮಿ)]

ಅರ್ಥ. ಇಜ್ಯಾವಿಶುದ್ಧಾತ್ಮಾ-(ಇಜ್ಯಾ-ಯಾಗದಿಂದ ವಿಶುದ್ಧ-ವಿಶುದ್ಧವಾದ ಆತ್ಮಾ-ಅಂತಃಕರಣವುಳ್ಳ) ಯಾಗದಿಂದ ಚಿತ್ತಶುದ್ಧಿಯುಳ್ಳವನೂ ಪ್ರಜಾಲೋಪನಿಮೀಲಿತಃ- (ಪ್ರಜಾ-ಸಂತತಿಯ ಲೋಪ-ಇಲ್ಲದಿರುವಿಕೆಯಿಂದ ನಿಮೀಲಿತಃ-ಮುಚ್ಚಲ್ಪಟ್ಟವನಾದ) ಸಂತತಿಯಿಲ್ಲದ್ದೆಂಬ ಕಲಂಕವುಳ್ಳವನೂ ಆಗಿರುವ ಸೋಽಹಂ-ಆ ನಾನು ಲೋಕಾಲೋಕಃ-ಲೋಕಾಲೋಕವೆಂಬ ಅಚಲ ಇವ-ಪರ್ವತದ ಹಾಗೆ ಪ್ರಕಾಶಶ್ಚ-ಪ್ರಕಾಶಿಸುವವನೂ ಅಪ್ರಕಾಶಶ್ಚ-ಪ್ರಕಾಶವಿಲ್ಲದವನೂ + ಅಸ್ಮಿ - ಆಗಿದ್ದೇನೆ.

ತಾತ್ಪರ್ಯ. ಯಜ್ಞವನ್ನು ಮಾಡಿ ಚಿತ್ತಶುದ್ಧಿಯನ್ನೂ ಸಂತತಿಯಿಲ್ಲದೆ ಇರುವದರಿಂದ ಕಲಂಕವನ್ನೂ ಪಡೆದಿರುವ ನಾನು ಬೆಳಕೂ ಕತ್ತಲೆಯೂ ಇರುವ ಚಕ್ರವಾಲಪರ್ವತದಂತೆ ಇರುತ್ತೇನೆ.

ವಿಗ್ರಹವಾಕ್ಯಗಳು. ೧ ಇಜ್ಯಯಾ ವಿಶುದ್ಧಃ-ಇಜ್ಯಾವಿಶುದ್ಧಃ (ತೃ.ತ); ಇಜ್ಯಾವಿಶುದ್ಧಃ ಆತ್ಮಾ ಯಸ್ಯ ಸಃ-ಇಜ್ಯಾವಿಶುದ್ಧಾತ್ಮಾ (ಷ.ಬ.). ೨ ಪ್ರಜಾಯಾಃ ಲೋಪಃ - ಪ್ರಜಾಲೋಪಃ (ಷ.ತ.); ತೇನ - ಪ್ರಜಾಲೋಪೇನ; ಪ್ರಜಾಲೋಪೇನ ನಿಮೀಲಿತಃ - ಪ್ರಜಾಲೋಪನಿಮೀಲಿತಃ (ತೃ.ತ.). ೩ ಲೋಕ್ಯತೇ ಇತಿ-ಲೋಕಃ (ಕೃ. ವೃ.); ನ ಲೋಕಃ-ಅಲೋಕಃ (ನ.ತ.);

ಲೋಕಶ್ಚಾಸೌ ಅಲೋಕಶ್ಚ-ಲೋಕಾಲೋಕಃ (ವಿ. ಉ. ಕ)

ವಿಚಾರ. ಚಕ್ರವಾಲವೆಂಬ ಪರ್ವತದ ಒಳಗಡೆಯಲ್ಲಿ ಮಾತ್ರ ಸೂರ್ಯನ ಬೆಳಕು ಇರುವದರಿಂದ ಅದು ಒಳಗಡೆ ಪ್ರಕಾಶವಾಗಿಯೂ ಹೊರಗಡೆ ಕತ್ತಲೆ ಕವಿದುಕೊಂಡದ್ದಾಗಿಯೂ ಇರುವದೆಂದು ಪುರಾಣಗಳಲ್ಲಿ ವರ್ಣಿಸಿರುತ್ತದೆ.

ಲೋಕಾನ್ತರಸುಖಂ ಪುಣ್ಯಂ ತಪೋದಾನಸಮುದ್ಭವಮ್ ।
ಸನ್ತತಿಃ ಶುದ್ಧವಂಶ್ಯಾ ಹಿ ಪರತ್ರೇಹ ಚ ಶರ್ಮಣೇ ॥೬೯॥

ಅನ್ವಯ. [ತಪೋದಾನಸಮುದ್ಭವಂ ಪುಣ್ಯಂ ಲೋಕಾನ್ತರಸುಖಂ. ಶುದ್ಧವಂಶ್ಯಾ ಸನ್ತತಿಃ ಪರತ್ರ ಇಹ ಚ ಶರ್ಮಣೇ (ಭವತಿ) ಹಿ ]

ಅರ್ಥ. ತಪೋದಾನಸಮುದ್ಭವಂ-(ತಪೋದಾನ-ತಪಸ್ಸು ದಾನ ಇವುಗಳು ಸಮುದ್ಭವಂ-ಕಾರಣವಾಗಿರುವ) ತಪೋದಾನಗಳಿಂದುಂಟಾಗಿರುವ ಪುಣ್ಯಂ - ಪುಣ್ಯವು ಲೋಕಾನ್ತರಸುಖಂ-(ಲೋಕಾನ್ತರೇ-ಬೇರೆ ಲೋಕದಲ್ಲಿ ಸುಖಂ-ಸುಖ ವಾಗಿರುವದು) ಪರಲೋಕದಲ್ಲಿ ಸುಖವನ್ನು ಕೊಡುವದಾಗಿರುತ್ತದೆ. ಶುದ್ಧವಂಶ್ಯಾ - ಶುದ್ಧವಾದ ವಂಶದಲ್ಲಿ ಆದ ಸನ್ತತಿಃ-ಸಂತತಿಯು ಪರತ್ರ-ಪರದಲ್ಲಿಯೂ ಇಹ ಚ- ಇಲ್ಲಿಯೂ ಶರ್ಮಣೇ-ಸುಖಕ್ಕೋಸ್ಕರ + ಭವತಿ ಹಿ-ಆಗುತ್ತದೆಯಲ್ಲವೆ?

ತಾತ್ಪರ್ಯ. ತಪಸ್ಸಿನಿಂದಲೂ ದಾನದಿಂದಲೂ ಪರಲೋಕಸುಖವನ್ನು ಮಾತ್ರ ಪಡೆಯಬಹುದು; ಆದರೆ ಪರಿಶುದ್ಧವಂಶದಲ್ಲಿ ಹುಟ್ಟಿದ ಮಕ್ಕಳು ಈ ಲೋಕದಲ್ಲಿ ಪರಲೋಕದಲ್ಲಿ- ಎರಡು ಕಡೆಯಲ್ಲಿಯೂ ಸುಖವನ್ನು ಕೊಡುವರು.

ವಿಗ್ರಹವಾಕ್ಯಗಳು. ೧ ಅನ್ಯೋ ಲೋಕಃ-ಲೋಕಾನ್ತರಂ (ಮ. ವ್ಯ.); ತಸ್ಮಿನ್ - ಲೋಕಾನ್ತರೇ; ಲೋಕಾನ್ತರೇ ಸುಖಂ-ಲೋಕಾನ್ತರಸುಖಮ್ (ಸ. ತ.). ೨ ತಪಶ್ಚ ದಾನಂ ಚ-ತಪೋದಾನೇ (ದ್ವ.); ಸಮುದ್ಭವತ್ಯಸ್ಮಾತ್‌ಇತಿ - ಸಮುದ್ಭವಃ (ಕೃ. ವ್ಯ.). ತಪೋದಾನೇ ಸಮುದ್ಭವಃ ಯಸ್ಯ ತತ್-ತಪೋದಾನ ಸಮುದ್ಭವಮ್ (ಷ. ಬ.).೩ ಶುದ್ಧಶ್ಚ ಅಸೌ ವಂಶಶ್ಚ-ಶುದ್ಧವಂಶಃ (ವಿ. ಪೂ. ಕ.); ಶುದ್ಧವಂಶೇ ಭವಾ-ಶುದ್ಧವಂಶ್ಯಾ(ತ. ವ್ಯ.).

ವ್ಯಾಕರಣವಿಶೇಷ. ೧ ಲೋಕಾನ್ತರಂ-ಇದು ನಿತ್ಯಸಮಾಸ; ಅನ್ತರ-ಎಂಬ ಮಾತಿಗೆ ಅನ್ಯ ಎಂದರ್ಥ. ವಿಗ್ರಹದಲ್ಲಿ ಅನ್ತರಶಬ್ದವನ್ನು ಹೇಳುವದಿಲ್ಲ, ಸಮಾಸದಲ್ಲಿ ಅನ್ತರಶಬ್ದವು ಉತ್ತರಪ ದವಾಗಿಯೇ ನಿಲ್ಲಬೇಕು. ಶಾಸ್ತ್ರರೀತಿಯಲ್ಲಿ ಪ್ರಯೋಗವು ಒಂದು ಬಗೆಯಾಗಬೇಕಾಗಿದ್ದು ರೂಢಿಯಲ್ಲಿ ಮತ್ತೊಂದು ಬಗೆಯಿಂದ ಪ್ರಯೋಗವಿದ್ದರೆ ಅಂಥ (irregular forms) ಪ್ರಯೋಗಗಳನ್ನು ನಿ ಪಾತವೆಂದು ಕರೆಯುತ್ತಾರೆ. ಕೆಲವು ತತ್ಪುರುಷಸಮಾಸಗಳು ಈ ಬಗೆಯಾಗಿರುತ್ತವೆ. ಈ ಗುಂಪಿಗೆ

ಮಯೂರವ್ಯಂಸಕಾದಿಸಮಾಸವೆಂದು ಕರೆಯುತ್ತಾರೆ. ೨ ತಪೋದಾನಸಮುದ್ಭವಂ-ಇದನ್ನು ತಪೋದಾನಾಭ್ಯಾಂ ಸಮುದ್ಭವಃ ಯಸ್ಯ ತತ್-ಎಂದು ವಿಗ್ರಹ ಬಿಡಿಸಬಹುದು; ಆಗ ತಪೋದಾನಗಳ ದೆಸೆಯಿಂದ ಜನ್ಮವುಳ್ಳ ಎಂದು ಅಕ್ಷರಾರ್ಥವಾಗುತ್ತದೆ. ಆದರೆ ವ್ಯಧಿಕರಣಪದಗಳಿಗೆ ಬಹುವ್ರೀಹಿ ಇಲ್ಲವಾದ್ದರಿಂದ ಹೀಗೆ ಬಿಡಿಸಕೂಡದು.

ತಯಾ ಹೀನಂ ವಿನೇತರ್ಮಾಂ ಕಥಂ ಪಶ್ಯನ್ನ ದೂಯಸೇ ।
ಸಿಕ್ತಂ ಸ್ವಯಮಿವ ಸ್ನೇಹಾದ್ವನ್ಧ್ಯಮಾಶ್ರಮವೃಕ್ಷಕಮ್ ॥೭೦॥

ಅನ್ವಯ. [ವಿನೇತಃ ತಯಾ ಹೀನಂ ಮಾಂ ಸ್ನೇಹಾತ್ ಸ್ವಯಂ ಸಿಕ್ತಂ ವನ್ಧ್ಯಂ ಆಶ್ರಮವೃಕ್ಷಕಮಿವ ಪಶ್ಯನ್ ಕಥಂ ನ ದೂಯಸೇ?]

ಅರ್ಥ. ವಿನೇತಃ-ಗುರುವೆ ತಯಾ-ಅದರಿಂದ ಹೀನಂ-ರಹಿತನಾದ ಮಾಂ - ನನ್ನನ್ನು ಸ್ನೇಹಾತ್-ಪ್ರೀತಿಯಿಂದ ಸ್ವಯಂ-ನಿನ್ನಿಂದಲೆ ಸಿಕ್ತಂ-ನೀರು ಹಾಕಲ್ಪಟ್ಟಿರುವ ವನ್ಧ್ಯಂ-ಗೊಡ್ಡಾಗಿರುವ ಆಶ್ರಮವೃಕ್ಷಕಮಿವ-ಆಶ್ರಮದ ಗಿಡವನ್ನು ಹೇಗೋ ಹಾಗೆ ಪಶ್ಯನ್-ನೋಡುತ್ತಾ ಕಥಂ-ಹೇಗೆ ನ ದೂಯಸೇ-ಸಂಕಟಪಡುವದಿಲ್ಲ?

ತಾತ್ಪರ್ಯ. ನೀವೇ ನೀರು ಹಾಕಿ ಬೆಳಿಸಿದ ಗಿಡವು ಹಣ್ಣುಬಿಡದೆ ಇದ್ದರೆ ನಿಮ್ಮ ಮನಸ್ಸಿಗೆ ವ್ಯಥೆಯಾಗದೆ ಇರುವದೆ? ಅದರಂತೆ ನಿಮ್ಮ ಶಿಷ್ಯನಾದ ನನಗೆ ಸಂತತಿಯಿಲ್ಲದ್ದನ್ನು ಕಂಡು ತಮಗೆ ಪರಿತಾಪವಾಗುವದಿಲ್ಲವೇನು?

ವಿಗ್ರಹವಾಕ್ಯಗಳು. ೧ ವಿನಯತೀತಿ-ವಿನೇತಾ (ಕೃ. ವೃ.); ತಸ್ಯ ಸಂಬುದ್ಧಿಃ - ವಿನೇತಃ. ೨ ಅಲ್ಪೋ ವೃಕ್ಷಃ-ವೃಕ್ಷಕಃ (ತ. ವೃ.); ಆಶ್ರಮೋ ವೃಕ್ಷಕಃ-ಆಶ್ರಮವೃಕ್ಷಕಃ (ಸ. ತ.); ತಂ-ಆಶ್ರಮವೃಕ್ಷಕಮ್.

ವ್ಯಾಕರಣವಿಶೇಷ. ೧ ವಿನೇತಃ-ಋಕಾರಾನ್ತ ಪುಲ್ಲಿಂಗ; ವಿಧಾತಃ-ಎಂಬ ಪಾಠಾನ್ತರವುಂಟು. ಅದಕ್ಕೆ ಸೃಷ್ಟಿಕರ್ತನೆ ಎಂದು ಅರ್ಥವಾಗುವದು. ೨ ತಯಾ ಹೀನಂ-ರಹಿತ ಎಂಬ ಅರ್ಥದಲ್ಲಿರುವ ಶಬ್ದಗಳು ಸೇರಿದರೆ ತೃತೀಯಾ ಬರುವದು. ೩ ಸ್ವಯಂ - ಅವ್ಯಯ; ಇದನ್ನು ಅವಧಾರಣಾರ್ಥಕಸರ್ವನಾಮದ (emphatic pronoun) ಉಪಯೋಗಿಸುವರು. ೪ ದೂಯಸೇ - ದು ಉಪತಾಪೇ (ದು-ಪರಿತಪಿಸು) ಎಂಬ ೫ನೆಯ ಗಣದ ಧಾತುವಿನ ಕರ್ಮಣಿ ಲಟ್, ಆ. ಮ. ಏ.

ವಿಚಾರ. ವಿನೇತಃ, ಅಥವಾ ವಿಧಾತಃ ಎಂಬ ವಿಶೇಷಣದಿಂದ ಸಂತತಿಯನ್ನು ಅನುಗ್ರಹಿಸುವ ಶಕ್ತಿಯು ತಮಗೆ ಇರುವದೆಂದು ಹೇಳಿದಂತೆ ಆಯಿತು.

ಅಸಹ್ಯಪೀಡಂ ಭಗವನ್ನೃಣಮನ್ತ್ಯಮವೇಹಿ ಮೇ ।
ಅರುನ್ತುದಮಿವಾಲಾನಮನಿರ್ವಾಣಸ್ಯ ದನ್ತಿನಃ ॥೭೧॥

ಅನ್ವಯ. [ಭಗವನ್ ಮೇ ಅನ್ತ್ಯಂ ಋಣಂ ಅನಿರ್ವಾಣಸ್ಯ ದನ್ತಿನಃ ಅರುನ್ತುದಂ ಆಲಾನಮಿವ ಅಸಹ್ಯಪೀಡಂ ಅವೇಹಿ]

ಅರ್ಥ. ಭಗವನ್-ಪೂಜ್ಯನೆ ಮೇ-ನನ್ನ ಅನ್ತ್ಯಂ-ಕೊನೆಯ ಋಣಂ-ಋಣವನ್ನು ಅನಿರ್ವಾಣಸ್ಯ-ಸ್ನಾನವಿಲ್ಲದ ದನ್ತಿನಃ - ಆನೆಯ ಅರುನ್ತುದಂ - ಮರ್ಮವನ್ನು ನೋಯಿಸುವ ಆಲಾನಮಿವ-ಕಟ್ಟುವ ಕಂಬದ ಹಾಗೆ ಅಸಹ್ಯಪೀಡಂ-(ಅಸಹ್ಯ - ತಡೆಯುವದಕ್ಕಾಗದ ಪೀಡಂ-ದುಃಖವುಳ್ಳದ್ದನ್ನಾಗಿ) ತಡೆಯಲಾರದಷ್ಟು ದುಃಖವನ್ನು ಕೊಡುವದೆಂದು ಅವೇಹಿ-ತಿಳಿ.

ತಾತ್ಪರ್ಯ. ನೀರಿನಲ್ಲಿ ಮುಳುಗಿ ಸ್ನಾನ ಮಾಡದೆ ಇರುವ ಆನೆಗೆ ಅದನ್ನು ಕಟ್ಟಿರುವ ಕಂಬವನ್ನು ಕಂಡರೆ ಹೇಗೆ ವ್ಯಥೆಯುಂಟಾಗುವದೋ ಹಾಗೆ ನನಗೆ ಪಿತೃಋಣವನ್ನು ಕಳೆದುಕೊಳ್ಳದೆ ಇರುವ ಯೋಚನೆಯಿಂದ ಸಹಿಸಲಾರದಷ್ಟು ದುಃಖವಾಗುತ್ತಿರುವದು.

ವಿಗ್ರಹವಾಕ್ಯಗಳು. ೧ ಸೋಢುಂ ಶಕ್ಯಾ-ಸಹ್ಯಾ (ಕೃ. ವೃ.); ನ ಸಹ್ಯಾ - ಅಸಹ್ಯಾ (ನ. ತ.); ಅಸಹ್ಯಾ ಪೀಡಾ ಯಸ್ಮಿನ್ ತತ್-ಅಸಹ್ಯಪೀಡವ್ (ಸ. ಬ.). ೨ ಅನ್ತೇ ಭವಂ-ಅನ್ತ್ಯಂ (ತ. ವೃ.); ಅನ್ತ್ಯಂ ಚ ತತ್ ಋಣಂ ಚ-ಅನ್ತ್ಯಋಣಂ (ವಿ. ಪೂ. ಕ). ೩ ಅರುಂ ತುದತೀತಿ-ಅರುನ್ತುದವ್ (ಕೃ. ವೃ.). ೪ ನ ವಿದ್ಯತೇ ನಿರ್ವಾಣಂ ಯಸ್ಯ ಸಃ-ಅನಿರ್ವಾಣಃ (ಷ. ಬ.); ತಸ್ಯ-ಅನಿರ್ವಾಣಸ್ಯ ೫ ದನ್ತೌ ಅಸ್ಯ ಸ್ತಃ ಇತಿ-ದನ್ತೀ (ತ. ವೃ.).

ವ್ಯಾಕರಣವಿಶೇಷ. ಅವೇಹಿ-ಇಣ್‌ಗತೌ (ಇ-ಹೋಗು) ಎಂಬ ೨ನೆಯ ಗಣದ ಧಾತುವಿಗೆ ಅವ ಎಂಬ ಉಪಸರ್ಗವು ಸೇರಿ ತಿಳಿಯೆಂದು ಅರ್ಥವಾಗಿದೆ; ಲೋಟ್, ಪ. ಮ. ಏ.

ವಿಚಾರ. ೧ ದೇವಋಣ, ಋಷಿಋಣ, ಪಿತೃಋಣ-ಎಂದು ಋಣಗಳು ಮೂರು; ದೇವಋಣವನ್ನು ಯಜ್ಞಾದಿಗಳಿಂದಲೂ ಋಷಿಋಣವನ್ನು ಶಾಸ್ತ್ರಾಧ್ಯಯನದಿಂದಲೂ ಪಿತೃಋಣವನ್ನು ಸಂತತಿಯನ್ನು ಪಡೆಯುವದರಿಂದಲೂ ತೀರಿಸಿಕೊಳ್ಳಬೇಕು-ಎಂದು ಶಾಸ್ತ್ರವಿರುವದು. ಕೊನೆಯ ಋಣವೆಂದರೆ ಮೂರನೆಯದಾದ ಪಿತೃಋಣವು. ೨ ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿವ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥ (ಪ್ರಾಣಿಗಳ ಹುಟ್ಟು, ನಾಶ, ಆಗು, ಹೋಗು, ಅರಿವು, ಮರವು-ಇವುಗಳನ್ನೆಲ್ಲ ಬಲ್ಲವನು ಭಗವಂತನೆನಿಸುವನು) ಎಂದು ಪುರಾಣವಚನವಿರುವದು. ವಸಿಷ್ಠರಿಗೆ ಈ ವಿಶೇಷಣವು ಹೇಗೆ ಒಪ್ಪುವದೆಂಬುದು ಈ ಸರ್ಗದಲ್ಲಿಯೇ ಮುಂದೆ ಗೊತ್ತಾಗುವದು.

ತಸ್ಮಾನ್ಮುಚ್ಯೇ ಯಥಾ ತಾತ ಸಂವಿಧಾತುಂ ತಥಾರ್ಹಸಿ ।
ಇಕ್ಷ್ವಾಕೂಣಾಂ ದುರಾಪೇಽರ್ಥೇ ತ್ವದಧೀನಾ ಹಿ ಸಿದ್ಧಯಃ ॥೭೨॥

ಅನ್ವಯ. [ತಾತ ತಸ್ಮಾತ್ ಯಥಾ ಮುಚ್ಯೇ ತಥಾ ಸಂವಿಧಾತುಂ ಅರ್ಹಸಿ ಇಕ್ಷ್ವಾಕೂಣಾಂ ದುರಾಪೇ ಅರ್ಥೇ ಸಿದ್ಧಯಃ ತ್ವದಧೀನಾ ಹಿ]

ಅರ್ಥ. ತಾತ-ತಂದೆಯೆ ತಸ್ಮಾತ್ - ಆದರ ದೆಸೆಯಿಂದ ಯಥಾ-ಹೇಗೆ ಮುಚ್ಯೇ-ಬಿಡಲ್ಪಡುತ್ತೇನೋ ತಥಾ-ಹಾಗೆ ಸಂವಿಧಾತುಂ- ಮಾಡುವದಕ್ಕೆ ಅರ್ಹಸಿ - ಯೋಗ್ಯನಾಗಿರುತ್ತೀಯೆ. ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶದವರಿಗೆ ದುರಾಪೇ - ಹೊಂದಲಶಕ್ಯವಾದ ಅರ್ಥೇ-ವಿಷಯದಲ್ಲಿ ಸಿದ್ಧಯಃ-ಸಿದ್ಧಿಗಳು ತ್ವದಧೀನಾ ಹಿ - ನಿನ್ನ ಅಧೀನಗಳಲ್ಲವೆ?

ತಾತ್ಪರ್ಯ. ಆದ್ದರಿಂದ ಸ್ವಾಮಿ, ನಾನು ಈ ಋಣದಿಂದ ಮುಕ್ತನಾಗುವಂತೆ ತಾವು ಮಾಡಬೇಕು; ಏಕೆಂದರೆ ಇಕ್ಷ್ವಾಕುವಂಶದ ಅರಸುಗಳಿಗೆ ಪಡೆಯಲು ಆಗದ ಮಾತೆಂದು ತೋರುವ ಕಾರ್ಯದ ಸಿದ್ಧಿಗಳು ತಮ್ಮ ಶಕ್ತಿಯಿಂದ ಆಗುತ್ತಿರುತ್ತವೆ.

ವಿಗ್ರಹವಾಕ್ಯಗಳು. ೧ ಇಕ್ಷ್ವಾಕೂಣಾವ್ ರಾಜಾನಃ - ಇಕ್ಷ್ವಾಕವಃ (ತ.ವ್ಯ.); ತೇಷಾಂ - ಇಕ್ಷ್ವಾಕೂಣಾಮ್. ೨ ದುಃಖೇನ ಆಪ್ತುಂ ಶಕ್ಯಂ - ದುರಾಪವಮ್ (ಕೃ.ವ್ಯ.); ತಸ್ಮಿನ್-ದುರಾಪೇ ೩ ತ್ವಯಿ ಅಧಿ-ತ್ವದಧೀನಾಃ (ಸ.ತ.).

ವ್ಯಾಕರಣವಿಶೇಷ. ೧ ಸಂವಿಧಾತುಮರ್ಹಸಿ = ಮಾಡಬೇಕು. ೧೧ನೆಯ ಶ್ಲೋಕದ ಶ್ರೋತುಮರ್ಹನ್ತಿ ಎಂಬುದರ ಟಿಪ್ಪಣಿಯನ್ನು (ಪು.೧೨) ನೋಡಿ. ೨ ಯಥಾ -ತಥಾ = ಹೇಗೋ ಹಾಗೆ (so that) ೩ ಇಕ್ಷ್ವಾಕೂಣಾಂ-ಇಲ್ಲಿ ಇಕ್ಷ್ವಾಕುದೇಶದ ರಾಜನು ಎಂಬರ್ಥದಲ್ಲಿ ಏಕವಚನವು ಐಕ್ಷ್ವಾಕಃ ಎಂದಾಗುವದು, ದ್ವಿವಚನ ಐಕ್ಷ್ವಾಕೌ, ಬಹುವಚನ 'ಇಕ್ಷ್ವಾಕವಃ'. ಎಲ್ಲಾ ವಿಭಕ್ತಿಗಳಲ್ಲಿಯೂ ಏಕದ್ವಿವಚನಗಳಲ್ಲಿ ಐಕ್ಷ್ವಾಕ ಎಂಬ ರೂಪವನ್ನೂ ಬಹುವಚನದಲ್ಲಿ ಇಕ್ಷ್ವಾಕು ಎಂಬ ರೂಪವನ್ನೂ ಉಪಯೋಗಿಸಿ ನಡೆಸಬೇಕು. ೩೧ನೆಯ ಶ್ಲೋಕದ 'ಮಗಧವಂಶಜಾ' ಎಂಬುದರ ಟಿಪ್ಪಣಿಯನ್ನು (ಪು.೩೨)ನೋಡಿ. ಇಕ್ಷ್ವಾಕೂಣಾಂ ದುರಾಪೇ-ಎಂಬಲ್ಲಿ ದುರಾಪೇ ಎಂಬುದು ಖಲ್‌ಪ್ರತ್ಯಯವುಳ್ಳ ಕೃದಂತ, ಈಷತ್, ದುರ್, ಸು ಇವುಗಳಿಗೆ ಸೇರಿದ ಧಾತುಗಳಿಗೆ 'ಸುಲಭ' 'ಕಷ್ಟ' ಎಂಬರ್ಥದಲ್ಲಿ ಈ ಪ್ರತ್ಯಯವು ಬರುವದು. ಖಲರ್ಥದ ಕೃದಂತದ ಯೋಗವಿದ್ದರೆ ಷಷ್ಠಿಯು ಬರುವದಿಲ್ಲವೆಂದು ನಿಯಮವಿರುವದು. ಇಲ್ಲಿ ಇಕ್ಷ್ವಾಕೂಣಾಂ ಎಂಬ ಷಷ್ಠಿಯು ಶೇಷಷಷ್ಠಿಯೆಂದೂ ಖಲರ್ಥದ ಜತೆಗೆ ಬರಕೂಡದೆಂದು ನಿಯಮಿಸಿರುವದು ಕಾರಕಷಷ್ಠಿಯೆಂದೂ ಮಲ್ಲಿನಾಥವ್ಯಾಖ್ಯಾನದಲ್ಲಿದೆ; ಕೆಲವು ಕಡೆಯಲ್ಲಿ ಮಹಾಕವಿಪ್ರಯೋಗವುಂಟೆಂದೂ ಅದನ್ನು ಆಲಂಕಾರಶಾಸ್ತ್ರದಲ್ಲಿ ನಿರ್ದೋಷವೆಂದು ಒಪ್ಪಿಕೊಂಡಿರುವರೆಂದೂ ಒಬ್ಬ ವ್ಯಾಖ್ಯಾನಕಾರರು ಬರೆಯುತ್ತಾರೆ. ೪ ತ್ವದಧೀನಾ-ತ್ವಯಿ ಅಧಿ ಎಂದು

ವಿಗ್ರಹ; ಯಾವದಕ್ಕಿಂತ ಹೆಚ್ಚೋ, ಯಾವನು ಒಡೆಯನೆಂದು ಹೇಳುತ್ತೇವೊ ಅದಕ್ಕೆ ಕರ್ಮಪ್ರವಚನೀಯವು ಸೇರಿದಾಗ ಸಪ್ತಮಿ ಬರುವದೆಂದು ನಿಯಮವುಂಟು. 'ಅಧಿ' ಎಂಬುದು ಇಲ್ಲಿ ಕರ್ಮಪ್ರವಚನೀಯವು. ಆದ್ದರಿಂದ ನೀನು ಒಡೆಯನು ಎಂದು ಹೇಳುವ ಮಾತಿಗೆ 'ತ್ವಯಿ' ಎಂದು ಸಪ್ತಮೀವಿಭಕ್ತಿ ಬಂದಿದೆ; 'ಅಧಿ' ಎಂಬುದು ಉತ್ತರಪದವಾಗಿದ್ದರೆ ಖ (ಈನ) ಎಂಬ ಪ್ರತ್ಯಯವು ಬರುವದು. ತ್ವದಧೀನಾಃ ಎಂದಾಯಿತು. ೫ ಸಿದ್ಧಯಃ - ಇಕಾರಾನ್ತ ಸ್ತ್ರೀಲಿಂಗ ೬ ಅರ್ಹ ಪೂಜಾಯಾಂ (ಅರ್ಹ್-ಯೋಗ್ಯನಾಗಿರು) ೧ನೆಯ ಗಣ ಲಟ್, ಪ. ಮ. ಏ. ೭ ಮುಚ್ಯೇ-ಮುಚ್ಲ್ ಮೋಕ್ಷಣೇ (ಮುಚ್-ಬಿಡು) ೬ನೆಯ ಗಣ, ಕರ್ಮಣಿ ಲಟ್ ಆ. ಉ. ಏ.

ಇತಿ ವಿಜ್ಞಾಪಿತೋ ರಾಜ್ಞಾ ಧ್ಯಾನಸ್ತಿಮಿತಲೋಚನಃ ।
ಕ್ಷಣಮಾತ್ರಮೃಷಿಸ್ತಸ್ಥೌ ಸುಪ್ತಮೀನ ಇವ ಹ್ರದಃ ॥೭೩॥

ಅನ್ವಯ. [ಇತಿ ರಾಜ್ಞಾ ವಿಜ್ಞಾಪಿತಃ ಋಷಿಃ ಧ್ಯಾನಸ್ತಿಮಿತಲೋಚನಃ ಕ್ಷಣಮಾತ್ರಂ ಸುಪ್ತಮೀನಃ ಹ್ರದ ಇವ ತಸ್ಥೌ ]

ಅರ್ಥ. ಇತಿ - ಹೀಗೆಂದು ರಾಜ್ಞಾ - ಅರಸನಿಂದ ವಿಜ್ಞಾಪಿತಃ - ಅರಿಕೆಮಾಡಲ್ಪಟ್ಟ ಋಷಿಃ-ಋಷಿಯು ಧ್ಯಾನಸ್ತಿಮಿತಲೋಚನಃ-(ಧ್ಯಾನ-ಧ್ಯಾನದಿಂದ ಸ್ತಿಮಿತ-ನಿಶ್ಚಲವಾದ ಲೋಚನಃ - ಕಣ್ಣುಳ್ಳವನಾಗಿ) ಕ್ಷಣಮಾತ್ರಂ- ಒಂದು ಪಳೆ ಹೊತ್ತು ಸುಪ್ತಮೀನಃ - (ಸುಪ್ತ-ನಿದ್ರಿಸಿದ ಮೀನಃ-ಮೀನುಗಳುಳ್ಳ) ಮೀನುಗಳು ಮಲಗಿರುವ ಹ್ರದ ಇವ - ಮಡುವಿನ ಹಾಗೆ ತಸ್ಥೌ-ಇದ್ದನು.

ತಾತ್ಪರ್ಯ. ಹೀಗೆಂದು ರಾಜನು ಬಿನ್ನವಿಸಲು ವಸಿಷ್ಠರು ಸ್ವಲ್ಪ ಹೊತ್ತು ಧ್ಯಾನಮಗ್ನರಾಗಿ ಸುಮ್ಮನೆ ಇದ್ದರು.

ವಿಗ್ರಹವಾಕ್ಯಗಳು. ೧ ಧ್ಯಾನೇನ ಸ್ತಿಮಿತೇ-ಧ್ಯಾನಸ್ತಿಮಿತೇ (ತೃ. ತ.); ಧ್ಯಾನಸ್ತಿಮಿತೇ ಲೋಚನೇ ಯಸ್ಯ ಸಃ-ಧ್ಯಾನಸ್ತಿಮಿತಲೋಚನಃ (ಷ. ಬ.). ೨ ಕ್ಷಣಃ ಪ್ರಮಾಣಮಸ್ಯ-ಕ್ಷಣಮಾತ್ರಂ (ತ. ವೃ.). ೩ ಸುಪ್ತಾಃ ಮೀನಾಃ ಯಸ್ಮಿನ್ ಸಃ-ಸುಪ್ತಮೀನಃ (ಸ. ಬ.)

ವ್ಯಾಕರಣವಿಶೇಷ. ತಸ್ಥೌ-ಷ್ಠಾ ಗತಿನಿವೃತ್ತೌ (ಸ್ಥಾ-ನಿಲ್ಲು, ಇರು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಏ.

ಸೋಽಪಶ್ಯತ್ ಪ್ರಣಿಧಾನೇನ ಸನ್ತತೇಃ ಸ್ತಮ್ಭಕಾರಣಮ್ ।
ಭಾವಿತಾತ್ಮಾ ಭುವೋ ಭರ್ತುರಥೈನಂ ಪ್ರತ್ಯಬೋಧಯತ್ ॥೭೪॥

ಅನ್ವಯ. [ಸಃ ಪ್ರಣಿಧಾನೇನ ಭಾವಿತಾತ್ಮಾ ಭುವಃ ಭರ್ತುಃ ಸನ್ತತೇಃ ಸ್ತಮ್ಭಕಾರಣಮ್ ಅಪಶ್ಯತ್ ಅಥ ಏನಂ ಪ್ರತ್ಯಬೋಧಯತ್]

ಅರ್ಥ. ಸಃ-ಆತನು ಪ್ರಣಿಧಾನೇನ - ಚಿತ್ತೈಕಾಗ್ರತೆಯಿಂದ ಭಾವಿತಾತ್ಮಾ - ಶುದ್ಧವಾದ ಅಂತಃಕರಣವುಳ್ಳವನಾಗಿ ಭುವಃ-ಭೂಮಿಯ ಭರ್ತುಃ-ಒಡೆಯನ ಸನ್ತತೇಃ- ಸಂತತಿಯ ಸ್ತಮ್ಭಕಾರಣಮ್-ನಿಲ್ಲುವಿಕೆಗೆ ಕಾರಣವನ್ನು ಅಪಶ್ಯತ್ - ಕಂಡನು ಅಥ-ಆಮೇಲೆ ಏನಂ-ಈತನನ್ನು ಪ್ರತ್ಯಬೋಧಯತ್-ತಿಳಿಯುವಂತೆ ಮಾಡಿದನು.

ತಾತ್ಪರ್ಯ. ಆ ಋಷಿಯು ಧ್ಯಾನಬಲದಿಂದ ರಾಜನ ಸಂತತಿಯು ನಿಂತು ಹೋಗಿರುವದಕ್ಕೆ ಕಾರಣವನ್ನು ಕಂಡುಹಿಡಿದುಕೊಂಡು ಹೀಗೆಂದನು.

ವಿಗ್ರಹವಾಕ್ಯಗಳು. ೧ ಸ್ತಮ್ಭಸ್ಯ ಕಾರಣಂ-ಸ್ತಮ್ಭಕಾರಣಮ್ (ಷ.ತ.) ೨ ಭಾವಿತಃ ಆತ್ಮಾ ಯಸ್ಯ ಸಃ-ಭಾವಿತಾತ್ಮಾ (ಷ.ಬ.).

ವ್ಯಾಕರಣವಿಶೇಷ. ೧ ಭುವಃ-ಊಕಾರಾನ್ತ ಸ್ತ್ರೀಲಿಂಗ; ಭುವಾಃ-ಎಂದೂ ರೂಪವಾಗಬಹುದು. ೨ ಭರ್ತುಃ-ಋಕಾರಾನ್ತ ಪುಲ್ಲಿಂಗ, ೩ ಅಪಶ್ಯತ್-ದೃಶಿರ್ ಪ್ರೇಕ್ಷಣೇ (ದೃಶ್,ಪಶ್ಯ್-ನೋಡು) ೧ನೆಯ ಗಣ, ಲಙ್, ಪ.ಪ್ರ.ಏ. ೪ ಪ್ರತ್ಯಬೋಧಯತ್-ಬುಧ ಅವಗಮನೇ (ಬುಧ್-ತಿಳಿ) ಎಂಬ ೧ನೆಯ ಗಣದ ಧಾತುವಿನ ಣಿಜನ್ತ, 'ಪ್ರತಿ' ಎಂಬ ಉಪಸರ್ಗವು ಸೇರಿ ತಿಳಿಸು ಎಂಬರ್ಥವಾಗಿದೆ; ಲಙ್, ಪ.ಪ್ರ.ಏ. ೫ ಏನಂ-ಹೋಗು, ತಿಳಿ, ತಿನ್ನು ಎಂಬ ಅರ್ಥದ ಧಾತುಗಳಿಗೂ ಶಬ್ದವನ್ನು ಕರ್ಮವಾಗಿ (object) ಉಳ್ಳ ಧಾತುಗಳಿಗೂ ಣಿಚ್-ಪ್ರತ್ಯಯವು (causative) ಸೇರಿದರೆ, ಅದು ಸೇರುವ ಮುಂಚೆ ಕರ್ತೃವಾಗಿದ್ದದ್ದು ಕರ್ಮವಾಗುತ್ತದೆ. ಈ ಶ್ಲೋಕದಲ್ಲಿ ಏಷಃ ಪ್ರತ್ಯಬೋಧಯತ್-ಎಂದು ಕರ್ತೃವಾಗಿರುವ 'ಏಷಃ' ಎಂಬುದು ಣಿಜನ್ತಪ್ರಯೋಗದಲ್ಲಿ ಏನಂ ಪ್ರತ್ಯಬೋಧಯತ್-ಎಂದು ಕರ್ಮವಾಗಿದೆ. ಏಕೆಂದರೆ ಇದು ತಿಳಿ ಎಂಬರ್ಥದ ಧಾತುವಾಗಿದೆ. ಬೇರೆ ಅರ್ಥದ ಧಾತುಗಳಿಗೆ ಈ ಸಂದರ್ಭದಲ್ಲಿ ತೃತೀಯಾವಿಭಕ್ತಿಯು ಬೇಕಾಗುತ್ತದೆ. ಉದಾ: 'ದೇವದತ್ತಃ ಓದನಂ ಪಚತಿ'; ಣಿಜನ್ತದಲ್ಲಿ ಇದು ಪಾಚಯತ್ಯೋದನಂ ದೇವದತ್ತೇನ ಎಂದಾಗುವದು.

ವಿಚಾರ. ಹಿಂದೆ ನಡೆದದ್ದು ಮುಂದೆ ನಡೆಯುವದು ಈಗ ಎಲ್ಲಾ ಕಡೆಯಲ್ಲಿಯೂ ನಡೆಯುತ್ತಿರುವದು-ಈ ಮೂರೂ ಯೋಗಿಗಳಿಗೆ ತಿಳಿಯುವದೆಂದು ಹೇಳುತ್ತಾರೆ.

ಪುರಾ ಶಕ್ರಮುಪಸ್ಥಾಯ ತವೋರ್ವೀಂ ಪ್ರತಿ ಯಾಸ್ಯತಃ ।
ಆಸೀತ್ಕಲ್ಪತರುಚ್ಛಾಯಾಮಾಶ್ರಿತಾ ಸುರಭಿಃ ಪಥಿ ॥೭೫॥

ಅನ್ವಯ. [ಪುರಾ ಶಕ್ರಂ ಉಪಸ್ಥಾಯ ಉರ್ವೀಂ ಪ್ರತಿ ಯಾಸ್ಯತಃ ತವ ಪಥಿ ಕಲ್ಪತರುಚ್ಛಾಯಾಂ ಆಶ್ರಿತಾ ಸುರಭಿಃ ಆಸೀತ್]

ಅರ್ಥ. ಪುರಾ-ಹಿಂದೆ ಶಕ್ರಂ-ಇಂದ್ರನನ್ನು ಉಪಸ್ಥಾಯ-ಸೇವಿಸಿ ಉರ್ವೀಂ

ಪ್ರತಿ-ಭೂಮಿಯನ್ನು ಕುರಿತು ಯಾಸ್ಯತಃ-ಹೋಗುತ್ತಿದ್ದ ತವ-ನಿನ್ನ ಪಥಿ-ದಾರಿಯಲ್ಲಿ ಕಲ್ಪತರುಚ್ಛಾಯಾಂ-ಕಲ್ಪವೃಕ್ಷದ ನೆರಳನ್ನು ಆಶ್ರಿತಾ-ಹೊಂದಿದ್ದ ಸುರಭಿಃ-ಕಾಮ ಧೇನು ಆಸೀತ್-ಇತ್ತು.

ತಾತ್ಪರ್ಯ. ಪೂರ್ವದಲ್ಲಿ ಒಂದು ಸಲ ನೀನು ಇಂದ್ರಲೋಕಕ್ಕೆ ಹೋಗಿ ಹಿಂತಿರುಗುವಾಗ ದಾರಿಯಲ್ಲಿ ಕಲ್ಪವೃಕ್ಷದ ನೆರಳಲ್ಲಿ ಕಾಮಧೇನುವು ನಿಂತಿತ್ತು.

ವಿಗ್ರಹವಾಕ್ಯಗಳು. ೧ ಕಲ್ಪ್ಯಂತೆ ಇತಿ-ಕಲ್ಪಾಃ (ಕೃ. ವೃ.); ಕಲ್ಪದಃ ತರುಃ-ಕಲ್ಪತರುಃ (ಉ. ಮ. ಕ.); ಕಲ್ಪತರೋಃ ಛಾಯಾ-ಕಲ್ಪತರುಚ್ಛಾಯಾ (ಷ. ತ.); ತಾಂ-ಕಲ್ಪತರುಚ್ಛಾಯಾಮ್.

ವ್ಯಾಕರಣವಿಶೇಷ. ೧ ಕಲ್ಪತರುಚ್ಛಾಯಾಂ-ಛಾಯಾಶಬ್ದವು ತತ್ಪುರುಷದ ಕೊನೆ ಯಲ್ಲಿರುವಾಗ ಪೂರ್ವಪದವು ಅನೇಕ ವಸ್ತುಗಳನ್ನು ಹೇಳುತ್ತಿದ್ದರೆ ಸಮಾಸವು ನಪುಂಸಕಲಿಂಗವಾಗುವದು ಉದಾ: ಇಕ್ಷೂಣಾಂ ಛಾಯಾ-ಇಕ್ಷುಚ್ಛಾಯಮ್ (ಕಬ್ಬುಗಳ ನೆರಳು); ಇಲ್ಲಿ ಕಲ್ಪವೃಕ್ಷವು ಒಂದೇ ವಸ್ತು ವಾದ್ದರಿಂದ ನಪುಂಸಕವಾಗಲಿಲ್ಲ. ಸ್ವರದ ಮುಂದೆ ಛಕಾರವು ಪರವಾದರೆ ತುಕ್ (ತ್) ಎಂಬ ಆಗಮವು ಬರುವದು. ಕಲ್ಪತರು + ತ್ + ಛಾಯಾ ಇದು ಶ್ಚುತ್ವಸಂಧಿಯಾಗಿ 'ಕಲ್ಪತರುಚ್ಛಾಯಾ' ಎಂದಾಗಿದೆ. ೨ ಪಥಿ-ನಕಾರಾಂತ ಪುಲ್ಲಿಂಗ, ವಿಶೇಷಶಬ್ದ. ೩ ಉಪಸ್ಥಾಯ-ಸ್ಥಾ ಎಂಬುದು ಅಕರ್ಮಕವಾದರೂ ಉಪ ಎಂಬ ಉಪಸರ್ಗದಿಂದ ಸಕರ್ಮಕವಾಗಿದೆ.

ವಿಚಾರ. ೧ ಮನಸ್ಸಿನಲ್ಲಿ ಕಲ್ಪಿಸಿಕೊಂಡದ್ದನ್ನು ಕೊಡುವ ಕಲ್ಪವೃಕ್ಷವೂ ಕೇಳಿ ದ್ದನ್ನು ಕೊಡುವ ಕಾಮಧೇನುವೂ ಸ್ವರ್ಗದಲ್ಲಿವೆ ಎಂದು ಪುರಾಣಗಳಲ್ಲಿ ವರ್ಣಿಸಿರು ತ್ತದೆ. ೨ ದಿಲೀಪನು ಇಂದ್ರಲೋಕಕ್ಕೆ ಹೋಗಿದ್ದನೆಂದು ವರ್ಣಿಸಿರುವದರಿಂದ ಹಿಂದೆ ಹೇಳಿದ್ದ 'ಆ ನಾಕರಥವರ್ತ್ಮನಾಂ' ಎಂಬ ವಿಶೇಷಣಕ್ಕೆ ಇದು ಒಂದು ಉದಾಹ ರಣೆಯಾಯಿತು.

ಧರ್ಮಲೋಪಭಯಾದ್ರಾಜ್ಞೀಮೃತುಸ್ನಾತಾಮಿಮಾಂ ಸ್ಮರನ್ ।
ಪ್ರದಕ್ಷಿಣಕ್ರಿಯಾರ್ಹಾಯಾಂ ತಸ್ಯಾಂ ತ್ವಂ ಸಾಧು ನಾಚರಃ ॥೭೬॥

ಅನ್ವಯ. [ಋತುಸ್ನಾತಾಂ ಇಮಾಂ ರಾಜ್ಞೀಂ ಧರ್ಮಲೋಪಭಯಾತ್ ಸ್ಮರನ್ ಪ್ರದಕ್ಷಿಣಕ್ರಿಯಾರ್ಹಾಯಾಂ ತಸ್ಯಾಂ ತ್ವಂ ಸಾಧು ನಾಚರಃ]

ಅರ್ಥ. ಋತುಸ್ನಾತಾಂ-ಋತುವಾದ ಕಾರಣದಿಂದ ಸ್ನಾನ ಮಾಡಿದ ಇಮಾಂ - ಈ ರಾಜ್ಞೀಂ-ರಾಣಿಯನ್ನು ಧರ್ಮಲೋಪಭಯಾತ್-ಧರ್ಮಕ್ಕೆ ಲೋಪವಾಗು ವದರ ಹೆದರಿಕೆಯಿಂದ ಸ್ಮರನ್-ನೆನಸಿಕೊಂಡು ಪ್ರದಕ್ಷಿಣಕ್ರಿಯಾರ್ಹಾಯಾಂ - (ಪ್ರ ದಕ್ಷಿಣ-ಪ್ರದಕ್ಷಿಣೆಯೆಂಬ ಕ್ರಿಯಾ-ಕೆಲಸಕ್ಕೆ ಅರ್ಹಾಯಾಂ-ಯೋಗ್ಯವಾದ) ಪ್ರದ ಕ್ಷಿಣೆಮಾಡಬೇಕಾಗಿದ್ದ ತಸ್ಯಾಂ-ಆ ಹಸುವಿನಲ್ಲಿ ತ್ವಂ-ನೀನು ಸಾಧು - ಸರಿಯಾಗಿ

ನಾಚರಃ-ನಡೆದುಕೊಳ್ಳಲಿಲ್ಲ.

ವಿಗ್ರಹವಾಕ್ಯಗಳು. ೧ ಧರ್ಮಸ್ಯ ಲೋಪಃ-ಧರ್ಮಲೋಪಃ (ಷ.ತ.); ತಸ್ಮಾತ್ - ಧರ್ಮಲೋಪಾತ್; ಧರ್ಮಲೋಪಾತ್ ಭಯಮ್ - ಧರ್ಮಲೋಪ ಭಯಮ್ (ಪ.ತ.). ೨ ಋತುನಾ ಸ್ನಾತಾ - ಋತುಸ್ನಾತಾ (ತೃ.ತ.); ತಾಂ-ಋತುಸ್ನಾತಾಮ್ ೩ ಪ್ರದಕ್ಷಿಣಮಿತಿ ಕ್ರಿಯಾ-ಪ್ರದಕ್ಷಿಣಕ್ರಿಯಾ (ಸಂ.ಪೂ.ಕ.); ತಸ್ಯಾಃ -ಪ್ರದಕ್ಷಿಣಕ್ರಿಯಾಯಾಃ; ಪ್ರದಕ್ಷಿಣಕ್ರಿಯಾಯಾಃ ಅರ್ಹಾ-ಪ್ರದಕ್ಷಿಣಕ್ರಿಯಾ ಹಾರ್ಹ (ಷ.ತ); ತಸ್ಯಾಂ-ಪ್ರದಕ್ಷಿಣಕ್ರಿಯಾರ್ಹಾಯಾಮ್.

ವ್ಯಾಕರಣವಿಶೇಷ. ೧ ಧರ್ಮಲೋಪಭಯಾತ್-ಹೆದರಿಕೆಯೆಂಬ ಅರ್ಥವುಳ್ಳ ಮಾತುಗಳು ಸೇರಿರುವಾಗ ಏತರ ಹೆದರಿಕೆಯೋ ಅದಕ್ಕೆ ಪಂಚಮೀವಿಭಕ್ತಿ ಬರುವದು; ಆದ್ದರಿಂದ 'ಲೋಪಾತ್ ಭಯಮ್' ಎಂದು ವಿಗ್ರಹ ಬಿಡಿಸಿದೆ. ೨ ಋತುಸ್ನಾತಾಂ-ಇಲ್ಲಿ ಋತುನಾ ಎಂಬ ತೃತೀಯೆಯು ನಿಮಿತ್ತವನ್ನು ತಿಳಿಸುವದು. ೩ ತಸ್ಯಾಂ ಸಾಧು ನಾಚರಃ-ನಡೆದುಕೊ (behave towards) ಎಂಬರ್ಥದಲ್ಲಿ ಚರ್‌ಧಾತುವಿನ ಸಂಬಂಧವಿರುವಾಗ ಸಪ್ತಮಿಯನ್ನುಪಯೋಗಿಸುವದು ವಾಡಿಕೆ. ೪ ಆಚರಃ-ಚರ ಗತಿ ಭಕ್ಷಣಯೋಃ (ಚರ್-ಹೋಗು, ತಿನ್ನು) ಎಂಬ ೧ನೆಯ ಗಣದ ಧಾತು ಲಙ್, ಪ.ಮ.ಏ.

ವಿಚಾರ. ೧ ಹೆಂಡತಿಯು ಮುಟ್ಟಾಗಿ ಸ್ನಾನವಾದ ಮೇಲೆ ಶಾಸ್ತ್ರಕ್ಲಿಪ್ತಕಾಲ ದಲ್ಲಿ ಆಕೆಯ ಅಭಿಪ್ರಾಯದಂತೆ ನಡೆಯಬೇಕಾದದ್ದು ಆರೋಗ್ಯವಂತನಾಗಿರುವ ಗಂಡನ ಧರ್ಮವು; ಹಾಗೆ ಮಾಡದೆ ಇದ್ದರೆ ದೋಷವುಂಟೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ೨ ಮಂಗಲದ್ರವ್ಯಗಳೂ ದೇವರು, ಬ್ರಾಹ್ಮಣರು ಮುಂತಾದವರು ದಾರಿಯಲ್ಲಿ ಕಂಡರೆ ಪ್ರದಕ್ಷಿಣ ನಮಸ್ಕಾರವೇ ಮುಂತಾದವುಗಳಿಂದ ಸತ್ಕರಿಸಬೇಕಾ ದದ್ದು ಯುಕ್ತವು. ದಿಲೀಪನು ಬೇರೆ ಯೋಚನೆಯಲ್ಲಿದ್ದದ್ದರಿಂದ ಈ ಕೆಲಸವನ್ನು ಮರೆತುಬಿಟ್ಟನು.

ಅವಜಾನಾಸಿ ಮಾಂ ಯಸ್ಮಾದತಸ್ತೇ ನ ಭವಿಷ್ಯತಿ ।
ಮತ್ಪ್ರಸೂತಿಮನಾರಾಧ್ಯ ಪ್ರಜೇತಿ ತ್ವಾಂ ಶಶಾಪ ಸಾ ॥೭೭॥

ಅನ್ವಯ. [ಯಸ್ಮಾತ್ ಮಾಂ ಅವಜಾನಾಸಿ ಅತಃ ಮತ್ಪ್ರಸೂತಿಂ ಅನಾರಾಧ್ಯ ತೇ ಪ್ರಜಾ ನ ಭವಿಷ್ಯತಿ ಇತಿ ತ್ವಾಂ ಸಾ ಶಶಾಪ]

ಅರ್ಥ. ಯಸ್ಮಾತ್-ಯಾವ ಕಾರಣದಿಂದ ಮಾಂ-ನನ್ನನ್ನು ಅವಜಾನಾಸಿ - ತಿರಸ್ಕರಿಸುತ್ತೀಯೊ ಅತಃ-ಆದ್ದರಿಂದ ಮತ್ಪ್ರಸೂತಿಂ-ನನ್ನ ಕರುವನ್ನು ಅನಾರಾಧ್ಯ-ಸೇವಿಸದೆ ತೇ-ನಿನಗೆ ಪ್ರಜಾ-ಸಂತಾನವು ನ ಭವಿಷ್ಯತಿ-ಆಗುವದಿಲ್ಲ ಇತಿ-ಎಂದು ತ್ವಾಂ-ನಿನ್ನನ್ನು ಸಾ-ಆ ಕಾಮಧೇನುವು ಶಶಾಪ-ಶಪಿಸಿತು.

ವಿಗ್ರಹವಾಕ್ಯಗಳು. ೧ ಮಮ ಪ್ರಸೂತಿಃ - ಮತ್ಪ್ರಸೂತಿಃ (ಷ.ತ.); ತಾಂ - ಮತ್ಪ್ರಸೂತಿಮ್. ೨ ನ ಆರಾಧ್ಯ-ಅನಾರಾಧ್ಯ (ಸಾ.ಸ.)

ವ್ಯಾಕರಣವಿಶೇಷ. ೧ ಭವಿಷ್ಯತಿ-ಭೂಸತ್ತಾಯಾಂ (ಭೂ-ಇರು, ಆಗು) ೧ನೆಯ ಗಣ, ಲೃಟ್, ಪ.ಪ್ರ.ಏ. ೨ ಶಶಾಪ-ಶಪ ಆಕ್ರೋಶೇ (ಶಪ್-ಶಪಿಸು) ೧ನೆಯ ಗಣ, ಲಿಟ್, ಪ.ಪ್ರ.ಏ.

ಸ ಶಾಪೋ ನ ತ್ವಯಾ ರಾಜನ್ ನ ಚ ಸಾರಥಿನಾ ಶ್ರುತಃ ।
ನದತ್ಯಾಕಾಶಗಙ್ಗಾಯಾಃ ಸ್ರೋತಸ್ಯುದ್ದಾಮದಿಗ್ಗಜೇ ॥೭೮॥

ಅನ್ವಯ. [ರಾಜನ್ ಸ ಶಾಪಃ ಉದ್ದಾಮದಿಗ್ಗಜೇ ಆಕಾಶಗಂಗಾಯಾಃ ಸ್ರೋತಸಿ ನದತಿ ತ್ವಯಾ ನ ಶ್ರುತಃ ಸಾರಥಿನಾ ಚ (ನ) ಶ್ರುತಃ]

ಅರ್ಥ. ರಾಜನ್-ರಾಜನೆ ಸ ಶಾಪಃ-ಆ ಶಾಪವು ಉದ್ದಾಮದಿಗ್ಗಜೇ-ಸ್ವೇಚ್ಛೆಯಾಗಿ ಬಂದಿದ್ದ ದಿಗ್ಗಜಗಳುಳ್ಳ ಆಕಾಶಗಂಗಾಯಾಃ-ಆಕಾಶಗಂಗೆಯ ಸ್ರೋತಸಿ - ಪ್ರವಾಹವು ನದತಿ-ಭೋರಿಡುತ್ತಿರಲು ತ್ವಯಾ-ನಿನ್ನಿಂದ ನ ಶ್ರುತಃ-ಕೇಳಲ್ಪಡಲಿಲ್ಲ; ಸಾರಥಿನಾ ಚ-ಸಾರಥಿಯಿಂದಲೂ+ನ ಶ್ರುತಃ-ಕೇಳಲ್ಪಡಲಿಲ್ಲ.

ತಾತ್ಪರ್ಯ. ಅಕಾಶಗಂಗೆಯಲ್ಲಿ ಜಲಕ್ರೀಡೆಗಾಗಿ ಬಂದಿದ್ದ ದಿಗ್ಗಜಗಳ ಕೋಲಾಹಲದಿಂದ ಆ ಶಾಪವು ನಿನ್ನ ಕಿವಿಗಾಗಲಿ ನಿನ್ನ ಸಾರಥಿಯ ಕಿವಿಗಾಗಲಿ ಬೀಳಲಿಲ್ಲ.

ವಿಗ್ರಹವಾಕ್ಯಗಳು. ೧ ದಾಮ್ನ ಉದ್ಗತಾಃ-ಉದ್ದಾಮಾನಃ (ಪ್ರಾ.ಸ.); ಉದ್ದಾಮಾನಃ ದಿಗ್ಗಜಾಃ ಯಸ್ಮಿನ್ ತತ್-ಉದ್ದಾಮದಿಗ್ಗಜಮ್ (ಸ.ಬ.); ತಸ್ಮಿನ್-ಉದ್ದಾಮದಿಗ್ಗಜೇ. ೨ ಆಕಾಶೇ ಗಙ್ಗಾ- ಆಕಾಶ ಗಙ್ಗಾ (ಸ.ತ.); ತಸ್ಯಾಃ - ಆಕಾಶಗಙ್ಗಾಯಾಃ

ವ್ಯಾಕರಣವಿಶೇಷ. ೧ ಸ್ರೋತಸಿ ನದತಿ-ಸತಿಸಪ್ತಮಿ (locative absolute) ೨ ಉದ್ದಾಮದಿಗ್ಗಜೇ-ಉದ್ದಾಮವೆಂದರೆ ಹಗ್ಗವನ್ನು ಬಿಚ್ಚಿಕೊಂಡು ಬಂದಿರುವವು (unloosed) ಎಂದು ಅಕ್ಷರಾರ್ಥ; ದಾಮಶಬ್ದವು ನಕಾರಾನ್ತ ನಪುಂಸಕ; ಉದ್ದಾಮನ್ ಶಬ್ದವು ಇಲ್ಲಿ 'ಗಜ'ಕ್ಕೆ ವಿಶೇಷಣವಾದ್ದರಿಂದ ನಕಾರಾನ್ತ ಪುಲ್ಲಿಂಗ.

ವಿಚಾರ. ಒಂದೊಂದು ದಿಕ್ಕಿಗೂ ಒಂದೊಂದು ಆನೆಯಂತೆ ಎಂಟು ದಿಗ್ಗಜಗಳು ಭೂಮಿಯನ್ನು ಹೊತ್ತಿರುವವೆಂದು ಪುರಾಣಗಳಲ್ಲಿ ವರ್ಣಿಸುವದುಂಟು.

ಈಪ್ಸಿತಂ ತದವಜ್ಞಾನಾದ್ವಿದ್ಧಿ ಸಾರ್ಗಲಮಾತ್ಮನಃ ।
ಪ್ರತಿಬಧ್ನಾತಿ ಹಿ ಶ್ರೇಯಃ ಪೂಜ್ಯಪೂಜಾವ್ಯತಿಕ್ರಮಃ ॥೭೯॥

ಅನ್ವಯ. [ತದವಜ್ಞಾನಾತ್ ಆತ್ಮನಃ ಈಪ್ಸಿತಂ ಸಾರ್ಗಲಂ ವಿದ್ಧಿ ಪೂಜ್ಯಪೂಜಾವ್ಯತಿಕ್ರಮಃ ಶ್ರೇಯಃ ಪ್ರತಿ ಬಧ್ನಾತಿ ಹಿ?]

ಅರ್ಥ. ತದವಜ್ಞಾನಾತ್- (ತತ್-ಅದರ ಅವಜ್ಞಾನಾತ್-ಅಪಮಾನದಿಂದ) ಅದನ್ನು ಅಪಮಾನಪಡಿಸಿದ್ದರಿಂದ ಆತ್ಮನಃ-ನಿನ್ನ ಈಪ್ಸಿತಂ-ಕೋರಿಕೆಯನ್ನು ಸಾರ್ಗಲಂ-ಅಡ್ಡಿಯಿಂದ ಕೂಡಿದ್ದನ್ನಾಗಿ ವಿದ್ಧಿ-ತಿಳಿ. ಪೂಜ್ಯಪೂಜಾವ್ಯತಿಕ್ರಮಃ - (ಪೂಜ್ಯ-ಪೂಜ್ಯರಾದವರ ಪೂಜಾ-ಪೂಜೆಯ ವ್ಯತಿಕ್ರಮಃ-ಮೀರುವಿಕೆಯು) ಗೌರವಿಸ ಬೇಕಾದವರನ್ನು ಗೌರವಿಸದೆ ಇರುವದು ಶ್ರೇಯಃ-ಒಳ್ಳೆಯದನ್ನು ಪ್ರತಿ ಬಧ್ನಾತಿ ಹಿ - ಅಡ್ಡಿಮಾಡುತ್ತದೆಯಲ್ಲವೆ?

ತಾತ್ಪರ್ಯ. ಆ ಕಾಮಧೇನುವನ್ನು ಅನಾದರದಿಂದ ಕಂಡದ್ದೆ ನಿನ್ನ ಇಷ್ಟಾರ್ಥಕ್ಕೆ ಅಡ್ಡಿಯಾಗಿರುವದು; ಏಕೆಂದರೆ ಪೂಜ್ಯರಾದವರನ್ನು ಗೌರವಿಸದೆ ಇರುವದು ತನಗೆ ಆಗಬೇಕಾದ ಶ್ರೇಯಸ್ಸಿಗೆ ಅಡ್ಡಿಯಾಗುವದು.

ವಿಗ್ರಹವಾಕ್ಯಗಳು. ೧ ಆಪ್ತುಂ ಇಷ್ಟಂ-ಈಪ್ಸಿತಮ್ (ಕೃ.ವೃ.). ೨ ತಸ್ಯಾಃ ಅವಜ್ಞಾನಂ-ತದವಜ್ಞಾನಮ್ (ಷ.ತ.); ತಸ್ಮಾತ್-ತದವಜ್ಞಾನಾತ್. ೩ ಅರ್ಗಲೇನ ಸಹ ವರ್ತತ ಇತಿ-ಸಾರ್ಗಲಮ್. (ಸಹ.ಬ.) ೪ ಪೂಜ್ಯಾನಾಂ ಪೂಜಾ-ಪೂಜ್ಯಪೂಜಾ (ಷ.ತ.); ತಸ್ಯಾಃ-ಪೂಜ್ಯಪೂಜಾಯಾಃ ; ಪೂಜ್ಯಪೂಜಾಯಾಃ ವ್ಯತಿಕ್ರಮಃ- ಪೂಜ್ಯಪೂಜಾವ್ಯತಿಕ್ರಮಃ (ಷ.ತ.).

ವ್ಯಾಕರಣವಿಶೇಷ. ೧ ತದವಜ್ಞಾನಾತ್-ಇಲ್ಲಿ ತಸ್ಯಾಃ ಎಂಬುದು ಕರ್ಮಣಿಷಷ್ಠೀ; ಕೃದಂತದ ಸಂಬಂಧವಿದ್ದರೆ ಷಷ್ಠೀವಿಭಕ್ತಿಯು ಕರ್ತೃ (agent) ಅಥವಾ ಕರ್ಮ (object) ಇವುಗಳನ್ನು ತಿಳಿಸುವದು; ಇದಕ್ಕೆ ಕಾರಕಷಷ್ಠಿಯೆಂದು ಹೆಸರು. ಶೇಷಷಷ್ಠಿಯೇ ಸಮಾಸವಾಗಬೇಕೇ ಹೊರತು ಬೇರೆ ಷಷ್ಠಿಯು ಸಮಾಸವಾಗಕೂಡದೆಂಬುದು ವ್ಯಾಕರಣದ ನಿಯಮವಾದರೂ ಕೃದಂತದೊಡನೆ ಕಾರಕಷಷ್ಠಿಯೂ ಸಮಾಸವಾಗಬಹುದೆಂಬ ಬೇರೆ ನಿಯಮದಿಂದ ಸಮಾಸ ವಾಗಿದೆ. 'ಪೂಜಾವ್ಯತಿಕ್ರಮಃ' ಎಂಬಲ್ಲಿಯೂ ಹೀಗೆಯೇ. ೨ ಆತ್ಮನಃ-ಆತ್ಮಾರ್ಥಕಸರ್ವನಾಮದಂತೆ (reflexive pronoun) ಉಪಯೋಗಿಸಿದೆ; ಸ್ವಸ್ಯ-ಎಂದೂ ಇಲ್ಲಿ ಹೇಳಬಹುದು; ೪೪ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು ನೋಡಿ. ೩ ವಿದ್ಧಿ-ವಿದ ಜ್ಞಾನೇ (ವಿದ್-ತಿಳಿ) ೨ನೆಯ ಗಣ, ಲೋಟ್, ಪ.ಮ.ಏ. ವಿದ್ ಎಂಬ ಧಾತುವು ಬೇರೆ ಬೇರೆ ಅರ್ಥದಲ್ಲಿ ಬೇರೆ ಬೇರೆ ಗಣಕ್ಕೆ ಸೇರಿರುತ್ತದೆ. 'ತಿಳಿ' ೨ನೆಯ ಗಣ, 'ಯೋಚಿಸು' ೭ನೆಯ ಗಣ, 'ಇರು' ೪ನೆಯ ಗಣ, 'ಪಡೆ' ೬ನೆಯ ಗಣ; ಉದಾ:ವೇತ್ತಿ, ವಿನ್ತೇ, ವಿದ್ಯತೇ, ವಿನ್ದತಿ ಅಥವಾ ವಿನ್ದತೇ. ೪ ಪ್ರತಿಬಧ್ನಾತಿ-ಬನ್ಧ ಬನ್ಧನೇ (ಬನ್ಧ್-ಕಟ್ಟು) ೯ನೆಯ ಗಣ; 'ಪ್ರತಿ' ಎಂಬ ಉಪಸರ್ಗದೊಡನೆ ಸೇರಿ ಅಡ್ಡಿಮಾಡು ಎಂಬರ್ಥವಾಗಿದೆ. ಲಟ್, ಪ.ಪ್ರ.ಏ.

ವಿಚಾರ. ಗೌರವಿಸಬೇಕಾದವರನ್ನು ಅನಾದರ ಮಾಡುವದೂ ಅಯೋಗ್ಯರನ್ನು ಗೌರವಿಸುವದೂ ಧರ್ಮವಿರುದ್ಧವಾದದ್ದು; ಇದರಿಂದ ತನಗೆ ಆಗಬೇಕಾದ

ಶ್ರೇಯಸ್ಸಿಗೆ ಅಡ್ಡಿಯಾಗುವದು-ಎಂದು ಧರ್ಮಶಾಸ್ತ್ರವಚನವುಂಟು.

ಹವಿಷೇ ದೀರ್ಘಸತ್ರಸ್ಯ ಸಾ ಚೇದಾನೀಂ ಪ್ರಚೇತಸಃ ।
ಭುಜಙ್ಗಪಿಹಿತದ್ವಾರಂ ಪಾತಾಲಮಧಿತಿಷ್ಠತಿ ॥೮೦॥

ಅನ್ವಯ. [ಸಾ ಚ ಇದಾನೀಂ ದೀರ್ಘಸತ್ರಸ್ಯ ಪ್ರಚೇತಸಃ ಹವಿಷೇ ಭುಜಙ್ಗಪಿಹಿತದ್ವಾರಂ ಪಾತಾಲಂ ಅಧಿತಿಷ್ಠತಿ.]

ಅರ್ಥ. ಸಾ ಚ-ಮತ್ತು ಅದು ಇದಾನೀಂ-ಈಗ ದೀರ್ಘಸತ್ರಸ್ಯ-(ದೀರ್ಘ - ಬಹುಕಾಲದ ಸತ್ರಸ್ಯ-ಯಾಗವುಳ್ಳ) ಬಹುಕಾಲ ನಡೆಯುಬೇಕಾದ ಒಂದು ಯಜ್ಞ ವನ್ನು ಮಾಡುತ್ತಿರುವ ಪ್ರಚೇತಸಃ-ವರುಣನ ಹವಿಷೇ-ಹೋಮದ್ರವ್ಯಕ್ಕೋಸ್ಕರ ಭುಜಙ್ಗಪಿಹಿತದ್ವಾರಂ-(ಭುಜಙ್ಗ-ಹಾವುಗಳಿಂದ ಪಿಹಿತ-ಮುಚ್ಚಲ್ಪಟ್ಟಿರುವ ದ್ವಾರಂ - ಬಾಗಿಲುಳ್ಳ) ಬಾಗಿಲುತುಂಬ ಹಾವುಗಳು ಮುಚ್ಚಿಕೊಂಡಿರುವ ಪಾತಾಲಂ-ಪಾತಾಳದಲ್ಲಿ ಅಧಿತಿಷ್ಠತಿ-ವಾಸಮಾಡಿಕೊಂಡಿದೆ.

ತಾತ್ಪರ್ಯ. ಈಗ ಪಾತಾಳದಲ್ಲಿ ವರುಣನು ಬಹುಕಾಲ ನಡೆಯುಬೇಕಾದ ಒಂದು ಯಾಗವನ್ನು ಮಾಡುತ್ತಿದ್ದಾನೆ. ಆ ಯಾಗಕ್ಕೆ ಬೇಕಾದ ಮೊಸರು, ತುಪ್ಪ ಮುಂತಾದ ದ್ರವ್ಯಗಳನ್ನು ಒದಗಿಸುವದಕ್ಕೆ ಆ ಕಾಮಧೇನು ಹೋಗಿದೆ. ಪಾತಾಳದ ಬಾಗಿಲು ತುಂಬ ಸರ್ಪಗಳು ಮುಚ್ಚಿಕೊಂಡು ಕಾವಲಿರುವದರಿಂದ ನೀನು ಅದರೊಳಕ್ಕೆ ಹೋಗುವ ಹಾಗೂ ಇಲ್ಲ.

ವಿಗ್ರಹವಾಕ್ಯಗಳು. ೧ ದೀರ್ಘಂ ಸತ್ರಂ ಯಸ್ಯ ಸಃ-ದೀರ್ಘಸತ್ರಃ (ಷ. ಬ.); ತಸ್ಯ-ದೀರ್ಘಸತ್ರಸ್ಯ. ೨ ಭುಜಙ್ಗೈಃ ಪಿಹಿತಂ-ಭುಜಙ್ಗಪಿಹಿತಮ್ (ತೃ. ತ.); ಭುಜಙ್ಗಪಿಹಿತಂ ದ್ವಾರಂ ಯಸ್ಯ ತತ್-ಭುಜಙ್ಗಪಿಹಿತದ್ವಾರಮ್ (ಷ. ಬ.).

ವ್ಯಾಕರಣವಿಶೇಷ. ೧ ಪಾತಾಲಂ ಅಧಿತಿಷ್ಠತಿ-ತಿಷ್ಠತಿ ಎಂಬುದು ಅಕರ್ಮಕವಾದರೂ ಅಧಿ ಎಂಬ ಉಪಸರ್ಗದ ಸಂಬಂಧದಿಂದ ವಾಸಮಾಡು (dwell in, inhabit) ಎಂಬರ್ಥದಲ್ಲಿ ಸಕರ್ಮಕವಾಗಿದೆ; ಶೀ (ಮಲಗು), ಸ್ಥಾ-(ನಿಲ್ಲು), ಆಸ್ (ಕೂರು) ಈ ಮೂರು ಧಾತುಗಳೂ ಅಧಿ ಎಂಬ ಉಪಸರ್ಗದ ಸಂಬಂಧದಿಂದ ಸಕರ್ಮಕವಾಗುತ್ತವೆ. ಆಗ ಆಧಾರವನ್ನು ಎಂದರೆ ಇಂಥಲ್ಲಿ ಎಂಬುದನ್ನು, ಹೇಳುವ ಮಾತು ದ್ವಿತೀಯಾವಿಭಕ್ತಿಯಲ್ಲಿರಬೇಕು. ೨ ಷ್ಠಾ-ಗತಿನಿವೃತ್ತೌ (ಸ್ಥಾ, ತಿಷ್ಠ್-ನಿಲ್ಲು) ಎಂಬ ೧ನೆಯ ಗಣದ ಧಾತುವಿನ ಲಟ್, ಪ. ಪ್ರ. ಏ. ೩ ಪಿಹಿತ- ಇದಕ್ಕೆ ಅಪಿಹಿತ ಎಂದೂ ರೂಪವುಂಟು.

ವಿಚಾರ. ದೀರ್ಘಸತ್ರವೆಂಬ ಯಾಗಕ್ಕೆ ಒಂದು ವರ್ಷವು ತೀರ ಕಡಿಮೆಯ ಕಾಲವು; ಒಂದು ಸಾವಿರ ವರ್ಷದವರೆಗೂ ಇದಕ್ಕೆ ಕಾಲವುಂಟೆಂದು ಹೇಳುತ್ತಾರೆ.

ಸುತಾಂ ತದೀಯಾಂ ಸುರಭೇಃ ಕೃತ್ವಾ ಪ್ರತಿನಿಧಿಂ ಶುಚಿಃ ।
ಆರಾಧಯ ಸಪತ್ನೀಕಃ ಪ್ರೀತಾ ಕಾಮದುಘಾ ಹಿ ಸಾ ॥೮೧॥

ಅನ್ವಯ. [ತದೀಯಾಂ ಸುತಾಂ ಸುರಭೇಃ ಪ್ರತಿನಿಧಿಂ ಕೃತ್ವಾ ಶುಚಿಃ ಸಪತ್ನೀಕಃ ಆರಾಧಯ ಸಾ ಪ್ರೀತಾ ಕಾಮದುಘಾ ಹಿ?]

ಅರ್ಥ. ತದೀಯಾಂ-ಅದರ ಸುತಾಂ-ಮಗಳನ್ನು ಸುರಭೇಃ- ಕಾಮಧೇನುವಿನ ಪ್ರತಿನಿಧಿಂ- ಬದಲನ್ನಾಗಿ ಕೃತ್ವಾ-ಮಾಡಿಕೊಂಡು ಶುಚಿಃ-ಶುದ್ಧನಾಗಿ ಸಪತ್ನೀಕಃ - ಹೆಂಡತಿಯೊಡನೆ ಇರುವವನಾಗಿ ಆರಾಧಯ-ಸೇವಿಸು; ಸಾ-ಅದು ಪ್ರೀತಾ - ಸಂತೋಷಪಟ್ಟದ್ದಾದರೆ ಕಾಮದುಘಾ ಹಿ-ಕೇಳಿದ್ದನ್ನು ಕೊಡುವದಲ್ಲವೆ?

ವಿಗ್ರಹವಾಕ್ಯಗಳು. ೧ ತಸ್ಯಾಃ ಇಯಂ-ತದೀಯಾ (ತ. ವ್ಯ.); ತಾಂ - ತದೀಯಾಮ್. ೨ ಪತ್ನ್ಯಾ ಸಹ ವರ್ತತ ಇತಿ -ಸಪತ್ನೀಕಃ (ಸಹ. ಬ.). ೩ ಕಾಮಾನ್ ದೋಗ್ಧೀತಿ-ಕಾಮದುಘಾ (ಕೃ. ವ್ಯ.).

ವ್ಯಾಕರಣವಿಶೇಷ. ೧ ಸಪತ್ನೀಕಃ-ಈ ಊ ಋಕಾರಾನ್ತವಾದ ಉತ್ತರಪದವಿರುವ ಬಹುವ್ರೀಹಿಗೆ ಕಪ್ (ಕ) ಪ್ರತ್ಯಯವು ಬರುವದು. ಇಲ್ಲಿ ಪತ್ನೀ ಎಂಬುದು ಈಕಾರಾನ್ತವಾದ್ದರಿಂದ ಕ ಬಂದಿದೆ. ೨ ಆರಾಧಯ-ರಾಧ ವೃದ್ಧೌ (ರಾಧ್ ಬೆಳೆ, ನೆರವೇರಿಸಿಕೊ) ಎಂಬ ೪ನೆಯ ಗಣದ ಧಾತುವಿಗೆ ಆ ಎಂಬ ಉಪಸರ್ಗವು ಸೇರಿ, ಪೂಜೆಮಾಡು, ಸೇವಿಸು ಎಂಬರ್ಥವಾಗುತ್ತದೆ. ೩ ಸುತಾಂ ಪ್ರತಿನಿಧಿಂ ಕೃತ್ವಾ-ಕೃಧಾತುವು ದ್ವಿಕರ್ಮಕ; ೪೫ನೆಯ ಶ್ಲೋಕದ ೨ನೆಯ ಟಿಪ್ಪಣಿಯನ್ನು ನೋಡಿ.

ಇತಿ ವಾದಿನ ಏವಾಸ್ಯ ಹೋತುರಾಹುತಿಸಾಧನಮ್ ।
ಅನಿನ್ದ್ಯಾ ನನ್ದಿನೀ ನಾಮ ಧೇನುರಾವವೃತೇ ವನಾತ್ ॥೮೨॥

ಅನ್ವಯ. [ಇತಿ ವಾದಿನ ಏವ ಹೋತುಃ ಅಸ್ಯ ನಂದಿನೀ ನಾಮ ಅನಿನ್ದ್ಯಾ ಧೇನುಃ ವನಾತ್ ಆವವೃತೇ]

ಅರ್ಥ. ಇತಿ-ಹೀಗೆ ವಾದಿನ ಏವ-ಹೇಳುತ್ತಿರುವ ಹಾಗೆಯೇ ಹೋತುಃ - ಹೋಮಮಾಡುವ ಅಸ್ಯ-ಈತನ ಆಹುತಿಸಾಧನಂ (ಆಹುತಿ-ಹೋಮಕ್ಕೆ ಸಾಧನಂ - ಸಾಧನವಾದ) ಹೋಮದ್ರವ್ಯಗಳನ್ನು ಒದಗಿಸಿಕೊಡುವ ನಂದಿನೀ ನಾಮ-ನಂದಿನಿ ಎಂಬ ಅನಿನ್ದ್ಯಾ-ನಿರ್ದುಷ್ಟವಾದ ಧೇನುಃ-ಹಸು ವನಾತ್-ಕಾಡಿನಿಂದ ಆವವೃತೇ - ಹಿಂತಿರುಗಿ ಬಂತು.

ವಿಗ್ರಹವಾಕ್ಯಗಳು. ೧ ಆಹುತೇಃ ಸಾಧನಮ್-ಆಹುತಿಸಾಧನಮ್ (ಷ. ತ.). ೨ ನಿನ್ದಿತುಂ ಯೋಗ್ಯಾ-ನಿನ್ದ್ಯಾ (ಕೃ. ವ್ಯ.); ನ ನಿನ್ದ್ಯಾ-ಅನಿನ್ದ್ಯಾ (ನ. ತ.).

ವ್ಯಾಕರಣವಿಶೇಷ. ೧ ಇತಿ ವಾದಿನ ಏವಾಸ್ಯ-ಸತಿಸಪ್ತಮಿಯ ಹಾಗೆಯೆ ಷಷ್ಠೀವಿಭಕ್ತಿ

ಯನ್ನೂ ಉಪಯೋಗಿಸುವದುಂಟು. ಒಂದು ಕ್ರಿಯೆಯಿಂದ ಮತ್ತೊಂದು ಕ್ರಿಯೆಯು ಸೂಚಿತವಾಗುವಾಗ ಈ ವಿಭಕ್ತಿಗಳನ್ನು ಉಪಯೋಗಿಸುತ್ತಾರೆ. ಷಷ್ಠೀವಿಭಕ್ತಿಯನ್ನು ಹೀಗೆ ಉಪಯೋಗಿಸುವಾಗ ಅನಾದರವೂ ತೋರುವದುಂಟು. ಉದಾ: ರುದತಃ ಪ್ರಾವ್ರಾಜೀತ್=ಮಗನು ಅಳುತ್ತಿದ್ದರೂ ಅದನ್ನು ಅಸಡ್ಡೆಮಾಡಿ ಸಂನ್ಯಾಸಿಯಾದನು. ಆದರೆ ಇಲ್ಲಿ ಷಷ್ಠಿಯನ್ನು ಉಪಯೋಗಿಸಿದ್ದರೂ ಅನಾದರವೇನೂ ಇಲ್ಲ. 'ಈತನು ಹೀಗೆಂದು ನುಡಿಯುವಷ್ಟರಲ್ಲಿಯೇ' ಎಂಬುದು ತಾತ್ಪರ್ಯ. ೨ ಆವವೃತೇ-ವೃತು ವರ್ತನೇ (ವೃತ್-ಇರು) ೧ನೆಯ ಗಣ, 'ಆ' ಎಂಬ ಉಪಸರ್ಗವು ಸೇರಿ ಹಿಂತಿರುಗಿ ಬರು ಎಂಬರ್ಥವಾಗಿದೆ. ಲಿಟ್, ಆ.ಪ್ರ.ಏ.

ವಿಚಾರ. ವಸಿಷ್ಠರು ನಂದಿನಿಯ ಮಾತನ್ನು ಆಡುತ್ತಿರುವಷ್ಟರಲ್ಲಿಯೆ ಆ ಹಸುವು ಅಲ್ಲಿಗೆ ಬಂದದ್ದು ಕಾರ್ಯವು ಬೇಗನೆ ಕೈಗೂಡುವದೆಂಬುದಕ್ಕೆ ಸೂಚಕವಾದ ಶಕುನವಾಯಿತು-ಎಂದು ಭಾವ. ೮೭ನೆಯ ಶ್ಲೋಕವನ್ನು ನೋಡಿ.

ಲಲಾಟೋದಯಮಾಭುಗ್ನಂ ಪಲ್ಲವಸ್ನಿಗ್ಧಪಾಟಲಾ ।
ಬಿಭ್ರತೀ ಶ್ವೇತರೋಮಾಙ್ಕಂ ಸನ್ಧ್ಯೇವ ಶಶಿನಂ ನವಮ್ ॥೮೩॥

ಅನ್ವಯ. [ಪಲ್ಲವಸ್ನಿಗ್ಧಪಾಟಲಾ ಲಲಾಟೋದಯಂ ಆಭುಗ್ನಂ ಶ್ವೇತರೋಮಾಙ್ಕಂ ಬಿಭ್ರತೀ ನವಂ ಶಶಿನಂ ಬಿಭ್ರತೀ ಸಂಧ್ಯೇವ (ನನ್ದಿನೀ ನಾಮ ಧೇನುಃ ವನಾತ್ ಆವವೃತೇ)]

ಅರ್ಥ. ಪಲ್ಲವಸ್ನಿಗ್ಧಪಾಟಲಾ-ಚಿಗುರಿನ ಹಾಗೆ ಹೊಳೆಯುವದಾಗಿಯೂ ಕೆಂಪಾಗಿಯೂ ಇರುವ ಲಲಾಟೋದಯಂ- (ಲಲಾಟ-ಹಣೆಯಲ್ಲಿ ಉದಯ-ಹುಟ್ಟು ವಿಕೆಯುಳ್ಳ) ಹಣೆಯಲ್ಲಿ ಹುಟ್ಟಿದ ಆಭುಗ್ನಂ-ಸ್ವಲ್ಪ ಡೊಂಕಾದ ಶ್ವೇತರೋಮಾಙ್ಕಂ - ಬಿಳಿಯ ಕೂದಲಿನ ಗುರುತನ್ನು ಬಿಭ್ರತೀ-ಹೊಂದಿರುವದಾಗಿ ನವಂ-ಹೊಸ ಶಶಿನಂ - ಚಂದ್ರನನ್ನು ಬಿಭ್ರತೀ-ಧರಿಸಿರುವ ಸಂಧ್ಯೇವ-ಸಂಜೆಯ ಹಾಗೆ ಇರುವ [ನನ್ದಿನೀ ನಾಮ ಧೇನುಃ ವನಾತ್ ಆವವೃತೇ-]

ತಾತ್ಪರ್ಯ. ಆ ನಂದಿನಿಯು ಚಿಗುರಿನ ಹಾಗೆ ಕೆಂಪಗೆ ಮಿರಿಮಿರಿ ಮಿಂಚುತ್ತಿತ್ತು; ಅದರ ಹಣೆಯಲ್ಲಿ ಸ್ವಲ್ಪ ಡೊಂಕಾದ ಒಂದು ಬಿಳಿಯ ಗುರುತು ಇತ್ತು. ಆದ್ದರಿಂದ ಅದು ನೋಡುವದಕ್ಕೆ ಬಾಲಚಂದ್ರನೊಡನೆ ಕೂಡಿರುವ ಸಂಜೆಗೆಂಪಿನ ಹಾಗೆ ಕಾಣುತ್ತಿತ್ತು.

ವಿಗ್ರಹವಾಕ್ಯಗಳು. ೧ ಲಲಾಟೇ ಉದಯಃ ಯಸ್ಯ ಸಃ -ಲಲಾಟೋದಯಃ (ಷ.ಬ.). ೨ ಈಷತ್ ಭುಗ್ನಂ-ಆಭುಗ್ನಮ್(ಪ್ರಾ.ಸ.). ೩ ಸ್ನಿಗ್ಧಾ ಚ ಸಾ ಪಾಟಲಾ ಚ-ಸ್ನಿಗ್ಧಪಾಟಲಾ (ವಿ.ಉ.ಕ.); ಪಲ್ಲವ ಇವ ಸ್ನಿಗ್ಧಪಾಟಲಾ-ಪಲ್ಲವ

ಸ್ನಿಗ್ಧಪಾಟಲಾ (ಉ.ಪೂ.ಕ.). ೪ ಶ್ವೇತಾನಿ ಚ ತಾನಿ ರೋಮಾಣಿ ಚ - ಶ್ವೇತರೋಮಾಣಿ (ವಿ.ಪೂ.ಕ.); ಶ್ವೇತರೋಮಾಣ್ಯೇವ ಅಙ್ಕಃ - ಶ್ವೇತರೋಮಾಙ್ಕಃ (ಅ.ಪೂ.ಕ.); ತಂ-ಶ್ವೇತರೋಮಾಙ್ಕಮ್.

ವ್ಯಾಕರಣವಿಶೇಷ. ೧ ಆಭುಗ್ನಮ್-ಆ ಎಂಬ ಉಪಸರ್ಗಕ್ಕೆ ಸ್ವಲ್ಪ ಎಂಬುದು ಅರ್ಥ; ಭುಗ್ನಮ್-ಎಂಬುದು ಭುಜೋ ಕೌಟಲ್ಯೇ (ಭುಜ್-ವಕ್ರವಾಗಿರು) ಎಂಬ ೬ನೆಯ ಗಣದ ಧಾತುವಿನ ಭೂತಕೃದನ್ತ.

ವಿಚಾರ. ೮೩, ೮೪, ೮೫-ಈ ಮೂರು ಶ್ಲೋಕಗಳಲ್ಲಿ ನಂದಿನಿಯ ವರ್ಣನೆಯಿದೆ 'ಚಿಗುರಿನ ಹಾಗೆ ಕೆಂಪಗೆ ಹೊಳೆಯುವ' ಎಂಬ ವಿಶೇಷಣವನ್ನು ಸಂಜೆಗೂ ಹೊಂದಿಸಿಕೊಳ್ಳಬೇಕು. ಡೊಂಕಾಗಿರುವ ಬಿಳಿಯ ಗೆರೆಗೆ ಹೋಲಿಕೆಯನ್ನು ಕೊಡುವದಕ್ಕಾಗಿ 'ಹೊಸ ಚಂದ್ರನನ್ನು' ಎಂದು ಹೇಳಿದೆ.

ಭುವಂ ಕೋಷ್ಣೇನ ಕುಣ್ಡೋಧ್ನೀ ಮೇಧ್ಯೇನಾವಭೃಥಾದಪಿ ।
ಪ್ರಸ್ನವೇನಾಭಿವರ್ಷನ್ತೀ ವತ್ಸಾಲೋಕಪ್ರವರ್ತಿನಾ ॥೮೪॥

ಅನ್ವಯ. [ಕೋಷ್ಣೇನ ಅವಭೃಥಾತ್ ಅಪಿ ಮೇಧ್ಯೇನ ವತ್ಸಾಲೋಕಪ್ರವರ್ತಿನಾ ಪ್ರಸ್ನವೇನ ಭುವಂ ಅಭಿವರ್ಷನ್ತೀ ಕುಣ್ಡೋಧ್ನೀ (ನನ್ದಿನೀ ನಾಮ ಧೇನುಃ ವನಾತ್ ಆವವೃತೇ)]

ಅರ್ಥ. ಕೋಷ್ಣೇನ-ತುಸು ಬೆಚ್ಚಗಿರುವ ಅವಭೃಥಾತ್ ಅಪಿ-ಯಾಗದ ತರುವಾಯ ಮಾಡುವ ಸ್ನಾನಕ್ಕಿಂತಲೂ ಮೇಧ್ಯೇನ-ಪವಿತ್ರವಾದ ವತ್ಸಾಲೋಕ ಪ್ರವರ್ತಿನಾ-(ವತ್ಸ-ಕರುವಿನ ಆಲೋಕ-ನೋಡುವಿಕೆಯಿಂದ ಪ್ರವರ್ತಿನಾ-ಹೊರ ಸೂಸುವ) ಕರುವನ್ನು ಕಂಡದ್ದರಿಂದ ಹೊರಕ್ಕೆ ಬರುತ್ತಿರುವ ಪ್ರಸ್ನವೇನ-ಹಾಲಿನ ಸೊರುವಿನಿಂದ ಭುವಂ - ಭೂಮಿಯನ್ನು ಅಭಿವರ್ಷನ್ತೀ-ನೆನಸುತ್ತಾ ಇರುವ ಕುಣ್ಡೋಧ್ನೀ-ಕುಂಡದಂತೆ ಕೆಚ್ಚಲುಳ್ಳ [ನನ್ದಿನೀ ನಾಮ ಧೇನುಃ ವನಾತ್ ಆವವೃತೇ.]

ತಾತ್ಪರ್ಯ. ನಂದಿನಿಯು ತನ್ನ ಕರುವನ್ನು ಕಂಡ ಸಂತೋಷದಿಂದ ಕುಂಡದ ಹಾಗೆ ದಪ್ಪನಾಗಿರುವ ತನ್ನ ಕೆಚ್ಚಲಿನಿಂದ ಬಿಸಿಬಿಸಿಯಾದ ನೊರೆಹಾಲನ್ನು ಇಳಿಸಿ ನೆಲದ ಮೇಲೆ ತೊಟ್ಟಿಕ್ಕಿಸುತ್ತಾ ಬರುತ್ತಿತ್ತು. ಯಾಗವು ಮುಗಿದ ಮೇಲೆ ಮಾಡುವ ಅವಭೃಥಸ್ನಾನದ ನೀರಿಗಿಂತಲೂ ಆ ಹಾಲು ಭೂಮಿಯನ್ನು ಹೆಚ್ಚು ಪವಿತ್ರಗೊಳಿಸುತ್ತಿತ್ತು.

ವಿಗ್ರಹವಾಕ್ಯಗಳು. ೧ ಈಷತ್ ಉಷ್ಣಃ-ಕೋಷ್ಣಃ (ವಿ.ಪೂ.ಕ.); ತೇನ

- ಕೋಷ್ಣೇನ. ೨ ಕುಣ್ಡಮಿವ ಊಧಃ ಯಸ್ಯಾಃ ಸಾ-ಕುಣ್ಡೋಧ್ನೀ (ಉ.ಬ.). ೩ ವತ್ಸಸ್ಯ ಆಲೋಕಃ-ವತ್ಸಾಲೋಕಃ (ಷ.ತ.); ತೇನ-ವತ್ಸಾಲೋಕೇನ; ವತ್ಸಾಲೋಕೇನ ಪ್ರವರ್ತತ ಇತಿ-ವತ್ಸಾಲೋಕಪ್ರವರ್ತೀ (ಕೃ.ವೃ.). ತೇನ-ವತ್ಸಾಲೋಕಪ್ರವರ್ತಿನಾ.

ವ್ಯಾಕರಣವಿಶೇಷ. ೧ ಕೋಷ್ಣಃ-ನಿತ್ಯಸಮಾಸ; ೬೭ನೆಯ ಶ್ಲೋಕದ ೪ನೆಯ ಟಿಪ್ಪಣಿಯನ್ನು (ಪು. ೬೫) ನೋಡಿ. ೨ ಕುಣ್ಡೋಧ್ನೀ- ಊಧಃ ಶಬ್ದವು ಸಕರಾನ್ತ ನಪುಂಸಕಲಿಙ್ಗ; ಬಹುವ್ರೀಹಿಯಲ್ಲಿ ಸ್ತ್ರೀಲಿಂಗದಲ್ಲಿ ಇದಕ್ಕೆ 'ಊಧ್ನೀ' ಎಂಬ ರೂಪವು ಬರುತ್ತದೆ. ೩ ಅವಭೃಥಾತ್-ಇದಕ್ಕಿಂತ(than) ಎಂಬರ್ಥದಲ್ಲಿ ಪಂಚಮೀವಿಭಕ್ತಿಯನ್ನುಪಯೋಗಿಸುವರು.

ವಿಚಾರ. ಕುಂಡವೆಂಬ ಪಾತ್ರೆಯು ಮೇಲೆ ಅಗಲವಾಗಿ ಕೆಳಕ್ಕೆ ಬರಬರುತ್ತ ಅಗಲದಲ್ಲಿ ಕಡಿಮೆಯಾಗಿರುತ್ತದೆ; ಕೆಚ್ಚಲು ದೊಡ್ಡದಾಗಿತ್ತೆಂದು ಹೇಳುವದಕ್ಕೆ ಕವಿಯು ಈ ಉಪಮಾನವನ್ನು ಕೊಟ್ಟಿದ್ದಾನೆ.

ರಜಃ ಕಣೈಃ ಖುರೋದ್ಧೂತೈಃ ಸ್ಪೃಶದ್ಭಿರ್ಗಾತ್ರಮನ್ತಿಕಾತ್ ।
ತೀರ್ಥಾಭಿಷೇಕಜಾಂ ಶುದ್ಧಿಮಾದಧಾನಾ ಮಹೀಕ್ಷಿತಃ ॥೮೫॥

ಅನ್ವಯ. [ಖುರೋದ್ಧೂತೈಃ ಅನ್ತಿಕಾತ್ ಗಾತ್ರಂ ಸ್ಪೃಶದ್ಭಿಃ ರಜಃಕಣೈಃ ಮಹೀಕ್ಷಿತಃ ತೀರ್ಥಾಭಿಷೇಕಜಾಂ ಶುದ್ಧಿಂ ಆದಧಾನಾ (ನನ್ದಿನೀ ನಾಮ ಧೇನುಃ ವನಾತ್ ಆವವೃತೇ)]

ಅರ್ಥ. ಖುರೋದ್ಧೂತೈಃ-(ಖುರ-ಗೊರಸುಗಳಿಂದ ಉದ್ಧೂತೈಃ-ಮೇಲ ಕ್ಕೆಬ್ಬಿಸಲ್ಪಟ್ಟ) ಗೊರಸುಗಳ ಹೊಡೆತದಿಂದ ಮೇಲಕ್ಕೆದ್ದ ಅನ್ತಿಕಾತ್-ಹತ್ತಿರದಲ್ಲಿ ಗಾತ್ರಂ - ಮೈಯನ್ನು ಸ್ಪೃಶದ್ಭಿಃ-ಸೋಕುತ್ತಿರುವ ರಜಃಕಣೈಃ-ಧೂಳಿಯ ಕಣಗಳಿಂದ ಮಹೀಕ್ಷಿತಃ-ರಾಜನಿಗೆ ತೀರ್ಥಾಭಿಷೇಕಜಾಂ-ತೀರ್ಥಸ್ನಾನದಿಂದ ಉಂಟಾದ ಶುದ್ಧಿಂ-ಶುದ್ಧಿಯನ್ನು ಆದಧಾನಾ-ಉಂಟುಮಾಡುತ್ತಿರುವ [ನನ್ದಿನೀ ನಾಮ ಧೇನುಃ ವನಾತ್ ಆವವೃತೇ.]

ತಾತ್ಪರ್ಯ. ನಂದಿನಿಯ ಗೊರಸುಗಳಿಂದೆದ್ದ ಧೂಳಿಯು ಹತ್ತಿರವೇ ಇದ್ದ ದಿಲೀಪರಾಜನ ಮೈಮೇಲೆ ಬಿದ್ದ ಕಾರಣ ಆತನಿಗೆ ತೀರ್ಥಸ್ನಾನಮಾಡಿದ ಪಾವಿತ್ರ್ಯವನ್ನುಂಟುಮಾಡಿತು.

ವಿಗ್ರಹವಾಕ್ಯಗಳು. ೧ ರಜಸಾಂ ಕಣಾಃ-ರಜಃಕಣಾಃ (ಷ.ತ.); ತೈಃ-ರಜಃಕಣೈಃ ೨ ಖುರೈಃ ಉದ್ಧೂತಾಃ-ಖುರೋದ್ಧೂತಾಃ (ತೃ.ತ.); ತೈಃ - ಖುರೋದ್ಧೂತೈಃ ೩ ತೀರ್ಥೇ ಅಭಿಷೇಕಃ-ತೀರ್ಥಾಭಿಷೇಕಃ (ಸ.ತ.); ತಸ್ಮಾತ್-ತೀರ್ಥಾಭಿ

ಷೇಕಾತ್; ತೀರ್ಥಾಭಿಷೇಕಾತ್ ಜಾತಾ-ತೀರ್ಥಾಭಿಷೇಕಜಾ (ಕೃ.ವೃ.); ತಾಂ - ತೀರ್ಥಾಭಿಷೇಕಜಾಮ್. ೪ ಆಧತ್ತೇ ಇತಿ-ಆದಧಾನಾ (ಕೃ.ವೃ.). ೫ ಮಹೀಂ ಕ್ಷಿಯತೇ ಇತಿ-ಮಹೀಕ್ಷಿತ್ (ಕೃ.ವೃ.); ತಸ್ಯ-ಮಹೀಕ್ಷಿತಃ

ವ್ಯಾಕರಣವಿಶೇಷ. ೧ ಅನ್ತಿಕಾತ್-'ದೂರ' 'ಹತ್ತಿರ' ಎಂಬ ಅರ್ಥದ ಮಾತುಗಳಿಗೆ ದ್ವಿತೀಯಾ,ತೃತೀಯಾ, ಪಂಚಮೀ ವಿಭಕ್ತಿಗಳು ಬರುತ್ತವೆ; ಇಲ್ಲಿ ಹತ್ತಿರ ಎಂಬರ್ಥದ ಅನ್ತಿಕಶಬ್ದಕ್ಕೆ ಪಂಚಮೀವಿಭಕ್ತಿ ಬಂದಿದೆ; ಅನ್ತಿಕಂ, ಅನ್ತಿಕೇನ-ಎಂದೂ ಆಗಬಹುದು. ೨ ಆದಧಾನಾ-'ಧಾ' ಎಂಬ ಧಾತುವಿನ ವರ್ತಮಾನಕೃದನ್ತ; ಆ ಎಂಬುದು ಉಪಸರ್ಗ. ೩ ಮಹೀಕ್ಷಿತಃ-'ಕ್ಷಿ' ಧಾತುವು ಆಳು ಎಂಬರ್ಥವುಳ್ಳದ್ದು; ಇದನ್ನು ಇಲ್ಲಿ ಆತ್ಮನೇ ಪದವಾಗಿಯೂ ೧೧ನೆಯ ಶ್ಲೋಕದಲ್ಲಿ ಪರಸ್ಮೈಪದವಾಗಿಯೂ ಮಲ್ಲಿನಾಥವ್ಯಾಖ್ಯಾನದಲ್ಲಿ ಉಪಯೋಗಿಸಿದೆ.

ವಿಚಾರ. ಗೋಧೂಳಿಯು ಮೈಮೇಲೆ ಬಿದ್ದರೆ ವಾಯವ್ಯಸ್ನಾನವೆಂಬ ಒಂದು ಸ್ನಾನವಾದಂತೆ ಎಂದು ಮನುಸ್ಮೃತಿಯಲ್ಲಿ ಹೇಳಿದೆ; ಆದ್ದರಿಂದಲೆ ಕವಿಯು ಇಲ್ಲಿ ಇದನ್ನು ತೀರ್ಥಸ್ನಾನಕ್ಕೆ ಹೋಲಿಸಿರುತ್ತಾನೆ. ಕಾಳಿದಾಸನ ಕಾಲಕ್ಕೆ ಗೋವಿನಲ್ಲಿ ಎಷ್ಟು ಗೌರವವನ್ನಿಟ್ಟಿದ್ದರೆಂಬುದು ೮೪, ೮೫ನೆಯ ಶ್ಲೋಕಗಳಿಂದ ತೋರುತ್ತದೆ.

ತಾಂ ಪುಣ್ಯದರ್ಶನಾಂ ದೃಷ್ಟ್ವಾ ನಿಮಿತ್ತಜ್ಞಸ್ತಪೋನಿಧಿಃ ।
ಯಾಜ್ಯಮಾಶಂಸಿತಾವನ್ಧ್ಯಪ್ರಾರ್ಥನಂ ಪುನರಬ್ರವೀತ್ ॥೮೬॥

ಅನ್ವಯ. [ನಿಮಿತ್ತಜ್ಞಃ ತಪೋನಿಧಿಃ ಪುಣ್ಯದರ್ಶನಾಂ ತಾಂ ದೃಷ್ಟ್ವಾ ಆಶಂಸಿತಾವನ್ಧ್ಯಪ್ರಾರ್ಥನಂ ಯಾಜ್ಯಂ ತಂ ಪುನಃ ಅಬ್ರವೀತ್]

ಅರ್ಥ. ನಿಮಿತ್ತಜ್ಞಃ-ಶಕುನವನ್ನು ಬಲ್ಲ ತಪೋನಿಧಿಃ-ಶ್ರೇಷ್ಠತಪಸ್ವಿಯು ಪುಣ್ಯದರ್ಶನಾಂ-(ಪುಣ್ಯ-ಪುಣ್ಯವನ್ನುಂಟುಮಾಡುವ ದರ್ಶನಾಂ-ನೋಟವುಳ್ಳ) ನೋಡಿದ ಮಾತ್ರದಿಂದ ಪುಣ್ಯವನ್ನುಂಟುಮಾಡುವ ತಾಂ-ಅದನ್ನು ದೃಷ್ಟ್ವಾ-ನೋಡಿ ಆಶಂಸಿತಾವನ್ಧ್ಯಪ್ರಾರ್ಥನಂ-(ಆಶಂಸಿತ-ಇಷ್ಟಾರ್ಥದಲ್ಲಿ ಅವನ್ಧ್ಯ-ವ್ಯರ್ಥವಲ್ಲದ ಪ್ರಾರ್ಥನಂ-ಬಯಕೆಯುಳ್ಳ) ಕೋರುವ ಇಷ್ಟಾರ್ಥವು ಕೈಗೂಡುವಂಥವನಾದ ಯಾಜ್ಯಂ - ಯಾಗ ಮಾಡಿಸಲು ಯೋಗ್ಯನಾದ ತಂ-ಆತನನ್ನು ಕುರಿತು ಪುನಃ-ಮತ್ತೆ ಅಬ್ರವೀತ್ -ನುಡಿದನು.

ತಾತ್ಪರ್ಯ. ಆ ಶುಭವಾದ ಗೋವನ್ನು ಕಾಣುತ್ತಲೂ ಶಕುನಶಾಸ್ತ್ರದಲ್ಲಿ ಕುಶಲರಾದ ವಸಿಷ್ಠರು ದಿಲೀಪನ ಕೋರಿಕೆಯು ಬೇಗ ನೆರವೇರುವದೆಂದು ಮನಗಂಡು ಆತನನ್ನು ಕುರಿತು ಇಂತೆಂದರು.

ವಿಗ್ರಹವಾಕ್ಯಗಳು. ೧ ಪುಣ್ಯಂ ದರ್ಶನಂ ಯಸ್ಯಾಃ ಸಾ-ಪುಣ್ಯದರ್ಶನಾ

(ಷ. ಬ.); ತಾಂ-ಪುಣ್ಯದರ್ಶನಾಂ. ೨ ಜಾನಾತೀತಿ-ಜ್ಞಃ (ಕೃ. ವೃ.); ನಿಮಿತ್ತಸ್ಯಜ್ಞಃ- ನಿಮಿತ್ತಜ್ಞಃ (ಷ. ತ.). ೩ ತಪಸಾಂ ನಿಧಿಃ-ತಪೋನಿಧಿಃ (ಷ. ತ.) ೪ ಯಾಜಯಿತುಂ ಯೋಗ್ಯಃ-ಯಾಜ್ಯಃ (ಕೃ. ವೃ.). ೫ ನ ವನ್ಧ್ಯಂ- ಅವನ್ಧ್ಯಂ (ನ. ತ.); ಆಶಂಸಿತೇ ಅವನ್ಧ್ಯಂ-ಆಶಂಸಿತಾವನ್ಧ್ಯಂ (ಸ. ತ.); ಆಶಂಸಿತಾವನ್ಧ್ಯಂ ಪ್ರಾರ್ಥನಂ ಯಸ್ಯ ಸಃ-ಆಶಂಸಿತಾವನ್ಧ್ಯಪ್ರಾರ್ಥನಃ (ಷ. ತ.); ತಂ-ಆಶಂಸಿತಾವನ್ಧ್ಯಪ್ರಾರ್ಥನಮ್.

ವ್ಯಾಕರಣವಿಶೇಷ. ಆಶಂಸಿತಮ್-ಇದು ಭಾವಾರ್ಥದ ನಾಮ, (abstract noun); ಭೂತಕೃದಂತದ ಹಾಗೆಯೆ ಇದು ರೂಪದಲ್ಲಿ ತೋರುತ್ತಿದ್ದರೂ ಕೃದಂತವು ವಿಶೇಷಣವಾದ್ದರಿಂದ ಮೂರು ಲಿಂಗಗಳಲ್ಲಿಯೂ ಇರಬಹುದು, ಭಾವಾರ್ಥದ ತ ಪ್ರತ್ಯಯವಿರುವ ನಾಮವು ನಪುಂಸಕಲಿಂಗದಲ್ಲಿ ಮಾತ್ರ ಪ್ರಯೋಗವಾಗುತ್ತದೆ.

ಅದೂರವರ್ತಿನೀಂ ಸಿದ್ಧಿಂ ರಾಜನ್ ವಿಗಣಯಾತ್ಮನಃ ।
ಉಪಸ್ಥಿತೇಯಂ ಕಲ್ಯಾಣೀ ನಾಮ್ನಿ ಕೀರ್ತಿತ ಏವ ಯತ್ ॥೮೭॥

ಅನ್ವಯ. [ರಾಜನ್ ಆತ್ಮನಃ ಸಿದ್ಧಿಂ ಆದೂರವರ್ತಿನೀಂ ವಿಗಣಯ ಯತ್ ಕಲ್ಯಾಣೀ ಇಯಂ ನಾಮ್ನಿ ಕೀರ್ತಿತೇ ಏವ ಉಪಸ್ಥಿತಾ ]

ಅರ್ಥ. ರಾಜನ್-ದೊರೆಯೆ ಆತ್ಮನಃ-ನಿನ್ನ ಸಿದ್ಧಿಂ-ಕಾರ್ಯಸಿದ್ಧಿಯನ್ನು ಆದೂರವರ್ತಿನೀಂ-(ದೂರವಿಲ್ಲದ್ದನ್ನಾಗಿ) ಹತ್ತಿರವಿರುವದೆಂದು ವಿಗಣಯ - ಎಣಿಸುವನಾಗು; ಯತ್-ಏಕೆಂದರೆ ಕಲ್ಯಾಣೀ- ಮಂಗಲಕರವಾದ ಇಯಂ-ಇದು ನಾಮ್ನಿ-ಹೆಸರು ಕೀರ್ತಿತೇ ಏವ-ಹೇಳಲ್ಪಡುವದರಲ್ಲಿಯೇ ಉಪಸ್ಥಿತಾ-ಎದುರಿಗೆ ಬಂದಿದೆ.

ತಾತ್ಪರ್ಯ. ರಾಜನೆ, ಹೆಸರು ಹೇಳುವಷ್ಟರಲ್ಲಿಯೇ ಈ ನಂದಿನಿಯು ಬಂದಿರುವದನ್ನು ನೋಡಿದರೆ ನಿನ್ನ ಕಾರ್ಯವು ಬೇಗ ಕೈಗೂಡುವದೆಂದು ನೀನು ನಂಬಬಹುದಾಗಿದೆ.

ವಿಗ್ರಹವಾಕ್ಯಗಳು. ದೂರೇ ವರ್ತತೇ ಇತಿ-ದೂರವರ್ತಿನೀ (ಕೃ.ವೃ.); ನ ದೂರವರ್ತಿನೀ-ಅದೂರವರ್ತಿನೀ(ನ.ತ.); ತಾಂ-ಅದೂರವರ್ತಿನೀಮ್.

ವ್ಯಾಕರಣವಿಶೇಷ. ೧ ಆತ್ಮನಃ- ೪೪ನೆಯ ಶ್ಲೋಕದ ಒಂದನೆಯ ಟಿಪ್ಪಣಿಯನ್ನು (ಪು. ೪೪) ನೋಡಿ. ೨ ಸಿದ್ಧಿಂ-ಇಕಾರಾನ್ತ ಸ್ತ್ರೀಲಿಂಗ. ೩ ನಾಮ್ನಿ ಕೀರ್ತಿತೇ ಏವ-ಸತಿಸಪ್ತಮೀ (locative absolute); 'ಹೆಸರನ್ನು ಹೇಳುವಷ್ಟರಲ್ಲಿಯೇ' ಎಂದರ್ಥ ೪ ಉಪಸ್ಥಿತಾ-'ಸ್ಥಾ ತಿಷ್ಠ' (ನಿಲ್ಲು) ಎಂಬ ಧಾತುವಿನ ಭೂತಕೃದಂತ; ಕ್ರಿಯಾಪದದಂತೆ ಉಪಯೋಗಿಸಿದೆ; ೧೨ನೆಯ ಶ್ಲೋಕದ ೪ನೆಯ

ಟಿಪ್ಪಣಿಯನ್ನು (ಪು. ೧೪) ನೋಡಿ.

ವನ್ಯವೃತ್ತಿರಿಮಾಂ ಶಶ್ವದಾತ್ಮಾನುಗಮನೇನ ಗಾಮ್ ।
ವಿದ್ಯಾಮಭ್ಯಸನೇನೇವ ಪ್ರಸಾದಯಿತುಮರ್ಹಸಿ ॥೮೮॥

ಅನ್ವಯ. [ವನ್ಯವೃತ್ತಿಃ ಇಮಾಂ ಗಾಂ ಶಶ್ವತ್ ಆತ್ಮಾನುಗಮನೇನ ಅಭ್ಯಸನೇನ ವಿದ್ಯಾಂ ಇವ ಪ್ರಸಾದಯಿತುಂ ಅರ್ಹಸಿ ]

ಅರ್ಥ. ವನ್ಯವೃತ್ತಿಃ-(ವನ್ಯ-ಕಾಡಿನಲ್ಲಿ ಬೆಳೆದ ಗೆಡ್ಡೆಗೆಣಸುಗಳೇ ವೃತ್ತಿಃ - ಆಹಾರವುಳ್ಳವನಾಗಿ) ಕಾಡಿನ ಗೆಡ್ಡೆಗೆಣಸುಗಳನ್ನೆ ತಿನ್ನುತ್ತಾ ಇಮಾಂ-ಈ ಗಾಂ - ಹಸುವನ್ನು ಶಶ್ವತ್-ಯಾವಾಗಲೂ ಆತ್ಮಾನುಗಮನೇನ-(ಆತ್ಮ- ನಿನ್ನ ಅನುಗಮನೇನ-ಅನುಸರಿಸುವಿಕೆಯಿಂದ) ನೀನೇ ಅನುಸರಿಸಿ ಅಭ್ಯಸನೇನ - ಅಭ್ಯಾಸದಿಂದ ವಿದ್ಯಾಂ ಇವ-ವಿದ್ಯೆಯನ್ನು ಹೇಗೋ ಹಾಗೆ ಪ್ರಸಾದಯಿತುಂ-ಪ್ರಸನ್ನವಾಗಿ ಮಾಡಿಕೊಳ್ಳಲು ಅರ್ಹಸಿ-ಯೋಗ್ಯನಾಗಿದ್ದೀಯೆ.

ತಾತ್ಪರ್ಯ. ನೀನು ಕಾಡಿನ ಗೆಡ್ಡೆಗೆಣಸುಗಳನ್ನೆ ತಿನ್ನುತ್ತ ಎಡೆಬಿಡದೆ ಈ ಗೋವಿನ ಹಿಂದೆ ಇದ್ದು, ವಿದ್ಯಾರ್ಥಿಗಳು ಒಂದೇ ಸಮನೆ ಓದಿ ವಿದ್ಯೆಯನ್ನು ಒಲಿಸಿಕೊಳ್ಳುವ ಹಾಗೆ ಒಲಿಸಿಕೊ.

ವಿಗ್ರಹವಾಕ್ಯಗಳು. ೧ ವನೇ ಭವಂ-ವನ್ಯಂ (ತ. ವೃ.); ವನ್ಯಂ ವೃತ್ತಿಃ ಯಸ್ಯ ಸಃ-ವನ್ಯವೃತ್ತಿಃ (ಷ. ಬ.). ೨ ಆತ್ಮನಃ ಅನುಗಮನಂ-ಆತ್ಮಾನುಗಮನಂ (ಷ. ತ.); ತೇನ-ಆತ್ಮಾನುಗಮನೇನ.

ವ್ಯಾಕರಣವಿಶೇಷ. ೧ ಶಶ್ವತ್-ಅವ್ಯಯ. ೨ ಪ್ರಸಾದಯಿತುಮರ್ಹಸಿ=ನೀನು ಒಲಿಸಿಕೊಳ್ಳಬೇಕು. ೧೦ನೆಯ ಶ್ಲೋಕದಲ್ಲಿ ೩ನೆಯ ಟಿಪ್ಪಣಿಯನ್ನು (ಪು. ೧೨) ನೋಡಿ.

ವಿಚಾರ. ಆತ್ಮಾನುಗಮನೇನ-ನೀನೇ (personally) ಸೇವಿಸಬೇಕು ಎಂದು ಭಾವ.

ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ ಸ್ಥಿತಾಯಾಂ ಸ್ಥಿತಿಮಾಚರೇಃ ।
ನಿಷಣ್ಣಾಯಾಂ ನಿಷೀದಾಸ್ಯಾಂ ಪೀತಾಮ್ಭಸಿ ಪಿಬೇರಪಃ ॥೮೯॥

ಅನ್ವಯ. [ಅಸ್ಯಾಂ ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ ಸ್ಥಿತಾಯಾಂ ಸ್ಥಿತಿಂ ಆಚರ ನಿಷಣ್ಣಾಯಾಂ ನಿಷೀದ ಪೀತಾಮ್ಭಸಿ ಅಪಃ ಪಿಬೇಃ]

ಅರ್ಥ. ಅಸ್ಯಾಂ-ಇದು ಪ್ರಸ್ಥಿತಾಯಾಂ-ಹೊರಟರೆ ಪ್ರತಿಷ್ಠೇಥಾಃ-ಹೊರಡು ಸ್ಥಿತಾಯಾಂ-ನಿಂತರೆ ಸ್ಥಿತಿಂ-ನಿಲ್ಲುವಿಕೆಯನ್ನು ಆಚರ-ಮಾಡು ನಿಷಣ್ಣಾಯಾಂ -

ಕೂತರೆ ನಿಷೀದ -ಕೂರು ಪೀತಾಮ್ಭಸಿ-(ಪೀತ-ಕುಡಿಯಲ್ಪಟ್ಟ ಅಮ್ಭಸಿ-ನೀರುಳ್ಳ ದ್ದಾದರೆ) ನೀರು ಕುಡಿದರೆ ಅಪಃ-(ಉಳಿದ) ನೀರನ್ನು ಪಿಬೇಃ-ಕುಡಿ.

ತಾತ್ಪರ್ಯ. ಈ ನಂದಿನಿಯು ತಿರುಗಾಡುವದಕ್ಕೆ ಹೊರಟರೆ ಹಿಂದೆಯೆ ನೀನೂ ಹೋಗು; ದಾರಿಯಲ್ಲಿ ನಿಂತರೆ ನೀನೂ ನಿಲ್ಲು; ಅದು ಕೂತರೆ ನೀನೂ ಕೂತುಕೊ; ಅದು ನೀರು ಕುಡಿದರೆ ಉಳಿದ ನೀರನ್ನು ನೀನೂ ಕುಡಿ. ಹೀಗೆ ಅದನ್ನೆ ಅನುವರ್ತಿಸಿಕೊಂಡಿರು.

ವಿಗ್ರಹವಾಕ್ಯಗಳು. ಪೀತಂ ಅಮ್ಭಃ ಯಯಾ ಸಾ-ಪೀತಾಮ್ಭಾಃ (ತೃ. ಬ.); ತಸ್ಯಾಂ-ಪೀತಾಮ್ಭಸಿ.

ವ್ಯಾಕರಣವಿಶೇಷ. ೧ ಅಸ್ಯಾಂ ಪ್ರಸ್ಥಿತಾಯಾಂ-ಇದೇ ಮುಂತಾದವುಗಳು ಸತಿ-ಸಪ್ತಮಿಗಳು. ೨ ಪ್ರತಿಷ್ಠೇಥಾಃ - ಷ್ಠಾ ಗತಿನಿವೃತ್ತೌ (ಸ್ಥಾ,ತಿಷ್ಠ್-ನಿಲ್ಲು) ಎಂಬ ೧ನೆಯ ಗಣದ ಧಾತು, ವಿಧಿಲಿಙ್, ಆ. ಮ. ಏ. ಈ ಧಾತುವು ಪರಸ್ಮೈಪದವಾದರೂ 'ಸಂ', 'ಅವ', 'ಪ್ರ', 'ವಿ'-ಎಂಬ ಉಪಸರ್ಗಗಳು ಸೇರಿದಾಗ ಆತ್ಮನೇಪದವಾಗುತ್ತದೆ. ೩ ಸ್ಥಿತಿಂ ಆಚರೇಃ-ನಿಲ್ಲೋಣವನ್ನು ಕೈಕೊಳ್ಳು ಎಂದು ಅಕ್ಷರಾರ್ಥ; ನಿಲ್ಲು ಎಂದು ತಾತ್ಪರ್ಯ. 'ಆಚರ್''ಕೃ' ಎಂಬ ಧಾತುಗಳನ್ನು ಭಾವನಾಮಗಳಿಗೆ ಹೀಗೆ ಸೇರಿಸಿ ಕ್ರಿಯಾಪದಗಳಂತೆ ಉಪಯೋಗಿಸುವದುಂಟು. ೪ ಆಚರೇಃ-ಚರ ಗತಿಭಕ್ಷಣಯೋಃ (ಚರ್-ನಡೆ,ತಿನ್ನು) ೧ನೆಯ ಗಣ, ಆ ಎಂಬ ಉಪಸರ್ಗದೊಡನೆ ಸೇರಿದೆ. ವಿಧಿಲಿಙ್ ಪ.ಮ. ಏ; 'ಆಚರ' ಎಂಬ ಪಾಠವುಂಟು, ಅದು ಲೋಟ್ ಅರ್ಥದಲ್ಲಿ ಹೆಚ್ಚು ಕಡಿಮೆಯೇನೂ ಇಲ್ಲ. ೫ ನಿಷೀದ- ಷದ್ಲೃವಿಶರಣಗತ್ಯವಸಾದನೇಷು (ಸದ್-ಸಡಿಲಮಾಡು, ಹೋಗು, ನಾಶಮಾಡು) ಎಂಬ ೧ನೆಯ ಗಣದ ಧಾತು; ನಿ ಎಂಬ ಉಪ ಸರ್ಗವು ಸೇರಿ ಕೂತುಕೊ ಎಂಬ ಅರ್ಥವಾಗಿದೆ ಲೋಟ್. ಪ. ಮ. ಏ. ೬ ಪಿಬೇಃ-ಪಾ ಪಾನೇ (ಪಾ, ಪಿಬ್-ಕುಡಿ) ಎಂಬ ೧ನೆಯ ಗಣದ ಧಾತು; ವಿಧಿಲಿಙ್, ಪ. ಮ. ಏ.

ವಧೂರ್ಭಕ್ತಿಮತೀ ಚೈನಾಮರ್ಚಿತಾಮಾ ತಪೋವನಾತ್ ।
ಪ್ರಯತಾ ಪ್ರಾತರನ್ವೇತು ಸಾಯಂ ಪ್ರತ್ಯುದ್ವ್ರಜೇದಪಿ ॥೬೦॥

ಅನ್ವಯ. [ವಧೂಶ್ಚ ಭಕ್ತಿಮತೀ ಪ್ರಯತಾ ಅರ್ಚಿತಾಂ ಏನಾಂ ಪ್ರಾತಃ ಆ ತಪೋವನಾತ್ ಅನ್ವೇತು ಸಾಯಂ ಅಪಿ ಪ್ರತ್ಯುದ್ವ್ರಜೇತ್]

ಅರ್ಥ. ವಧೂಶ್ಚ-ಹೆಂಡತಿಯು ಕೂಡ ಭಕ್ತಿಮತೀ-ಭಕ್ತಿಯುಳ್ಳವಳಾಗಿ ಪ್ರಯತಾ - ಪರಿಶುದ್ಧಳಾಗಿ ಅರ್ಚಿತಾಂ-ಪೂಜಿಸಲ್ಪಟ್ಟ ಏನಾಂ - ಇದನ್ನು ಪ್ರಾತಃ-ಬೆಳಗ್ಗೆ ಆ ತಪೋವನಾತ್-ತಪೋವನದವರೆಗೆ ಅನ್ವೇತು-ಅನುಸರಿಸಲಿ, ಸಾಯಂ ಅಪಿ-ಸಂಜೆಯಲ್ಲಿಯೂ ಪ್ರತ್ಯುದ್ವ್ರಜೇತ್-ಎದುರುಗೊಳ್ಳಹೋಗಲಿ.

ತಾತ್ಪರ್ಯ. ನಿನ್ನ ಹೆಂಡತಿಯಾದ ಸುದಕ್ಷಿಣೆಯು ಪ್ರತಿದಿನವೂ ಬೆಳಗ್ಗೆ

ಮಡಿಯಲ್ಲಿ ಈ ಆಕಳನ್ನು ಪೂಜಿಸಿ ಆಶ್ರಮದ ಎಲ್ಲೆಯುವರೆಗೆ ಅದರ ಹಿಂದೆ ಹೋಗುತ್ತಿರಬೇಕು, ಸಾಯಂಕಾಲದಲ್ಲಿ ಅದನ್ನು ಎದುರುಗೊಂಡು ಕರೆತರಬೇಕು.

ವಿಗ್ರಹವಾಕ್ಯಗಳು. ೧ ಭಕ್ತಿಃ ಅಸ್ಯಾಃ ಅಸ್ತೀತಿ-ಭಕ್ತಿಮತೀ (ತ. ವ್ಯ.).

ವ್ಯಾಕರಣವಿಶೇಷ. ೧ ಆ ತಪೋವನಾತ್-ಇಲ್ಲಿ ತಪೋವನದ ಎಲ್ಲೆಯ (boundary)ವರೆಗೆ ಎಂಬರ್ಥವಿರುವದರಿಂದ ಮರ್ಯಾದಾರ್ಥದಲ್ಲಿ ಆ ಎಂಬ ಅವ್ಯಯವು ಬಂದಿದೆ. ೫ನೆಯ ಶ್ಲೋಕದ ಟಿಪ್ಪಣಿಯನ್ನು (ಪು. ೬) ನೋಡಿ. 'ಆ ತಪೋವನಾತ್'-ಎಂದು ಎರಡು ಪದಗಳು. ಸಮಾಸವಾದರೆ 'ಆತಪೋವನಂ' ಎಂದಾಗುವದು. ೨ ಅನ್ವೇತು-ಇಣ್‌ಗತೌ (ಇ-ಹೋಗು) ಎಂಬ ೨ನೆಯ ಗಣದ ಧಾತುವಿಗೆ ಅನು ಎಂಬ ಉಪಸರ್ಗವು ಸೇರಿದೆ. ಲೋಟ್, ಪ. ಪ್ರ. ಏ. ೩ ಪ್ರತ್ಯುದ್ವ್ರಜೇದಪಿ-ವ್ರಜ ಗತೌ (ವ್ರಜ್-ಹೋಗು) ಎಂಬ ೧ನೆಯ ಗಣದ ಧಾತುವಿಗೆ 'ಪ್ರತಿ' 'ಉತ್' ಎಂಬ ಉಪಸರ್ಗಗಳು ಸೇರಿ ಎದುರುಗೊಳ್ಳು ಎಂಬ ಅರ್ಥವಾಗಿದೆ, ವಿಧಿಲಿಙ್, ಪ. ಪ್ರ. ಏ.

ಇತ್ಯಾ ಪ್ರಸಾದಾದಸ್ಯಾಸ್ತ್ವಂ ಪರಿಚರ್ಯಾಪರೋಭವ ।
ಅವಿಘ್ನಮಸ್ತು ತೇ ಸ್ಥೇಯಾಃ ಪಿತೇವ ಧುರಿ ಪುತ್ರಿಣಾಂ ॥೯೧॥

ಅನ್ವಯ. [ಇತಿ ತ್ವಂ ಆ ಪ್ರಸಾದಾತ್ ಅಸ್ಯಾಃ ಪರಿಚರ್ಯಾಪರಃ ಭವ ತೇ ಅವಿಘ್ನಂ ಅಸ್ತು ಪಿತಾ ಇವ ಪುತ್ರಿಣಾಂ ಧುರಿ ಸ್ಥೇಯಾಃ]

ಅರ್ಥ. ಇತಿ-ಹೀಗೆ ತ್ವಂ-ನೀನು ಆ ಪ್ರಸಾದಾತ್ - ಪ್ರಸನ್ನವಾಗುವವರೆಗೆ ಅಸ್ಯಾಃ-ಇದರ ಪರಿಚರ್ಯಾಪರಃ-(ಪರಿಚರ್ಯಾ-ಸೇವೆಯು ಪರಃ-ಹೆಚ್ಚಾದವನು) ಒಂದೆ ಸಮನೆ ಸೇವಿಸುವವನು ಭವ-ಆಗು; ತೇ-ನಿನಗೆ ಅವಿಘ್ನಂ-ಅಡ್ಡಿಯಿಲ್ಲದಿರುವಿಕೆಯು ಅಸ್ತು-ಆಗಲಿ; ಪಿತಾ ಇವ-ತಂದೆಯು ಹಾಗೆ ಪುತ್ರಿಣಾಂ-ಮಕ್ಕಳೊಂದಿಗರ ಧುರಿ-ಮುಂಭಾಗದಲ್ಲಿ ಸ್ಥೇಯಾಃ-ನಿಲ್ಲು.

ತಾತ್ಪರ್ಯ. ಈ ನಂದಿನಿಯು ನಿನ್ನಲ್ಲಿ ಅನುಗ್ರಹವನ್ನುಂಟುಮಾಡುವವರೆಗೆ ಬಿಡದೆ ಇದನ್ನು ಸೇವಿಸು. ನಿನ್ನ ಕಾರ್ಯವು ನಿರ್ವಿಘ್ನವಾಗಿ ನೆರವೇರಲಿ. ನಿಮ್ಮ ತಂದೆಯಂತೆ ನೀನೂ ಮಕ್ಕಳೊಂದಿಗರಲ್ಲಿ ಮುಂದಾಳಾಗು.

ವಿಗ್ರಹವಾಕ್ಯಗಳು. ೧ ಪರಿಚರ್ಯಾ ಪರಾ ಯಸ್ಯ ಸಃ-ಪರಿಚರ್ಯಾಪರಃ (ಷ. ಬ.). ೨ ವಿಘ್ನಸ್ಯ ಅಭಾವಃ-ನಿರ್ವಿಘ್ನಮ್(ಅ. ಸ.). ೩ ಪ್ರಶಸ್ತಾಃ ಪುತ್ರಾಃ ಏಷಾಂ ಸನ್ತೀತಿ-ಪುತ್ರಿಣಃ (ತ. ವ್ಯ.); ತೇಷಾಂ-ಪುತ್ರಿಣಾಮ್.

ವ್ಯಾಕರಣವಿಶೇಷ. ೧ ಆ ಪ್ರಸಾದಾತ್ - ಎರಡು ಪದ; ಮರ್ಯಾದೆ, ಅಭಿವಿಧಿ-ಈ ಅರ್ಥದ 'ಆ' ಶಬ್ದವು ಸಮಾಸವಾಗಲೂಬಹುದು, ಆಗದೆಯೂ ಇರಬಹುದು, ಸಮಾಸವಾದರೆ 'ಆಪ್ರಸಾದಮ್' ಎಂದಾಗುತ್ತಿತ್ತು. ೫ನೆಯ ಶ್ಲೋಕದ ಟಿಪ್ಪಣಿಯನ್ನು ನೋಡಿ. ೨ ಭವ-ಭೂ ಸತ್ತಾಯಾಂ (ಭೂ-ಇರು,

ಆಗು) ಎಂಬ ಧಾತುವಿನ ಲೋಟ್, ಪ.ಮ.ಏ. ೩ ಸ್ಥೇಯಾಃ-ಷ್ಠಾ ಗತಿನಿವೃತ್ತೌ (ಸ್ಥಾ-ನಿಲ್ಲು) ಎಂಬ ಧಾತುವಿನ ಆಶೀರ್ಲಿಙ್, ಪ.ಮ.ಏ. ೪ ಧುರಿ-ಧೂರ್‌ಶಬ್ದ ರೇಫಾನ್ತ ಸ್ತ್ರೀಲಿಂಗ.

ತಥೇತಿ ಪ್ರತಿಜಗ್ರಾಹ ಪ್ರೀತಿಮಾನ್ ಸಪರಿಗ್ರಹಃ ।
ಆದೇಶಂ ದೇಶಕಾಲಜ್ಞಃ ಶಿಷ್ಯಃ ಶಾಸಿತುರಾನತಃ ॥೯೨॥

ಅನ್ವಯ. [ದೇಶಕಾಲಜ್ಞಃ ಪ್ರೀತಿಮಾನ್ ಶಿಷ್ಯಃ ಸಪರಿಗ್ರಹಃ ಆನತಃ ಶಾಸಿತುಃ ಆದೇಶಂ ತಥೇತಿ ಪ್ರತಿಜಗ್ರಾಹ]

ಅರ್ಥ. ದೇಶಕಾಲಜ್ಞಃ-ದೇಶಕಾಲಗಳನ್ನು ಬಲ್ಲ ಪ್ರೀತಿಮಾನ್ - ಸಂತೋಷ ಗೊಂಡ ಶಿಷ್ಯಃ-ಶಿಷ್ಯನಾದ (ರಾಜನು) ಸಪರಿಗ್ರಹಃ-ಹೆಂಡತಿಯೊಡನೆ ಆನತಃ-ತಲೆ ಬಾಗಿ ಶಾಸಿತುಃ-ಗುರುವಿನ ಆದೇಶಂ-ಅಪ್ಪಣೆಯನ್ನು ತಥೇತಿ-ಹಾಗೆಯೆ ಆಗಲೆಂದು ಪ್ರತಿಜಗ್ರಾಹ-ಸ್ವೀಕರಿಸಿದನು.

ತಾತ್ಪರ್ಯ. ಅಗ್ನಿಹೋತ್ರವು ಮುಗಿದಿದ್ದ ಸಮಯದಲ್ಲಿ ಅಗ್ನಿಯ ಬಳಿ ಯಲ್ಲಿಯೇ ಕೂತಿದ್ದ ವಸಿಷ್ಠರಿಗೆ ಉಂಟಾದ ಭವಿಷ್ಯಜ್ಞಾನದಂತೆ ಮುಂದೆ ನಡೆಯುವ ದೆಂದು ಚೆನ್ನಾಗಿ ಬಲ್ಲ ದಿಲೀಪನು ಆನಂದದಿಂದ ಹೆಂಡತಿಯೊಡನೆ ಅವರನ್ನು ನಮಸ್ಕರಿಸಿ ತಮ್ಮ ಅಪ್ಪಣೆಯಂತೆಯೆ ಆಗಲಿ ಎಂದನು.

ವಿಗ್ರಹವಾಕ್ಯಗಳು. ೧ ಪ್ರೀತಿಃ ಅಸ್ಯಾಸ್ತೀತಿ-ಪ್ರೀತಿಮಾನ್ ೨ ಪರಿಗ್ರಹೇಣ ಸಹ ವರ್ತತೇ ಇತಿ-ಸಪರಿಗ್ರಹಃ (ಸಹ.ಬ.). ೩ ದೇಶಶ್ಚ ಕಾಲಶ್ಚ ದೇಶಕಾಲೌ (ದ್ವ.); ತಯೋಃ-ದೇಶಕಾಲಯೋಃ; ಜಾನಾತೀತಿ ಜ್ಞಃ (ಕೃ.ವೃ.); ದೇಶಕಾಲ ಯೋಃ ಜ್ಞಃ-ದೇಶಕಾಲಜ್ಞಃ (ಷ.ತ.).

ವ್ಯಾಕರಣವಿಶೇಷ. ೧ ಶಾಸಿತುಃ-ಋಕಾರಾನ್ತ ಪುಲ್ಲಿಂಗ, ೨ ಪ್ರತಿಜಗ್ರಾಹ-ಗ್ರಹ ಉಪಾದಾನೇ (ಗ್ರಹ್-ತೆಗೆದುಕೊಳ್ಳು) ೯ನೆಯ ಗಣ, ಪ್ರತಿ ಎಂಬ ಉಪಸರ್ಗದೊಡನೆ ಸೇರಿ 'ಸ್ವೀಕರಿಸು' ಎಂಬ ಅರ್ಥವನ್ನು ಪಡೆದಿದೆ; ಲಿಟ್, ಪ.ಪ್ರ.ಏ.

ಅಥ ಪ್ರದೋಷೇ ದೋಷಜ್ಞಃ ಸಂವೇಶಾಯ ವಿಶಾಂ ಪತಿಮ್ ।
ಸೂನುಃ ಸೂನೃತವಾಕ್ಸ್ರಷ್ಟುರ್ವಿಸಸರ್ಜೋರ್ಜಿತಶ್ರಿಯಮ್ ॥೯೩॥

ಅನ್ವಯ. [ಅಥ ಪ್ರದೋಷೇ ದೋಷಜ್ಞಃ ಸೂನೃತವಾಕ್ ಸ್ರಷ್ಟುಃ ಸೂನುಃ ಊರ್ಜಿತಶ್ರಿಯಂ ವಿಶಾಂ ಪತಿಂ ಸಂವೇಶಾಯ ವಿಸಸರ್ಜ]

ಅರ್ಥ. ಅಥ-ಆಮೇಲೆ ಪ್ರದೋಷೇ-ರಾತ್ರಿಯ ಪ್ರಾರಂಭದಲ್ಲಿ ದೋಷಜ್ಞಃ - ವಿದ್ವಾಂಸನಾದ ಸೂನೃತವಾಕ್-ಸತ್ಯವಾಗಿಯೂ ಪ್ರಿಯವಾಗಿಯೂ ಇರುವ

ಮಾತುಳ್ಳ ಸ್ರಷ್ಟುಃ-ಬ್ರಹ್ಮನ ಸೂನುಃ-ಮಗನು ಊರ್ಜಿತಶ್ರಿಯಂ-(ಊರ್ಜಿತ-ಬಲವಾದ ಶ್ರಿಯಂ-ಸಂಪತ್ತುಳ್ಳ) ಹೆಚ್ಚಿನ ಐಶ್ವರ್ಯವುಳ್ಳ ವಿಶಾಂ-ಜನರ ಪತಿಂ-ಒಡೆಯನನ್ನು ಸಂವೇಶಾಯ-ನಿದ್ರೆ ಮಾಡುವದಕ್ಕೆ ವಿಸಸರ್ಜ-ಕಳುಹಿಸಿಕೊಟ್ಟನು.

ವಿಗ್ರಹವಾಕ್ಯಗಳು. ೧ ಜಾನಾತೀತಿ-ಜ್ಞಃ (ಕೃ. ವೃ.); ದೋಷಾಣಾಂ ಜ್ಞಃ-ದೋಷಜ್ಞಃ(ಷ. ತ.). ೨ ಅತಿಶಯೇನ ಋತಾ-ಸೂನೃತಾ (ಸಾ. ಸ.); ಸೂನೃತಾ ವಾಕ್ ಯಸ್ಯ ಸಃ-ಸೂನೃತವಾಕ್ (ಷ. ಬ.). ೩ ಊರ್ಜಿತಾಶ್ರೀಃ ಯಸ್ಯ ಸಃ-ಊರ್ಜಿತಶ್ರೀಃ (ಷ. ಬ.); ತಂ-ಊರ್ಜಿತಶ್ರಿಯಮ್.

ವ್ಯಾಕರಣವಿಶೇಷ. ೧ ದೋಷಜ್ಞಃ-ಇಲ್ಲಿ ಜ್ಞಃ-ಎಂಬುದು ಸ್ವತಂತ್ರವಾಗಿ ಆಗಿರುವ ಕೃದಂತ, ಆದ್ದರಿಂದ ಉಪಪದಸಮಾಸವಲ್ಲ; ದೋಷಂ ಜಾನಾತೀತಿ-ದೋಷಜ್ಞಃ ಎಂದು ವಿಗ್ರಹಬಿಡಿಸಬಾರದು. ೨ ವಿಶಾಂ ಪತಿಮ್-ಇದನ್ನು ದೊರೆ ಎಂಬರ್ಥದಲ್ಲಿ ಒಟ್ಟು ಸಮಾಸವೆಂಬಂತೆ ಉಪಯೋಗಿಸುತ್ತಾರೆ; ಎರಡು ಪದಗಳು. ೩ ವಿಶಾಂ-ವಿಟ್ ಶಬ್ದ ಶಕಾರಾನ್ತ ಪುಲ್ಲಿಂಗ. ೩ ಸೂನೃತವಾಕ್-ಚಕಾರಾನ್ತ ಪುಲ್ಲಿಂಗ. ೪ ಊರ್ಜಿತ ಶ್ರಿಯಂ-ಈಕಾರಾನ್ತ ಪುಲ್ಲಿಂಗ ; ಊರ್ಜಿತಶ್ರೀಯೌ, ಊರ್ಜಿತಶ್ರಿಯಃ-ಎಂದು ದ್ವಿವಚನಬಹುವಚನಗಳು. ೫ ಸ್ರಷ್ಟುಃ - ಋಕಾರಾನ್ತ ಪುಲ್ಲಿಂಗ. ೫ ವಿಸಸರ್ಜ-ಸೃಜ ವಿಸರ್ಗೇ (ಸೃಜ್-ಬಿಡು) ಎಂಬ ೬ನೆಯ ಗಣದ ಧಾತುವಿಗೆ ವಿ ಎಂಬ ಉಪಸರ್ಗವು ಸೇರಿದೆ; ಲಿಟ್, ಪ. ಪ್ರ. ಏ.

ಸತ್ಯಾಮಪಿ ತಪಃಸಿದ್ಧೌ ನಿಯಮಾಪೇಕ್ಷಯಾ ಮುನಿಃ ।
ಕಲ್ಪವಿತ್ ಕಲ್ಪಯಾಮಾಸ ವನ್ಯಾಮೇವಾಸ್ಯ ಸಂವಿಧಾಮ್ ॥೯೪॥

ಅನ್ವಯ. [ಕಲ್ಪವಿತ್ ಮುನಿಃ ತಪಃಸಿದ್ಧೌ ಸತ್ಯಾಮಪಿ ನಿಯಮಾಪೇಕ್ಷಯಾ ಅಸ್ಯ ವನ್ಯಾಂ ಏವ ಸಂವಿಧಾಂ ಕಲ್ಪಯಾಮಾಸ]

ಅರ್ಥ. ಕಲ್ಪವಿತ್-ವ್ರತಕ್ರಮವನ್ನು ತಿಳಿದವನಾದ ಮುನಿಃ-ಋಷಿಯು ತಪಃಸಿದ್ಧೌ - ತಪಸ್ಸಿನ ಸಿದ್ಧಿಯು ಸತ್ಯಾಮಪಿ - ಇದ್ದರೂ ನಿಯಮಾಪೇಕ್ಷಯಾ - ವ್ರತದ ಅಪೇಕ್ಷೆಯಿಂದ ಅಸ್ಯ-ಈತನಿಗೆ ವನ್ಯಾಂ ಏವ-ವನದಲ್ಲಿದ್ದದ್ದನ್ನೇ ಸಂವಿಧಾಂ-ಸಾಮಗ್ರಿಯನ್ನು ಕಲ್ಪಯಾಮಾಸ-ಏರ್ಪಡಿಸಿದನು.

ತಾತ್ಪರ್ಯ. ರಾಜನಿಗೆ ಯೋಗ್ಯವಾದ ತಿಂಡಿತಿನಸುಗಳನ್ನೂ ಮಲಗುವ ಮನೆ, ಹಾಸಿಗೆ- ಮುಂತಾದ ಸಾಮಗ್ರಿಗಳನ್ನೂ ತಪೋಬಲದಿಂದ ಸೃಷ್ಟಿಮಾಡುವ ಯೋಗ್ಯತೆ ಇದ್ದರೂ ವ್ರತದ ಕ್ರಮವನ್ನು ತಿಳಿದವರಾದ ವಸಿಷ್ಠರು ರಾಜನು ಆಗಿನಿಂದಲೆ ವ್ರತದಲ್ಲಿ ತೊಡಗಲೆಂಬ ಉದ್ದೇಶದಿಂದ ಅರಣ್ಯದಲ್ಲಿ ಸಿಕ್ಕುವ ಸಾಮಗ್ರಿಗಳನ್ನೆ ದಿಲೀಪನಿಗೆ ಕೊಡಿಸಿಕೊಟ್ಟರು.

ವಿಗ್ರಹವಾಕ್ಯಗಳು. ೧ ತಪಸಃ ಸಿದ್ಧಿಃ-ತಪಃಸಿದ್ಧಿಃ (ಷ. ತ.); ತಸ್ಯಾಂ-ತಪ

ಸ್ಸಿದ್ಧೌ. ೨ ನಿಯಮಸ್ಯ ಅಪೇಕ್ಷಾ-ನಿಯಮಾಪೇಕ್ಷಾ (ಷ. ತ.); ತಯಾ-ನಿಯಮಾ ಪೇಕ್ಷಯಾ. ೩ ಕಲ್ಪಂ ವೇತ್ತೀತಿ-ಕಲ್ಪವಿತ್ (ಕೃ. ವೃ.). ೪ ವನೇ ಭವಾ-ವನ್ಯಾ (ತ. ವೃ.); ತಾಂ-ವನ್ಯಾಮ್. ೫ ಸಂವಿಧೀಯತೇ ಅನಯಾ ಇತಿ-ಸಂವಿಧಾ (ಕೃ. ವೃ.); ತಾಂ-ಸಂವಿಧಾಮ್.

ವ್ಯಾಕರಣವಿಶೇಷ. ೧ ತಪಃಸಿದ್ಧೌ ಸತ್ಯಾಂ-ಸತಿಸಪ್ತಮೀ. ೨ ನಿಯಮಾಪೇಕ್ಷಯಾ- ವ್ರತದ ಅಪೇಕ್ಷೆಯಿಂದ ಎಂಬುದು ಅಕ್ಷರಾರ್ಥ; 'ವ್ರತವಾಗಲೆಂಬ ಉದ್ದೇಶದಿಂದ' ಎಂಬುದು ತಾತ್ಪರ್ಯ. ಆ ದೃಷ್ಟಿಯನ್ನಿಟ್ಟು (in consideration of) ಎಂಬ ಅರ್ಥದಲ್ಲಿ ಅಪೇಕ್ಷಯಾ ಎಂಬ ಮಾತನ್ನು ಉಪಯೋಗಿಸುವರು. ೩ ಸಂವಿಧಾ- ಇಲ್ಲಿ ಬಂದಿರುವ ಘ (ಅ) ಪ್ರತ್ಯಯವು ಕರಣಾರ್ಥದಲ್ಲಿ (instrument) ಬಂದಿದೆ. 'ಸಂವಿಧೀಯತೇ ಅನಯಾ' ಎಂದರೆ ಇದರಿಂದ ಏರ್ಪಾಡು ಮಾಡಲ್ಪಡುತ್ತದೆ ಎಂದರ್ಥ. ೪ ಕಲ್ಪಯಾಮಾಸ-ಕ್ಲೃಪೂ ಸಾಮರ್ಥ್ಯೇ (ಕ್ಲಪ್-ಶಕ್ತನಾಗು) ಎಂಬ ೧ನೆಯ ಗಣದ ಧಾತುವಿನ, ಣಿಜನ್ತ, ಲಿಟ್, ಪ. ಪ್ರ. ಏ.

ನಿರ್ದಿಷ್ಟಾಂ ಕುಲಪತಿನಾ ಸಪರ್ಣಶಾಲಾ-
ಮಧ್ಯಾಸ್ಯ ಪ್ರಯತಪರಿಗ್ರಹದ್ವಿತೀಯಃ ।
ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ
ಸಂವಿಷ್ಟಃ ಕುಶಶಯನೇ ನಿಶಾಂ ನಿನಾಯ ॥೯೫॥

ಅನ್ವಯ. [ಸಃ ಕುಲಪತಿನಾ ನಿರ್ದಿಷ್ಟಾಂ ಪರ್ಣಶಾಲಾಂ ಅಧ್ಯಾಸ್ಯ ಪ್ರಯತ ಪರಿಗ್ರಹದ್ವಿತೀಯಃ ಕುಶಶಯನೇ ಸಂವಿಷ್ಟಃ ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ ನಿಶಾಂ ನಿನಾಯ ]

ಅರ್ಥ. ಸಃ-ಆತನು ಕುಲಪತಿನಾ-(ಕುಲ-ಮುನಿಕುಲದ ಪತಿನಾ-ಒಡೆಯ ನಿಂದ) ಮುನೀಶ್ವರನಿಂದ ನಿರ್ದಿಷ್ಟಾಂ-ತೋರಿಸಲ್ಪಟ್ಟ ಪರ್ಣಶಾಲಾಂ-ಎಲೆಮನೆ ಯನ್ನು ಅಧ್ಯಾಸ್ಯ-ಆಶ್ರಯಿಸಿ ಪ್ರಯತಪರಿಗ್ರಹದ್ವಿತೀಯಃ-(ಪ್ರಯತ- ನಿಯಮದಿಂ ದಿರುವ ಪರಿಗ್ರಹ - ಹೆಂಡತಿಯು ದ್ವಿತೀಯಃ-ಜೊತೆಯಾಗುಳ್ಳವನಾಗಿ) ನಿಯಮ ದಿಂದ ಕೂಡಿದ ಹೆಂಡತಿಯೊಡನೆ ಕುಶಶಯನೇ-ದರ್ಭೆಗಳ ಹಾಸಿಗೆಯಲ್ಲಿ ಸಂವಿಷ್ಟಃ - ಮಲಗಿದವನಾಗಿ ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ-(ತಚ್ಛಿಷ್ಯ-ಆತನ ಶಿಷ್ಯರ ಅಧ್ಯಯನ-ವೇದಪಾಠದಿಂದ ನಿವೇದಿತ-ತಿಳಿಸಲ್ಪಟ್ಟ ಅವಸಾನಾಂ-ಕೊನೆಯು ಳ್ಳ) ಆತನ ಶಿಷ್ಯರು ವೇದಾಧ್ಯಯನವನ್ನು ಮಾಡಿದ್ದರಿಂದ ಮುಗಿದಿರಬೇಕೆಂದು ಗೊತ್ತಾದ ನಿಶಾಂ-ರಾತ್ರಿಯನ್ನು ನಿನಾಯ-ಕಳೆದನು.

ತಾತ್ಪರ್ಯ. ವಸಿಷ್ಠರು ತೋರಿಸಿದ ಎಲೆಮನೆಯಲ್ಲಿ ದಿಲೀಪನು ಹೆಂಡತಿ ಯೊಡನೆ ದರ್ಭೆಯ ಹಾಸಿಗೆಯ ಮೇಲೆ ನಿಯಮದಿಂದ ಮಲಗಿದ್ದನು. ಬೆಳಗಿನ

ಜಾವದಲ್ಲಿ ವಸಿಷ್ಠರ ಶಿಷ್ಯರು ವೇದಾಧ್ಯಯನವನ್ನು ಮಾಡುತ್ತಿದ್ದ ಗದ್ದಲದಿಂದ ಬೆಳಕು ಹರಿಯಿತೆಂದು ತಿಳಿದು ಎಚ್ಚತ್ತನು.

ವಿಗ್ರಹವಾಕ್ಯಗಳು. ೧ ಕುಲಸ್ಯ ಪತಿಃ-ಕುಲಪತಿಃ (ಷ. ತ.); ತೇನ-ಕುಲಪತಿನಾ. ೨ ಪರ್ಣಾನಾಂ ಶಾಲಾ-ಪರ್ಣಶಾಲಾ (ಷ. ತ.); ತಾಂ ಪರ್ಣಶಾಲಾಮ್. ೩ ಪ್ರಯತಶ್ಚಾಸೌ ಪರಿಗ್ರಹಶ್ಚ-ಪ್ರಯತಪರಿಗ್ರಹಃ (ವಿ. ಪೂ. ಕ.); ಪ್ರಯತಪರಿಗ್ರಹಃ ದ್ವಿತೀಯಃ ಯಸ್ಯ ಸಃ-ಪ್ರಯತಪರಿಗ್ರಹದ್ವಿತೀಯಃ (ಷ. ಬ.). ೪ ತಸ್ಯ ಶಿಷ್ಯಾಃ - ತಚ್ಛಿಷ್ಯಾಃ (ಷ. ತ.). ತೇಷಾಂ-ತಚ್ಛಿಷ್ಯಾಣಾಂ; ತಚ್ಛಿಷ್ಯಾಣಾಂ ಅಧ್ಯಯನಂ-ತಚ್ಛಿಷ್ಯಾಧ್ಯಯನಂ (ಷ. ತ.); ತೇನ-ತಚ್ಛಿಷ್ಯಾಧ್ಯಯನೇನ; ತಚ್ಛಿಷ್ಯಾಧ್ಯಯನೇನ ನಿವೇದಿತಂ-ತಚ್ಛಿಷ್ಯಾಧ್ಯಯನನಿವೇದಿತಂ (ತೃ. ತ.); ತಚ್ಛಿಷ್ಯಾಧ್ಯಯನ ನಿವೇದಿತಂ ಅವಸಾನಂ ಯಸ್ಯಾಃ ಸಾ-ತಚ್ಛಿಷ್ಯಾಧ್ಯಯನನಿವೇದಿತಾವಸಾನಾ (ಷ. ಬ.); ತಾಂ-ತಚ್ಛಿಷ್ಯಾಧ್ಯಯನನಿವೇದಿತಾವಸಾನಾಮ್.

ವ್ಯಾಕರಣವಿಶೇಷ. ೧ ಕುಲಪತಿಃ- ಸಮಾಸವಾದ್ದರಿಂದ ಹರಿಶಬ್ದದ ಹಾಗೆ ನಡೆಯುತ್ತದೆ; ೪೭ನೆಯ ಶ್ಲೋಕದ ಒಂದನೆಯ ಟಿಪ್ಪಣಿಯನ್ನು ನೋಡಿ. ೨ ಪರ್ಣನಿರ್ಮಿತಾ ಶಾಲಾ-ಪರ್ಣಶಾಲಾ ಎಂದು ಬಿಡಿಸಬಹುದು (ಮ.ಪ.ಲೋ.); ಆಗ ಶಾಕಪಾರ್ಥಿವಸಮಾಸವಾಗುತ್ತದೆ. ೩ ಅಧ್ಯಾಸ್ಯ-ಅಧಿ ಎಂಬ ಉಪಸರ್ಗದ ಸಂಬಂಧದಿಂದ ಆಸ್ ಎಂಬ ಧಾತು ಸಕರ್ಮಕವಾಗಿದೆ; ೮೦ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು ನೋಡಿ. ೪ ಪರಿಗ್ರಹದ್ವಿತೀಯಃ-ಪರಿಗ್ರಹಶಬ್ದವು ಹೆಂಡತಿಯೆಂಬ ಅರ್ಥವಿರುವಾಗಲೂ ಪುಲ್ಲಿಂಗ. ೫ ನಿನಾಯ-ಣೀಞ್ ಪ್ರಾಪಣೇ-(ನೀ-ಒಯ್ಯು) ಎಂಬ ೧ನೆಯ ಗಣದ ಧಾತು; ಲಿಟ್; ಪ. ಪ್ರ. ಏ.

ವಿಚಾರ. ಹತ್ತು ಸಾವಿರ ಮುನಿಗಳಿಗೆ ಅನ್ನಾದಿಗಳನ್ನು ಕೊಟ್ಟು ಅಧ್ಯಯನವನ್ನೂ ಮಾಡಿಸುವ ಬ್ರಹ್ಮರ್ಷಿಗೆ ಕುಲಪತಿಯೆಂದು ಹೆಸರು. ಸ್ತುತಿಗಳಿಂದಲೂ ವಾದ್ಯಗಳಿಂದಲೂ ಎಚ್ಚರಿಸಲ್ಪಡುತ್ತಿದ್ದ ರಾಜನು ಈ ದಿನ ಕುಲಪತಿಗಳಾದ ವಸಿಷ್ಠರ ಸಾವಿರಾರು ಶಿಷ್ಯರ ಅಧ್ಯಯನದ ಶಬ್ದವನ್ನು ಕೇಳುತ್ತಾ ಎಚ್ಚತ್ತನೆಂದು ಕವಿಯು ಸೂಚಿಸಿರುತ್ತಾನೆ.

---

# ಪರಿಶಿಷ್ಟ

೧ ಒಂದನೆಯ ಸರ್ಗದಲ್ಲಿರುವ ವಿಷಯಗಳ ವಿಂಗಡ

ಶ್ಲೋ. ೧-೪ ಮಂಗಳ; ಕಾವ್ಯವನ್ನು ಮೊದಲುಮಾಡುವದಕ್ಕೆ ಪ್ರಸ್ತಾವನೆ.

೫-೮ ರಘುವಂಶದ ರಾಜರಲ್ಲಿದ್ದ ಗುಣಗಳು.

೯-೧೦ ರಘುಗಳ ವಂಶವನ್ನು ವರ್ಣಿಸುವದಾಗಿ ಕವಿಯ ಪ್ರತಿಜ್ಞೆ.

೧೧-೧೨ ಪೂರ್ವದಲ್ಲಿ ವೈವಸ್ವತನೆಂಬ ಮನುವಿದ್ದನು. ಅವನು ಈ ರಾಜರಲ್ಲಿ ಮೊಟ್ಟಮೊದಲನೆಯವನು. ಅವನ ವಂಶದಲ್ಲಿ ದಿಲೀಪನೆಂಬ ರಾಜನು ಹುಟ್ಟಿದನು.

೧೩-೩೦ ದಿಲೀಪನು ಸದ್ಗುಣಗಳಿಂದ- ಕೂಡಿದವನಾಗಿ ಪ್ರಜೆಗಳನ್ನು ಮಕ್ಕಳಂತೆ ಚೆನ್ನಾಗಿ ಕಾಪಾಡುತ್ತಿದ್ದನು.

೩೧-೩೨ ಆತನಿಗೆ ಮಗಧವಂಶದ ರಾಜಪುತ್ರಿಯಾದ ಸುದಕ್ಷಿಣೆ ಎಂಬಾಕೆಯು ಪಟ್ಟದರಸಿಯಾಗಿದ್ದಳು. ತನ್ನ ಅಂತಃಪುರದಲ್ಲಿ ಇನ್ನೂ ಎಷ್ಟೋ ಜನ ರಾಜಪುತ್ರಿಯರು ಇರುತ್ತಿದ್ದರೂ ಈಕೆಯಲ್ಲಿ ಅವನಿಗೆ ಬಹಳ ಪ್ರೇಮವಿತ್ತು.

೩೩-೩೫ ರಾಜನು ಬಹುಕಾಲವಾದರೂ ಆಕೆಯಲ್ಲಿ ತಕ್ಕ ಮಗನು ತನಗೆ ಆಗಲಿಲ್ಲವಾದ ಕಾರಣ ತನಗೆ ಸಂತಾನವಾಗುವದಕ್ಕೆ ಯಾವ ಕರ್ಮವನ್ನು ಮಾಡಬೇಕೆಂಬುದನ್ನು ತನ್ನ ಕುಲಗುರುಗಳಿಂದ ತಿಳಿಯಬೇಕೆಂದು ಯೋಚಿಸಿ ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ ವಸಿಷ್ಠರ ಆಶ್ರಮಕ್ಕೆ ಪತ್ನೀಸಮೇತನಾಗಿ ತೆರಳಿದನು.

೩೬-೪೮ ದಾರಿಯಲ್ಲಿರುವ ಆಶ್ಚರ್ಯಗಳನ್ನು ನೋಡುತ್ತಲೂ ಅಗ್ರಹಾರಗಳಲ್ಲಿರುವ ಬ್ರಾಹ್ಮಣರ ಆಶೀರ್ವಾದಗಳನ್ನು ಹೊಂದುತ್ತಲೂ ಕಾಣಿಕೆಯನ್ನು ತಂದೊಪ್ಪಿಸುವ ಹಳ್ಳಿಯ ಜನರನ್ನು ಸಮ್ಮಾನಿಸುತ್ತಲೂ ರಾಜನೂ ರಾಣಿಯೂ ಕೊನೆಗೆ ಸಂಜೆಯ ಹೊತ್ತಿಗೆ ಆಶ್ರಮಕ್ಕೆ ತಲುಪಿದರು.

೪೯-೫೩ ಆಶ್ರಮದ ವರ್ಣನೆ.

೫೪-೭೨ ರಾಜನು ಹೆಂಡತಿಯೊಡನೆ ರಥದಿಂದ ಇಳಿದು ವನದ ಮುನಿಗಳು ಮಾಡಿದ ಅತಿಥಿಸತ್ಕಾರವನ್ನು ಹೊಂದಿ ಸಾಯಂಕಾಲದ ಕರ್ಮಾನುಷ್ಠಾನವಾದ ಮೇಲೆ ವಸಿಷ್ಠರನ್ನು ನೋಡಿದನು. ಕುಶಲ ಪ್ರಶ್ನೆಯು ನಡೆದ ಮೇಲೆ ಪುತ್ರಸಂತತಿಯಿಲ್ಲದೆ ತನಗುಂಟಾಗಿರುವ ದುಃಖವನ್ನು ಹೇಳಿಕೊಂಡನು.

೭೩-೮೧ ಪೂರ್ವದಲ್ಲಿ ಈ ರಾಜನು ಇಂದ್ರಲೋಕಕ್ಕೆ ಹೋಗಿ ಹಿಂತಿರುಗುತ್ತಿದ್ದಾಗ ಕಾಮಧೇನುವು ಎದುರಿಗಿದ್ದರೂ ಪ್ರದಕ್ಷಿಣಾದಿಗಳಿಂದ ಆದರಿಸದ ಕಾರಣ ಅದು ಕೊಟ್ಟ ಶಾಪವೇ ಇವನಿಗೆ ಸಂತತಿಯಾಗದೆ ಇರುವದರ ಕಾರಣವೆಂದು

ವಸಿಷ್ಠರು ಧ್ಯಾನಬಲದಿಂದ ಗೊತ್ತುಮಾಡಿಕೊಂಡು, ಆ ಕಾಮಧೇನುವು ಆಗ್ಗೆ ದೊರೆಯುವ ಹಾಗಿಲ್ಲದ್ದರಿಂದ ತಮ್ಮ ಬಳಿಯಲ್ಲಿದ್ದ ಅದರ ಕರುವಾದ ನಂದಿನೀಧೇನುವನ್ನೆ ಸೇವಿಸಿ ಒಲಿಸಿಕೊಂಡರೆ ಅವನ ಇಷ್ಟಾರ್ಥವು ಕೈಸೇರುವದೆಂದು ಅಪ್ಪಣೆ ಕೊಡಿಸಿದರು.

೮೨-೯೨ ಅವರು ಹೀಗೆನ್ನುವಷ್ಟರಲ್ಲಿಯೇ ಆ ನಂದಿನಿಯು ಅಲ್ಲಿಗೆ ಬಂತು. (ನಂದಿನಿಯ ವರ್ಣನೆ); ಅದನ್ನು ಕಂಡು ಒಳ್ಳೆಯ ಶಕುನವಾಯಿತೆಂದು ವಸಿಷ್ಠರು ಆ ದಿನ ಸಾಯಂಕಾಲದಿಂದಲೇ ರಾಜನು ವ್ರತನಿಷ್ಠನಾಗಿರಬೇಕೆಂದೂ ನಂದಿನಿಯು ಪ್ರಸನ್ನವಾಗುವವರಿಗೂ ಅದನ್ನು ದಂಪತಿಗಳಿಬ್ಬರೂ ಹೀಗೆ ಹೀಗೆ ಸೇವಿಸಬೇಕೆಂದೂ ಕಟ್ಟುಮಾಡಿದರು. ರಾಜನು ಅದಕ್ಕೆ ಸಂತೋಷದಿಂದ ಒಪ್ಪಿಕೊಂಡನು.

೯೩-೯೫ ಮಲಗುವ ಹೊತ್ತಾದ್ದರಿಂದ ವಸಿಷ್ಠರು ರಾಜನಿಗೆ ಒಂದು ಪರ್ಣಶಾಲೆಯಲ್ಲಿ ಹಾಸಿಗೆ ಮುಂತಾದ್ದನ್ನು ಏರ್ಪಡಿಸಿಕೊಟ್ಟರು. ರಾಜನು ನಿಯಮದಿಂದ ದರ್ಭೆಯ ಹಾಸಿಗೆಯಲ್ಲಿ ಮಲಗಿದ್ದು ಬೆಳಗ್ಗೆ ವಸಿಷ್ಠರ ಶಿಷ್ಯರ ವೇದಾಧ್ಯಯನದ ಸದ್ದಿಗೆ ಎಚ್ಚತ್ತನು.

## ೨ ಶಬ್ದರೂಪಗಳು

ಮಾಗಧ (೩೧) 'ಮಗಧರಾಜನು' ಅ.ಪು. ಮಾಗಧಃ, ಮಗಧೌ, ಮಗಧಾಃ । ಮಾಗಧ, ಮಗಧೌ ಮಗಧಾಃ । ಇತ್ಯಾದಿ ॥ ಏಕವಚನದಲ್ಲಿ 'ಮಾಗಧ', ದ್ವಿಬಹುವಚನಗಳಲ್ಲಿ 'ಮಗಧ'-ಎಂಬ ರೂಪವನ್ನಿಟ್ಟು ರಾಮಶಬ್ದದಂತೆ ನಡೆಸಬೇಕು.

ಸ್ವ (೩೪,೮೩) 'ತಾನು, ತನ್ನ.'ತಾನು ಎಂಬರ್ಥದಲ್ಲಿ ಪುಲ್ಲಿಂಗ; ತನ್ನ ಎಂಬರ್ಥದಲ್ಲಿ ಮೂರು ಲಿಂಗದಲ್ಲಿಯೂ ನಡೆಯುವದು.

ಪುಲ್ಲಿಂಗದಲ್ಲಿ; ಸ್ವಃ ಸ್ವೌ ಸ್ವೇ, ಸ್ವಾಃ । ಸ್ವ ಸ್ವೌ ಸ್ವಾಃ । ಸ್ವಮ್ ಸ್ವೌ ಸ್ವಾನ್। ಸ್ವೇನ ಸ್ವಾಭ್ಯಾಮ್ ಸ್ವೈಃ । ಸ್ವಸ್ಮೈ ಸ್ವಾಭ್ಯಾಮ್ ಸ್ವೇಭ್ಯಃ । ಇತ್ಯಾದಿ ಪೂರ್ವಶಬ್ದದಂತೆ.

ನಪುಂಸಕದಲ್ಲಿ: ಪ್ರಥಮ, ಸಂಬೋಧನ, ದ್ವಿತೀಯೆಗಳಲ್ಲಿ ಸ್ವಮ್ ಸ್ವೇ ಸ್ವಾನಿ । ಮಿಕ್ಕದ್ದು ಪುಲ್ಲಿಂಗದಂತೆಯೆ ನಡೆಯುತ್ತದೆ.

ಸ್ವ (೨೭) 'ಹಣ' ನಪುಂಸಕ ಅಥವಾ ಪುಲ್ಲಿಂಗ; 'ಜ್ಞಾತಿ'ಎಂಬರ್ಥದಲ್ಲಿ ಪುಲ್ಲಿಂಗ. ಪುಲ್ಲಿಂಗದಲ್ಲಿ ರಾಮಶಬ್ದದಂತೆ ; ನಪುಂಸಕದಲ್ಲಿ ಜ್ಞಾನಶಬ್ದದಂತೆ.

ಪಾದ (೫೭) ಅ.ಪು. ರಾಮಶಬ್ದದಂತೆ ; ದ್ವಿತೀಯಾಬಹುವಚನದಿಂದ 'ಪದಃ' । ಪದಾ ಪದ್ಭ್ಯಾಂ ಪದ್ಭಿಃ । ಪದೇ ಪದ್ಭ್ಯಾಂ ಪದ್ಭ್ಯಃ-ಮುಂತಾದ ರೂಪಗಳೂ ಉಂಟು.

ಐಕ್ಷ್ವಾಕ (೭೦) 'ಇಕ್ಷ್ವಾಕುದೇಶದ ರಾಜ' ಅ. ಪು. ಐಕ್ಷ್ವಾಕಃ ಐಕ್ಷ್ವಾಕವಃ ಇಕ್ಷ್ವಾಕವಃ ಐಕ್ಷ್ವಾಕ ಐಕ್ಷ್ವಾಕೌ ಇಕ್ಷ್ವಾಕವಃ । ಐಕ್ಷ್ವಾಕಂ ಐಕ್ಷ್ವಾಕೌ ಇಕ್ಷ್ವಾಕೂನ್ । ಇತ್ಯಾದಿ ॥ ಏಕದ್ವಿವಚನಗಳಲ್ಲಿ 'ಐಕ್ಷ್ವಾಕ' ಎಂಬ ರೂಪವನ್ನಿಟ್ಟು ರಾಮಶಬ್ದದಂತೆಯೂ ಬಹುವಚನದಲ್ಲಿ 'ಇಕ್ಷ್ವಾಕು' ಎಂಬುದನ್ನಿಟ್ಟುಕೊಂಡು ಶಂಭುಶಬ್ದದಂತೆಯೂ ನಡೆಸಬೇಕು.

ಜರಾ (೨೩) ಆ.ಸ್ತ್ರೀ. ರಮಾಶಬ್ದದಂತೆ. ವಿಶೇಷರೂಪಗಳು: ಪ್ರ ॥ಸಂ ॥ ಜರಸೌ ಜರಸಃ । ದ್ವಿ ॥ಜರಸಂ ಜರಸೌ ಜರಸಃ । ತೃ ॥ ಜರಸಾ । ಚ ॥ ಜರಸೇ । ಪಂ ॥ಜರಸಃ । ಷ ॥ ಜರಸಃ ಜರಸೋಃ ಜರಸಾಮ್ । ಸ ॥ಜರಸಿ ಜರಸೋಃ ಜರಸ್ಸು ॥

ನಿಶಾ (೯೫) ಆ. ಸ್ತ್ರೀ. ರಮಾಶಬ್ದದಂತೆ, ವಿಶೇಷರೂಪಗಳು: ದ್ವಿ, ಬ ॥ ನಿಶಃ । ತೃ ॥ ನಿಶಾ ನಿಡ್ಭ್ಯಾಮ್ ನಿಡ್ಭಿಃ । ಚ ॥ ನಿಶೇ ನಿಡ್ಭ್ಯಾಮ್ ನಿಡ್ಭ್ಯಃ । ಪಂ ॥ ನಿಶಃ ನಿಡ್ಭ್ಯಾಮ್ ನಿಡ್ಭ್ಯಃ । ಷ ॥ ನಿಶಃ ನಿಶೋಃ ನಿಶಾಮ್ । ಸ ॥ ನಿಶಿ ನಿಶೋಃ ನಿಟ್ಸು, ನಿಟ್ತ್ಸು ॥

ಅಕ್ಷಿ(೪೦) ಇ.ನ. ಅಕ್ಷಿ ಅಕ್ಷಿಣೀ ಅಕ್ಷೀಣಿ । ಅಕ್ಷೇ, ಅಕ್ಷಿ ಅಕ್ಷಿಣೀ ಅಕ್ಷೀಣಿ। ಅಕ್ಷಿ ಅಕ್ಷಿಣೀ ಅಕ್ಷೀಣಿ । ಅಕ್ಷ್ಣಾ ಅಕ್ಷಿಭ್ಯಾಮ್ ಅಕ್ಷಿಭ್ಯಃ । ಅಕ್ಷ್ಣೇ ಅಕ್ಷಿಭ್ಯಾಮ್ ಅಕ್ಷಿಭ್ಯಃ। ಅಕ್ಷ್ಣಃ ಅಕ್ಷಿಭ್ಯಾಮ್ ಅಕ್ಷಿಭ್ಯಃ । ಅಕ್ಷ್ಣಃ ಅಕ್ಷ್ಣೋಃ ಅಕ್ಷ್ಣಾಮ್ । ಅಕ್ಷ್ಣಿ, ಅಕ್ಷಣಿ ಅಕ್ಷ್ಣೋಃ ಅಕ್ಷಿಷು ॥

ಲಕ್ಷ್ಮೀ (೩೨) ಈ. ಸ್ತ್ರೀ. ಲಕ್ಷ್ಮೀಃ ಲಕ್ಷ್ಮ್ಯೌ ಲಕ್ಷ್ಮ್ಯಃ । ಉಳಿದದ್ದು ಗೌರೀ ಶಬ್ದದಂತೆ.

ಊರ್ಜಿತಶ್ರೀಃ (೯೩) ಈ. ಪು. ಊರ್ಜಿತಶ್ರೀಃ ಊರ್ಜಿತಶ್ರಿಯೌ ಊರ್ಜಿತಶ್ರಿಯಃ । ಇದರಂತೆ ಸಂಬೋಧನೆ । ಊರ್ಜಿತಶ್ರಿಯಮ್ ೦ಶ್ರಿಯೌ ೦ಶ್ರಿಯಃ । ೦ಶ್ರಿಯಃ ೦ಶ್ರೀಭ್ಯಾಮ್ ೦ಶ್ರೀಭ್ಯಃ । ೦ಶ್ರಿಯೇ ೦ಶ್ರೀಭ್ಯಾಮ್ ೦ಶ್ರೀಭ್ಯಃ । ೦ಶ್ರಿಯಃ ೦ಶ್ರೀಭ್ಯಾಮ್ ೦ಶ್ರೀಭ್ಯಃ । ೦ಶ್ರಿಯಃ ಶ್ರಿಯೋಃ ೦ಶ್ರಿಯಾಮ್ । ೦ಶ್ರಿಯಿ ೦ಶ್ರಿಯೋಃ ೦ಶ್ರೀಷು ॥

ಭೂ (೭೪) ಊ.ಸ್ತ್ರೀ. ಭೂಃ ಭುವೌ ಭುವಃ । ಭೂಃ ಭುವೌ ಭುವಃ । ಭುವಮ್ ಭುವೌ ಭುವಃ । ಭುವಾ ಭೂಭ್ಯಾಮ್ ಭೂಭಿಃ । ಭುವೈ, ಭುವೇ ಭೂಭ್ಯಾಮ್ ಭೂಭ್ಯಃ । ಭುವಾಃ, ಭುವಃ ಭೂಭ್ಯಾಮ್ ಭೂಭ್ಯಃ । ಭುವಾಃ, ಭುವಃ ಭುವೋಃ ಭೂನಾಂ, ಭುವಾಮ್ । ಭುವಾಮ್, ಭುವಿ ಭುವೋಃ ಭೂಷು ॥

ರತ್ನಸೂಃ(೬೫) ಊ.ಸ್ತ್ರೀ. ರತ್ನಸೂಃ ರತ್ನಸ್ವೌ ರತ್ನಸ್ವಃ । ಇದರಂತೆ ಸಂಬೋಧನೆ। ರತ್ನಸ್ವಮ್ ರತ್ನಸ್ವೌ ರತ್ನಸ್ವಃ। ರತ್ನಸ್ವಾ ರತ್ನಸೂಭ್ಯಾಮ್ ರತ್ನಸೂಭಿಃ । ರತ್ನಸ್ವೈ ರತ್ನಸೂಭ್ಯಾಮ್ ರತ್ನಸೂಭ್ಯಃ । ರತ್ನಸ್ವಾಃ ರತ್ನಸೂಭ್ಯಾಮ್ ರತ್ನಸೂಭ್ಯಃ

। ರತ್ನಸ್ವಾಃ ರತ್ನಸ್ವೋಃ ರತ್ನಸೂನಾವ್ । ರತ್ನಸ್ವಾವ್ ರತ್ನಸ್ವೋಃ ರತ್ನಸೂಷು ॥

ಮಘವನ್ (೨೬) ನ.ಪು. ಮಘವಾ ಮಘವಾನೌ ಮಘವಾನಃ । ಮಘವನ್ ಮಘವಾನೌ ಮಘವಾನಃ । ಮಘವಾನಂ ಮಘವಾನೌ ಮಘೋನಃ । ಮಘೋನಾ ಮಘವಭ್ಯಾವ್ ಮಘವಭಿಃ । ಮಘೋನೇ ಮಘವಭ್ಯಾವ್ ಮಘವಭ್ಯಃ । ಮಘೋನಃ ಮಘವಭ್ಯಾವ್ ಮಘವಭ್ಯಃ । ಮಘೋನಃ ಮಘೋನೋಃ ಮಘೋನಾವ್ । ಮಘೋನಿ ಮಘೋನೋಃ ಮಘವಸು ॥

ಇದು ತಕಾರಾನ್ತವಾಗಿಯೂ ಇದೆ.

ಮಘವನ್ ಮಘವನ್ತೌ ಮಘವನ್ತಃ । ಮಘವನ್ ಮಘವನ್ತೌ ಮಘವನ್ತಃ । ಮಘವನ್ತಂ ಮಘವನ್ತೌ ಮಗವತಃ । ಮಘವತಾ ಮಘವದ್ಭ್ಯಾವ್.. ॥

ಇವೆರಡು ಶಬ್ದಗಳು ಬೇರೆಬೇರೆಯೆಂದೂ ಇವುಗಳಲ್ಲಿ ನಕಾರಾನ್ತ ಶಬ್ದಕ್ಕೆ ವೇದದಲ್ಲಿ ಮಾತ್ರ ಪ್ರಯೋಗವೆಂದೂ ಕೆಲವರ ಮತವುಂಟು. ಕವಿಗಳೇನೋ ಎರಡನ್ನೂ ಪ್ರಯೋಗಿಸಿರುತ್ತಾರೆ.

ಅಪ್ (೮೯) ಪ. ಸ್ತ್ರೀ. ನಿತ್ಯಬಹುವಚನ. ಆಪಃ, ಆಪಃ, ಅಪಃ, ಅದ್ಭಿಃ, ಅದ್ಭ್ಯಃ, ಅದ್ಭ್ಯಃ, ಅಪಾವ್, ಅಪ್ಸು ॥

ಧೂರ್ (೩೪,೯೧) ರೇಫಾನ್ತ ಸ್ತ್ರೀ. ಧೂಃ ಧುರೌ ಧುರಃ । ಧೂಃ ಧುರೌ ಧುರಃ । ಧುರವ್ ಧುರೌ ಧುರಃ । ಧುರಾ ಧೂರ್ಭ್ಯಾಂ ಧೂರ್ಭಿಃ । ಇತ್ಯಾದಿ ॥

ದಿವ್ (೨೬) ವ.ಸ್ತ್ರೀ. ದ್ಯೌಃ ದಿವೌ ದಿವಃ । ದ್ಯೌಃ ದಿವೌ ದಿವಃ । ದಿವವ್ ದಿವೌ ದಿವಃ । ದಿವಾ ದ್ಯುಭ್ಯಾವ್ ದ್ಯುಭಿಃ । ದಿವೇ ದ್ಯುಭ್ಯಾವ್ ದ್ಯುಭ್ಯಃ । ದಿವಃ ದ್ಯುಭ್ಯಾವ್ ದ್ಯುಭ್ಯಃ । ದಿವಃ ದಿವೋಃ ದಿವಾವ್ । ದಿವಿ ದಿವೋಃ ದ್ಯುಷು ॥

ನಯುಚಕ್ಷುಸ್ (೫೫) ಸ.ಪು.ನಯುಚಕ್ಷುಃ ನಯುಚಕ್ಷುಷೌ ನಯುಚಕ್ಷುಷಃ । ಹೀಗೆಯೇ ಸಂಬೋಧನ । ನಯುಚಕ್ಷುಷವ್ ಂಚಕ್ಷುಷೌ ಂಚಕ್ಷುಷಃ । ಂಚಕ್ಷುಷಾ ಂಚಕ್ಷುರ್ಭ್ಯಾವ್ ಂಚಕ್ಷುರ್ಭಿಃ ಇತ್ಯಾದಿ॥

ಆಶಿಸ್ (೪೪) ಸ. ಸ್ತ್ರೀ. ಆಶೀಃ ಆಶಿಷೌ ಆಶಿಷಃ । ಹೀಗೆಯೆ ಸಂಬೋಧನೆ । ಆಶಿಷಂ ಆಶಿಷೌ ಆಶಿಷಃ । ಆಶಿಷಾ ಆಶೀರ್ಭ್ಯಾವ್ ಆಶೀರ್ಭಿಃ । ಇತ್ಯಾದಿ ॥

## ೩. ಕ್ರಿಯಾಪದಗಳ ರೂಪಗಳು

### ಲಟ್=ವರ್ತಮಾನಕಾಲ (Present tense)

ಭವತಿ (೬೭) ಭವತಃ ಭವನ್ತಿ । ಭವಸಿ ಭವಥಃ ಭವಥ । ಭವಾಮಿ ಭವಾವಃ ಭವಾಮಃ ॥ ಅರ್ಹತಿ (೧೦,೭೨) ಅವತಿ (೬೫) ತಿಷ್ಠನ್ತಿ (೭೦) ಇವುಗಳೂ ಹೀಗೆಯೆ.

ಅಸ್ತಿ(೨,೪) ಸ್ತಃ ಸನ್ತಿ । ಅಸಿ ಸ್ಥಃ ಸ್ಥ । ಅಸ್ಮಿ ಸ್ವಃ ಸ್ಮಃ ॥

ಜಾನಾತಿ (೭೭) ಜಾನೀತಃ ಜಾನನ್ತಿ । ಜಾನಾಸಿ ಜಾನೀಥಃ ಜಾನೀಥ । ಜಾನಾಮಿ ಜಾನೀವಃ ಜಾನೀಮಃ ॥ ಇದರಂತೆ ಬಧ್ನಾತಿ (೭೯).

ವನ್ದತೇ (೧) ವನ್ದೇತೇ ವನ್ದನ್ತೇ । ವನ್ದಸೇ ವನ್ದೇಥೇ ವನ್ದಧ್ವೇ । ವನ್ದೇ ವನ್ದಾವಹೇ ವನ್ದಾಮಹೇ ॥ ಹೀಗೆಯೆ ಸಂಲಕ್ಷ್ಯತೇ (೧೦) ಪ್ರತ್ಯಾದಿಶ್ಯತೇ (೬೧) ಉಪಭುಜ್ಯತೇ (೬೨) ದೂಯತೇ (೭೦) ಮುಚ್ಯತೇ (೭೨) ದತ್ತೇ (೧೮) ದದಾತೇ ದದತೇ । ದತ್ಸೇ ದದಾಥೇ ದದ್ಧ್ವೇ । ದದೇ ದದ್ವಹೇ ದದ್ಮಹೇ ॥

## ಲಙ್=ಅನದ್ಯತನಭೂತಕಾಲ (Past Indefinite)

ಆಸೀತ್ (೧೧,೨೩,೨೫,೨೮,೨೯,೩೧,೪೬,೭೫) ಆಸ್ತಾಮ್ ಆಸನ್ । ಆಸೀಃ ಆಸ್ತಮ್ ಆಸ್ತ । ಆಸಮ್ ಆಸ್ವ ಆಸ್ಮ ॥

ಆರೋಹಯತ್ (೫೪) ಅರೋಹಯತಾಮ್ ಅರೋಹಯನ್ । ಅರೋಹಯಃ ಅರೋಹಯತಮ್ ಅರೋಹಯತ । ಅರೋಹಯಮ್ ಅರೋಹಯಾವ ಅರೋಹಯಾಮ ॥ ಹೀಗೆಯೆ ಅಚರತ್ (೭೬) ಪ್ರತ್ಯಬೋಧಯತ್ (೭೪) ಅಪಶ್ಯತ್ (೭೪).

## ಲಿಟ್= ಪರೋಕ್ಷಭೂತ (Perfect)

ಬಭೂವ (೮) ಬಭೂವತುಃ ಬಭೂವುಃ। ಬಭೂವಿಥ ಬಭೂವಥುಃ ಬಭೂವ । ಬಭೂವ ಬಭೂವಿವ ಬಭೂವಿಮ ॥ ಹೀಗೆಯೇ 'ಪಪ್ರಚ್ಛ' (೫೮) 'ನನನ್ದ' (೫೭) 'ಶಶಾಸ'(೩೦)

ತತಾರ(೫೪) ತೇರತುಃ ತೇರುಃ । ತೇರಿಥ ತೇರಥುಃ ತೇರ । ತತಾರ, ತತರ ತೇರಿವ ತೇರಿಮ ॥ ಹೀಗೆಯೇ 'ಶಶಾಪ' (೭೭); ಇದಕ್ಕೆ ಶಶಪ್ಥ, ಶೇಪಿಥ ಎಂದು ಎರಡು ರೂಪ.

ಇಯಾಯ (೧೭) ಈಯತುಃ ಈಯುಃ । ಇಯಯಿಥ, ಇಯೇಥ ಈಯಥುಃ ಈಯ । ಇಯಾಯ, ಇಯಯ ಈಯಿವ ಈಯಿಮ ॥

ದುದೋಹ(೨೬) ದುದುಹತುಃ ದುದುಹುಃ । ದುಧೋಹಿಥ ದುದುಹಥುಃ ದುದುಹ । ದುದೋಹ ದುದುಹಿವ ದುದುಹಿಮ ॥

ಜುಗೋಪ(೨೧) ಜುಗುಪತುಃ ಜುಗುಪುಃ । ಜುಗೋಪಿಥ, ಜುಗೋಪ್ಥ ಜುಗುಪಥುಃ ಜುಗುಪ । ಜುಗೋಪ ಜುಗುಪಿವ, ಜುಗುಪ್ವ ಜುಗುಪಿಮ, ಜುಗುಪ್ಮ ॥ ಈ ಧಾತುವಿಗೆ 'ಗೋಪಾಯಾಂ ಚಕಾರ' 'ಗೋಪಾಯಾಂ ಬಭೂವ' 'ಗೋಪಯಾಮಾಸ' ಎಂದು ಮುಂತಾಗಿ ಅನುಪ್ರಯೋಗದ ರೂಪಗಳೂ ಉಂಟು.

ಚಕಾರ(೫೫) ಚಕ್ರತುಃ ಚಕ್ರುಃ । ಚಕರ್ಥ ಚಕ್ರಥುಃ ಚಕ್ರ । ಚಕಾರ, ಚಕರ ಚಕೃವ ಚಕೃಮ ॥

ಸಸರ್ಜ(೯೩) ಸಸೃಜತುಃ ಸಸೃಜುಃ । ಸಸರ್ಜಿಥ, ಸಸ್ರಷ್ಟ ಸಸೃಜಥುಃ ಸಸೃಜ । ಸಸರ್ಜ ಸಸೃಜಿವ ಸಸೃಜಿಮ ॥

ಜಗ್ರಾಹ (೫೭,೯೨) ಜಗೃಹತುಃ ಜಗೃಹುಃ । ಜಗ್ರಹಿಥ ಜಗೃಹಥುಃ ಜಗೃಹ । ಜಗ್ರಾಹ, ಜಗ್ರಹ ಜಗೃಹಿವ ಜಗೃಹಿಮ ॥

ಜಗಾಮ(೩೫) ಜಗ್ಮತುಃ ಜಗ್ಮುಃ । ಜಗಮಿಥ,ಜಗನ್ಥ ಜಗ್ಮಥುಃ ಜಗ್ಮ । ಜಗಾಮ, ಜಗಮ ಜಗ್ಮಿವ ಜಗ್ಮಿಮ ॥

ನಿನಾಯ (೩೩) ನಿನ್ಯತುಃ ನಿನ್ಯುಃ । ನಿನಿಯಿಥ, ನಿನೇಥ ನಿನ್ಯಥುಃ ನಿನ್ಯ । ನಿನಾಯ, ನಿನಯ ನಿನ್ಯಿವ ನಿನ್ಯಿಮ ॥

ಕಲ್ಪಯಾಮಾಸ(೯೪) ೦ಆಸತುಃ ೦ಆಸುಃ । ಇತ್ಯಾದಿ ॥

ದಧೌ(೨೬) ದಧತುಃ ದಧುಃ । ದಧಿಥ, ದಧಾಥ ದಧಥುಃ ದಧ । ದಧೌ ದಧಿವ ದಧಿಮ ॥ ಹೀಗೆಯೇ 'ಯಯೌ'(೨೭) ತಸ್ಥೌ (೭೩)

ಭೇಜೇ (೨೧)ಭೇಜಾತೇ ಭೇಜಿರೇ । ಭೇಜಿಷೇ ಭೇಜಾಥೇ ಭೇಜಿಧ್ವೇ । ಭೇಜೇ ಭೇಜಿವಹೇ ಭೇಜಿಮಹೇ ॥ ಹೀಗೆ 'ಮೇನೇ' (೩೨).

ದದೇ (೨೧,೫೯) ಬುಬುಧೇ (೪೭) ಆವವೃತೇ (೮೨) ನಿಚಿಕ್ಷಿಪೇ (೩೪).

## ಲುಙ್=ಸಾಮಾನ್ಯಭೂತ (Past Aorist)

ಅಭೂತ್(೨೧,೩೭) ಅಭೂತಾಮ್ ಅಭೂವನ್ । ಅಭೂಃ ಅಭೂತಮ್ ಅಭೂತ । ಅಭೂವಮ್ ಅಭೂವ ಅಭೂಮ ॥

ಅಗ್ರಹೀತ್(೧೮) ಅಗ್ರಹೀಷ್ಟಾಮ್ ಅಗ್ರಹೀಷುಃ । ಅಗ್ರಹೀಃ ಅಗ್ರಹಿಷ್ಟಮ್ ಅಗ್ರಹೀಷ್ಟ । ಅಗ್ರಹೀಷಮ್ ಅಗ್ರಹೀಷ್ವ ಅಗ್ರಹೀಷ್ಮ ॥

ಅಬ್ರವೀತ್(೮೬) ಅಬ್ರೂತಾಮ್ ಅಬ್ರುವನ್ । ಅಬ್ರವೀಃ ಅಬ್ರೂತಮ್ ಅಬ್ರೂತ । ಅಬ್ರವಮ್ ಅಬ್ರೂವ ಅಬ್ರೂಮ ॥

## ಲೃಟ್=ಭವಿಷ್ಯತ್ಕಾಲ (Second future)

ಭವಿಷ್ಯತಿ(೭೭) ಭವಿಷ್ಯತಃ ಭವಿಷ್ಯನ್ತಿ । ಭವಿಷ್ಯಸಿ ಭವಿಷ್ಯಥಃ ಭವಿಷ್ಯಥ । ಭವಿಷ್ಯಾಮಿ ಭವಿಷ್ಯಾವಃ ಭವಿಷ್ಯಾಮಃ ॥ ಹೀಗೆಯೇ ಗಮಿಷ್ಯಾಮಿ(೩).

ವಕ್ಷ್ಯತೇ(೯) ವಕ್ಷ್ಯೇತೇ ವಕ್ಷ್ಯನ್ತೇ । ವಕ್ಷ್ಯಸೇ ವಕ್ಷ್ಯೇಥೇ-ವಕ್ಷ್ಯಧ್ವೇ । ವಕ್ಷ್ಯೇ ವಕ್ಷ್ಯಾವಹೇ ವಕ್ಷ್ಯಾಮಹೇ ॥

### ಲೋಟ್=ಆಜ್ಞಾರ್ಥ(Imperative)

ಭವತು(೯೧) ಭವತಾತ್, ಭವತಾವ್ ಭವನ್ತು । ಭವ,ಭವತಾತ್ ಭವತಮ್ ಭವತ । ಭವಾನಿ ಭವಾವ ಭವಾಮ ॥ ಹೀಗೇ ವಿಶ್ರಾಮಯ (೫೪) ಆರಾಧಯ (೮೧) ವಿಗಣಯ (೮೭) ನಿಷೀದ (೮೯).

ಏತು(೭೧,೯೦) ಇತಾವ್ ಯನ್ತು । ಇಹಿ ಇತಮ್ ಇತ । ಅಯಾನಿ ಅಯಾವ ಅಯಾಮ ॥

ಅಸ್ತು(೯೧) ಸ್ತಾವ್ ಸನ್ತು । ಏಧಿ ಸ್ತಮ್ ಸ್ತ । ಅಸಾನಿ ಅಸಾವ ಅಸಾಮ ॥

ವೇತ್ತು(೭೯) ವಿತ್ತಾವು ವಿದನ್ತು । ವಿದ್ಧಿ ವಿತ್ತಮ್ ವಿತ್ತ । ವೇದಾನಿ ವೇದಾವ ವೇದಾಮ ॥ ಈ ಧಾತುವಿಗೆ ವಿದಾಂ ಕರೋತು ಂಕುರುತಾವ್ ಂಕುರ್ವನ್ತು । ಂಕುರು ಂಕುರುತಮ್ ಂಕುರುತ । ಂಕರವಾಣಿ ಂಕರವಾವ ಂಕರವಾಮ ॥ ಎಂಬ ರೂಪಗಳೂ ಉಂಟು.

### ವಿಧಿಲಿಙ್-(Potential)

ಸ್ಯಾತ್(೬೪) ಸ್ಯಾತಾವ್ ಸ್ಯುಃ । ಸ್ಯಾಃ ಸ್ಯಾತಮ್ ಸ್ಯಾತ । ಸ್ಯಾಮ್ ಸ್ಯಾವ ಸ್ಯಾಮ ॥

ಚರೇತ್(೮೯) ಚರೇತಾವ್ ಚರೇಯುಃ । ಚರೇಃ ಚರೇತಮ್ ಚರೇತ । ಚರೇಯಮ್ ಚರೇವ ಚರೇಮ ॥ ಹೀಗೆಯೇ ಪಿಬೇತ್ (೮೯) ವ್ರಜೇತ್ (೯೦).

ಪ್ರತಿಷ್ಠೇತ(೮೯) ಪ್ರತಿಷ್ಠೇಯಾತಾವ್ ಪ್ರತಿಷ್ಠೇರನ್ । ಪ್ರತಿಷ್ಠೇಥಾಃ ಪ್ರತಿಷ್ಠೇಯಾಥಾವ್ ಪ್ರತಿಷ್ಠೇಧ್ವಮ್ । ಪ್ರತಿಷ್ಠೇಯ ಪ್ರತಿಷ್ಠೇವಹಿ ಪ್ರತಿಷ್ಠೇಮಹಿ ॥

### ಆಶೀರ್ಲಿಙ್=(Benedictive)

ಸ್ಥೇಯಾತ್ (೯೧) ಸ್ಥೇಯಾಸ್ತಾವ್ ಸ್ಥೇಯಾಸುಃ । ಸ್ಥೇಯಾಃ ಸ್ಥೇಯಾಸ್ತಮ್ ಸ್ಥೇಯಾಸ್ತ । ಸ್ಥೇಯಾಸಮ್ ಸ್ಥೇಯಾಸ್ವ ಸ್ಥೇಯಾಸ್ಮ ॥

### ೪ ಕ್ರಿಯಾಪದಗಳ ಪ್ರಯೋಗಗಳು

ಸಂಸ್ಕೃತದಲ್ಲಿ ಸಕರ್ಮಕ(transitive) ಅಕರ್ಮಕ(intransitive) - ಈ ಎರಡು ಬಗೆಯ ಧಾತುಗಳಿಗೂ ಕರ್ತರಿಪ್ರಯೋಗ (active voice) ವುಂಟು. ಸಕರ್ಮಕಧಾತುಗಳಿಗೆ ಕರ್ಮಣಿಪ್ರಯೋಗವೂ (passive voice) ಅಕರ್ಮಕಧಾತುಗಳಿಗೆ ಭಾವೇಪ್ರಯೋಗವೂ (impersonal voice) ಇವೆ. ಕರ್ಮಣಿಪ್ರಯೋಗವೂ ಭಾವೇಪ್ರಯೋಗವೂ ಒಂದೇ ರೂಪದಲ್ಲಿರುವವಾದರೂ

ಅರ್ಥದಲ್ಲಿ ಭೇದವುಂಟು. ಇವೆರಡೂ ಆತ್ಮನೇಪದವು; ಭಾವೇಪ್ರಯೋಗದಲ್ಲಿ ಪ್ರಥಮಪುರುಷ ಏಕವಚನವು ಮಾತ್ರ ಇರುತ್ತದೆ.

ಉದಾ:- ಕರ್ತರಿಪ್ರಯೋಗ-ಅಹಂ ಗಚ್ಛಾಮಿ. ಅಹಂ ಪಾರ್ವತೀಪರಮೇಶ್ವರೌ ವನ್ದೇ. ಕರ್ಮಣಿಪ್ರಯೋಗ-ಮಯಾ ಪಾರ್ವತೀಪರಮೇಶ್ವರೌ ವನ್ದ್ಯೇತೇ. ಭಾವೇಪ್ರಯೋಗ-ಮಯಾ ಗಮ್ಯತೇ. (ನನ್ನಿಂದ ಹೋಗೋಣವಾಗುತ್ತದೆ.)

ಒಂದನೆಯ ಸರ್ಗದಲ್ಲಿ ಉಪಯೋಗಿಸಿರುವ ಕ್ರಿಯಾಪದಗಳ ಕರ್ಮಣಿ (ಭಾವೇ) ಪ್ರಯೋಗರೂಪಗಳನ್ನು ಶ್ಲೋಕಸಂಖ್ಯೆಯೊಡನೆ ಇಲ್ಲಿ ಕೊಡುತ್ತೇವೆ. ಕರ್ಮವು ಯಾವ ಪುರುಷವಚನಗಳಲ್ಲಿರುವದೋ ಕ್ರಿಯಾಪದವನ್ನೂ ಆಯಾ ಪುರುಷ ವಚನಗಳಲ್ಲಿಡಬೇಕು, ಕರ್ತರಿಪ್ರಯೋಗದ ಲಕಾರವನ್ನೆ ಕರ್ಮಣಿಪ್ರಯೋಗದಲ್ಲಿ ಉಪಯೋಗಿಸಬೇಕಾದ್ದರಿಂದ ಆಯಾ ರೂಪವನ್ನೇ ಕೊಟ್ಟಿದೆ. ವಾಕ್ಯದಲ್ಲಿ ಇವುಗಳನ್ನುಪಯೋಗಿಸುವಾಗ ಕರ್ತೃವನ್ನೂ ಕರ್ತೃವಿಶೇಷಣವನ್ನೂ ತೃತೀಯೆಯಲ್ಲಿಯೂ, ಕರ್ಮವನ್ನೂ ಕರ್ಮವಿಶೇಷಣವನ್ನೂ ಪ್ರಥಮಾವಿಭಕ್ತಿಯಲ್ಲಿಯೂ ಇಡಬೇಕಾಗುವದು.

ಉದಾ:- ೯೩ನೆಯ ಶ್ಲೋಕದ ಕರ್ಮಣಿಪ್ರಯೋಗ-"ಅಥ ಪ್ರದೋಷೇ ದೋಷಜ್ಞೇನ ಸೂನೃತವಾಚಾ ಸ್ರಷ್ಟುಃ ಸೂನುನಾ, ಊರ್ಜಿತಶ್ರೀಃ ವಿಶಾಂಪತಿಃ ಸಂವೇಶಾಯ ವಿಸಸೃಜೇ."

## ಕರ್ಮಣಿಪ್ರಯೋಗದ ರೂಪಗಳು

(೯) ವಕ್ಷ್ಯತೇ (೧೬) ಬಭೂವೇ [ಭಾ] (೧೮) ಅಗ್ರಾಹಿ (೨೧) ಜುಗುಪೇ, ಭೇಜೇ, ಆದದೇ, ಅನ್ವಭಾವಿ, (೨೬) ದುದುಹೇ, ದಧೇ (೨೯) ವಿದಧೇ (೩೦) ಶಶಾಸೇ (೩೦) ನಿನ್ಯೇ (೩೫) ಜಗ್ಮೇ (೪೭) ಬುಬುಧೇ (೪೮) ಪ್ರಾಪಿ (೫೪) ಅವಾರೋಹ್ಯತ (೫೫) ಚಕ್ರೇ, ದದೃಶೇ (೫೭)ಜಗೃಹಿರೇ (೫೭)ನನನ್ದಾತೇ (೫೮)ಪಪ್ರಚ್ಛೇ, (೭೪) ಅದೃಶ್ಯತ, ಪ್ರತ್ಯಬೋಧ್ಯತ (೭೭) ಅವಜ್ಞಾಯೇ, ಶೇಪಿಷೇ (೭೯) ಪ್ರತಿಬಧ್ಯತೇ (೮೦) ಅಧಿಷ್ಠೀಯತ (೮೭) ವಿಗಣ್ಯತಾಮ್ (೮೮) ಪ್ರಸ್ಥೀಯೇತ, ಆಚರ್ಯತಾಮ್, ನಿಷದ್ಯತಾಮ್ [ಭಾ], ಪ್ರಿಯೇರನ್ (೯೧) ಅನ್ವೀಯತಾಮ್, ಪ್ರತ್ಯುದ್ವ್ರಜ್ಯೇತ, (೯೩) ಜಗೃಹೇ, ವಿಸಸೃಜೇ (೯೪) ಕಲ್ಪಯಾಮಾಸೇ ಅಥವಾ ಚಕಲ್ಪೇ (೯೫) ನಿನ್ಯೇ.

## ಕರ್ಮಣಿಪ್ರಯೋಗಕ್ಕೆ ಕರ್ತರಿಪ್ರಯೋಗಗಳು

(೬೧) ತವ ಮನ್ತ್ರಕೃತೋ ಮನ್ತ್ರಾಃ ದೂರಾತ್ ಪ್ರಶಮಿತಾರಯಃ, ದೃಷ್ಟಲಕ್ಷ್ಯಭಿದೋ ಮೇ ಶರಾನ್ ಪ್ರತ್ಯಾದಿಶನ್ತೀವ.

(೫೭) ಪೂರ್ವೇ ಮಯಾವರ್ಜಿತಂ ಪಯಃ ಸ್ವನಿಶ್ವಾಸೈಃ ಕವೋಷ್ಣಂ ಉಪಭುಞ್ಜತೇ.

## ೫ ಛನ್ದೋವಿಚಾರ

೧. ಪ್ರತಿಯೊಂದು ಪದ್ಯದಲ್ಲಿಯೂ (stanza) ನಾಲ್ಕು ಪಾದಗಳು (lines) ಇರುವವು. ಒಂದೊಂದು ಪಾದದಲ್ಲಿ ಇಷ್ಟಿಷ್ಟು ಅಕ್ಷರಗಳು (syllables) ಇರಬೇಕೆಂದೂ ಮಾತ್ರೆಗಳು (syllabic instants) ಇರಬೇಕೆಂದೂ ನಿಯಮವಿರುವದು.

೨. ಮಾತ್ರೆಯೆಂದರೆ ಒಂದು ಹ್ರಸ್ವಸ್ವರವನ್ನುಚ್ಚರಿಸುವಷ್ಟು ಕಾಲವು. ಹ್ರಸ್ವಸ್ವರಕ್ಕೆ ಅಥವಾ ಹ್ರಸ್ವಸ್ವರದಿಂದ ಕೂಡಿರುವ ವ್ಯಂಜನಕ್ಕೆ ಲಘುವೆಂದೂ ದೀರ್ಘಸ್ವರಕ್ಕೆ ಅಥವಾ ದೀರ್ಘಸ್ವರದಿಂದ ಕೂಡಿದ ವ್ಯಂಜನಕ್ಕೆ ಗುರುವೆಂದೂ ಕರೆಯುತ್ತಾರೆ. ಒತ್ತಕ್ಷರದ ಹಿಂದಿನ ಅಕ್ಷರ, ಅನುಸ್ವಾರವಿಸರ್ಗಗಳಿಂದ ಕೂಡಿದ ಅಕ್ಷರ-ಇವು ಗುರು. ಪದ್ಯದ ಕೊನೆಯ ಅಕ್ಷರವು ಲಘುವಾಗಿದ್ದರೂ ಕೆಲವು ಕಡೆಯಲ್ಲಿ ಗುರುವೆಂದು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ.

೩. ಪದ್ಯಗಳಲ್ಲಿ ಜಾತಿಯೆಂದೂ ವೃತ್ತವೆಂದು ಎರಡು ಬಗೆ. ಜಾತಿ ಎಂದರೆ ಒಂದೊಂದು ಪಾದಕ್ಕೆ ಇಂತಿಷ್ಟು ಮಾತ್ರೆಗಳು ಇರಬೇಕೆಂಬ ನಿಯಮವಿರುವ ಪದ್ಯ; ವೃತ್ತವೆಂದರೆ ಇಷ್ಟಿಷ್ಟು ಅಕ್ಷರಗಳು ಇಂಥಿಂಥ ಕಡೆಯಲ್ಲಿ ಹೀಗೆ ಹೀಗೆ ಬಂದಿರಬೇಕೆಂಬ ನಿಯಮವುಳ್ಳ ಪದ್ಯ.

೪. ರಘುವಂಶದ ೧ನೆಯ ಸರ್ಗದಲ್ಲಿರುವ ಪದ್ಯಗಳು 'ಅನುಷ್ಟುಭ್' ಎಂಬ ಛಂದಸ್ಸಿಗೆ ಸೇರಿದವು. ಈ ಛಂದಸ್ಸಿನ ಪದ್ಯಗಳಲ್ಲಿಯೂ ಅನೇಕ ವಿಧಗಳಿವೆ. ಬಹಳ ರೂಢಿಯಲ್ಲಿರುವದರಲ್ಲಿ ಒಂದೊಂದು ಪಾದಕ್ಕೆ ಎಂಟು ಅಕ್ಷರಗಳಿರುವವು, ಐದನೆಯದು ಯಾವಾಗಲೂ ಲಘುವಾಗಿರುವದು.

ಉದಾ:- ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವನ್ದೇ ಪಾರ್ವತೀಪರಮೇಶ್ವರೌ ॥೧॥

ಇಲ್ಲಿ ಒಂದನೆಯ ಪಾದದ 'ವ', ಎರಡನೆಯ ಪಾದದ 'ತಿ', ಮೂರನೆಯ ಪಾದದ 'ತ', ನಾಲ್ಕನೆಯ ಪಾದದ 'ರ'- ಈ ಐದನೆಯ ಅಕ್ಷರಗಳು ಲಘುವಾಗಿವೆ.

೫. ರಘುವಂಶದ ಕೊನೆಯಲ್ಲಿರುವದು 'ಪ್ರಹರ್ಷಿಣೀ' ಎಂಬ ವೃತ್ತ. ಇದು 'ಅತಿಜಗತೀ' ಎಂಬ ಛಂದಸ್ಸಿಗೆ ಸೇರಿದ ಹದಿಮೂರಕ್ಷರದ ವೃತ್ತವು. ಇದರ ಲಕ್ಷಣವನ್ನು ತಿಳಿಯುವದಕ್ಕೆ 'ಗಣ'ಗಳ ಜ್ಞಾನವು ಬೇಕಾಗುವದು.

೬. ಒಂದೊಂದು ಪಾದದಲ್ಲಿರುವ ಅಕ್ಷರಗಳನ್ನು ಮೂರು ಮೂರು ಅಕ್ಷರದ

'ಗಣ'ಗಳೆಂಬ ಗುಂಪುಗಳಾಗಿ ವಿಂಗಡಿಸಿರುತ್ತಾರೆ. ಇವುಗಳನ್ನು ತಿಳಿಯುವದಕ್ಕೆ ಈ ಕೆಳಗಿನ ಅಕ್ಷರಸೂತ್ರವನ್ನು ನೆನಪಿಡಬೇಕು:

∪ಯ –ಮಾ –ತಾ –ರಾ∪ಜ –ಭಾ∪ನ∪ಸ∪ಲ–ಗಮ್

ಮೇಲಿನ ಸೂತ್ರದಲ್ಲಿ ∪ ಇದು ಲಘುವಿನ ಗುರುತು, – ಇದು ಗುರುವಿನ ಗುರುತು. ಇಲ್ಲಿ ಕ್ರಮವಾಗಿ ಮೂರು ಮೂರು ಅಕ್ಷರಗಳನ್ನು ಏಣಿಸಿಕೊಂಡರೆ ಆಯಾ ಗಣದ ಹೆಸರೂ ಅದರಲ್ಲಿರಬೇಕಾದ ಗುರುಲಘುಗಳೂ ಗೊತ್ತಾಗುವವು. ಹೇಗೆಂದರೆ.

(೧) ಯಗಣ ಯಮಾತಾ ∪ – –
(೨) ಮಗಣ ಮಾತಾರಾ – – –
(೩) ತಗಣ ತಾರಾಜ – – ∪
(೪) ರಗಣ ರಾಜಭಾ – ∪ –
(೫) ಜಗಣ ಜಭಾನ ∪ – ∪
(೬) ಭಗಣ ಭಾನಸ – ∪ ∪
(೭) ನಗಣ ನಸಲ ∪ ∪ ∪
(೮) ಸಗಣ ಸಲಗಮ್ ∪ ∪ –

೭. ಪ್ರಹರ್ಷಿಣೀವೃತ್ತದ ಲಕ್ಷಣ:-ಮ್ನೌಜ್ರೌಗಸ್ತ್ರಿದಶಯತಿಃ ಪ್ರಹರ್ಷಣೀಯಮ್ । ಎಂದರೆ, ಮ ನ ಜ ರ ಗಣಗಳೂ ಒಂದು ಗುರುವೂ ಇರಬೇಕು, ೩ನೆಯ ಇದರ ಮುಂದೆ ೧೦ನೆಯ ಅಕ್ಷರಗಳು ಯತಿ(pause) ಎಂದರೆ ನಿಲ್ಲುವ ಸ್ಥಾನವಾಗಿರಬೇಕು.

ಉದಾ:-ನಿರ್ದಿಷ್ಟಾಂ । ಕುಲಪ । ತಿನಾ ಸ । ಪರ್ಣಶಾ । ಲಾಮ್
ಮಗಣ । ನಗಣ । ಜಗಣ । ರಗಣ । ಗುರು

ಮೂರನೆಯ ಅಕ್ಷರವಾದ 'ಷ್ಟಾಂ' ಎಂಬಲ್ಲಿಯೂ ಯತಿ ಇದೆ; ಇದರ ಮುಂದೆ ಹತ್ತನೆಯ ಅಕ್ಷರವಾದ, ಎಂದರೆ ಮೊದಲಿನಿಂದ ಹದಿಮೂರನೆಯ ಅಕ್ಷರವಾದ 'ಲಾಂ' ಎಂಬಲ್ಲಿಯೂ ಯತಿ ಇದೆ.

### ೬ ವಿಗ್ರಹವಾಕ್ಯಗಳ ವಿಚಾರ.

ಯಾವದಾದರೊಂದು ಪದವು ಇನ್ನೂ ಬಿಡಿಸಿ ವಿವರಣೆಯನ್ನು ಕೊಡುವದಕ್ಕೆ ಬರುವಂತಿದ್ದರೆ ಅದನ್ನು ವೃತ್ತಿಯೆಂದು ಕರೆಯುತ್ತಾರೆ. ವೃತ್ತಿಯನ್ನು ಅರ್ಥವು ತೋರುವಂತೆ ಬಿಡಿಸಿ ಹೇಳುವ ವಾಕ್ಯಕ್ಕೆ ವಿಗ್ರಹವೆಂದು ಹೆಸರು. ಸಮಾಸ, ಏಕಶೇಷ, ತದ್ಧಿತ, ಕೃತ್ತು, ಸನಾದಿಧಾತು ರೂಪಗಳು- ಈ ಐದೂ ವೃತ್ತಿಗಳು.

ಈ ಪುಸ್ತಕದಲ್ಲಿ ಇವುಗಳ ವಿಗ್ರಹಗಳನ್ನು ತೋರಿಸಿ ಅಲ್ಲಲ್ಲಿ ಸಂಕೇತಾಕ್ಷರಗಳನ್ನು ಕೊಟ್ಟಿದೆ. ಈ ಸಂಕೇತಗಳನ್ನು ಇಲ್ಲಿ ವಿವರಿಸುತ್ತೇವೆ.

| ಸಂಕೇತಗಳು | ವಿವರ | ಸಂಕೇತಗಳು | ವಿವರ |
|---|---|---|---|
| ಸಾ.ಸ. | ಸಾಮಾನ್ಯಸಮಾಸ | ಚ.ತ. | ಚತುರ್ಥೀತತ್ಪುರುಷ |
| ಅ. ಸ. | ಅವ್ಯಯೀಭಾವಸಮಾಸ | ಪ.ತ. | ಪಂಚಮೀತತ್ಪುರುಷ |
| ಪ್ರ.ತ. | ಪ್ರಥಮಾತತ್ಪುರುಷ | ಷ.ತ. | ಷಷ್ಠೀತತ್ಪುರುಷ |
| ದ್ವಿ.ತ. | ದ್ವಿತೀಯಾತತ್ಪುರುಷ | ಸ.ತ | ಸಪ್ತಮೀತತ್ಪುರುಷ |
| ತೃ.ತ. | ತೃತೀಯಾತತ್ಪುರುಷ | ನ.ತ | ನಞ್ತತ್ಪುರುಷ |

(ಪ್ರ.ತ. ಎಂದುದಕ್ಕೆ ಬದಲು ಪ್ರ.ಬ. ಎಂದಿದ್ದರೆ ಪ್ರಥಮಬಹುವ್ರೀಹಿ; ಹೀಗೆಯೇ ದ್ವಿ. ಬ. ಮುಂತಾದವುಗಳನ್ನೂ ತಿಳಿಯಬೇಕು.)

| ಸಂಕೇತಗಳು | ವಿವರ | ಸಂಕೇತಗಳು | ವಿವರ |
|---|---|---|---|
| ಪ್ರಾ.ಸ. | ಪ್ರಾದಿಸಮಾಸ | ವಿ.ಪೂ.ಕ. | ವಿಶೇಷಣಪೂರ್ವಪದ |
| ಮ.ವ್ಯ. | ಮಯೂರವ್ಯಂಸಕಾದಿ ಸ. | | ಕರ್ಮಧಾರಯ |
| ವಿ.ಉ.ಕ. | ವಿಶೇಷಣೋಭಯಪದ ಕರ್ಮ | ಉ.ಬ. | ಉಪಮಾನಬಹುವ್ರೀಹಿ |
| ಉ.ಪೂ.ಕ. | ಉಪಮಾನಪೂರ್ವಪದ ಕರ್ಮ | ಸಹ.ಬ. | ಸಹಪೂರ್ವಪದಬಹುವ್ರೀಹಿ |
| ಉ.ಉ.ಕ. | ಉಪಮಾನೋತ್ತರಪದ ಕರ್ಮ | | ಸಮಸಂಬಂಧಬಹುವ್ರೀಹಿ |
| ಸಂ.ಪೂ.ಕ | ಸಂಭಾವನಾಪೂರ್ವಪದ ಕರ್ಮ | ಪ್ರಾ.ಬ. | ಪ್ರಾದಿಬಹುವ್ರೀಹಿ |
| ಅ.ಪೂ.ಕ. | ಅವಧಾರಣಾಪೂರ್ವಪದ ಕರ್ಮ | ದ್ವ. | ದ್ವಂದ್ವ |
| ಭಿ.ಪೂ.ಕ. | ಭಿನ್ನಪೂರ್ವಪದ ಕರ್ಮ | ವೃತ್ತಿ ಏ.ಶೇ. | ಏಕಶೇಷ-ವೃತ್ತಿ |
| ಲು.ಮ.ಕ. | ಲುಪ್ತಮಧ್ಯಮಪದ ಕರ್ಮ | ಕೃ.ವೃ. | ಕೃದಂತವೃತ್ತಿ[೧] |
| ಕ್ರಿ.ವಿ.ಬ. | ಕ್ರಿಯಾವಿಶೇಷಣಬಹುವ್ರೀಹಿ | ತ.ವೃ. | ತದ್ಧಿತವೃತ್ತಿ |

## ೭ ನಾನಾರ್ಥಗಳು

ಒಂದನೆಯ ಸರ್ಗದಲ್ಲಿ ಯಾವ ಅರ್ಥದಲ್ಲಿ ಪ್ರಯೋಗವಾಗಿದೆಯೋ ಅದರ ಮುಂದೆ ಶ್ಲೋಕಸಂಖ್ಯೆಯನ್ನು ಹಾಕಿದೆ.

ಅನ್ವಯ:- ಸಂಬಂಧ, ವಂಶ (೬,೧೨)

ಆತ್ಮನ್:- ದೇಹ (೧೪), ಮನಸ್ಸು, ಜೀವ, ಸ್ವಭಾವ, ಪರಮಾತ್ಮ.

---

[೧] ತತ್ಪುರುಷವಲ್ಲಿ ಉತ್ತರಪದವು ಧಾರುವಿನಿಂದ ಬಂದ ಕೃದಂತನಾಮವಾಗಿದ್ದು ಪೂರ್ವಪದದ ನಿಮಿತ್ತದಿಂದ ಕೃತ್ಪ್ರತ್ಯಯವನ್ನು ಹೊಂದಿದ್ದರೆ ಉಪಪದಸಮಾಸವೆನ್ನುತ್ತಾರೆ. ಇದನ್ನು ಕೃ.ವೃ.ಎಂದೇ ತೋರಿಸಿದೆ.

ಋತು:- ವಸಂತ ಮುಂತಾದ ಆರು ಕಾಲ (season), ಮುಟ್ಟಾಗುವಿಕೆ (the menses).

ಕಲ್ಪ:- ಕಲ್ಪವೆಂಬ ವೇದಾಂಗ (body of rules in ritual), ಬ್ರಹ್ಮದಿನದಷ್ಟು ಕಾಲ (cosmic period), ಕರ್ಮದಲ್ಲಿ ಅನುಸರಿಸಬೇಕಾದ ಕ್ರಮ (method of observing vows) (೯೫) ಮನಸ್ಸಿನಲ್ಲಿ ಮಾಡಿಕೊಂಡ ಕೋರಿಕೆ (wish) (೭೫).

ಗೃಹ:- ಮನೆ, ಹೆಂಡತಿ (೭)

ಘೋಷ:- ಗದ್ದಲ (noise, din), ಡಂಗುರಸಾರುವದು (proclamation) ಗೊಲ್ಲರ ಹಟ್ಟಿ(herdsman's station) (೪೫).

ಛನ್ದಸ್:- ಪದ್ಯ(metre) ವೇದ(೧೧)

ದಾಕ್ಷಿಣ್ಯ:- ಸರಳವಾದ ನಡತೆ (sincerity) ಔದಾರ್ಯ(libera lity), ಮತ್ತೊಬ್ಬರ ಮನಸ್ಸಿಗೆ ಅನುಕೂಲವಾಗಿ ನಡೆಯುವದು(humility) (೩೧).

ನಿರ್ವಾಣ:- ಸುಖ, ಮೋಕ್ಷ, ನಾಶ, ಆನೆಯ ಸ್ನಾನ(೭೧).

ಪರಿಗ್ರಹ:-ಹೆಂಡತಿ (೯೨), ಪರಿವಾರ (dependents retinue), ತೆಗೆದುಕೊಳ್ಳುವದು (acceptance), ಮೂಲಧನ(amount,sum), ಆಣೆಮಾಡುವದು (oath).

ಮನ್ತ್ರ:- ವೇದಮಂತ್ರ (hymn) ಜಪಿಸುವ ಮಂತ್ರ (incantation), ಮಂತ್ರಾಲೋಚನೆ (counsel) (೨೦).

ರಸ:- ವಾಸನೆ (flavour), ರಸ (sap), ರುಚಿ(taste), ವಿಷ (poisonous drought), ಶೃಂಗಾರಾದಿಗಳು(sentiment), ದ್ರವ(liquid), ವೀರ್ಯ(semen), ದೇಹಧಾತುಗಳು(elementary constituents of the body), ನೀರು(೧೮), ಪಾದರಸ (quicksilver).

ವಿಧಿ:-ಕರ್ಮವನ್ನು ಮಾಡುವದು (೫೬), ಅದೃಷ್ಟ, ಬ್ರಹ್ಮ.

ವಿಶ್:-ವೈಶ್ಯ, ಮನುಷ್ಯ(೯೩).

ಸಾರ:-ಗಟ್ಟಿಯಾದ ಭಾಗ(pith, best part), ಬಲ(೧೪).

## ೮ ಅಲಂಕಾರಗಳು (Figures of Speech)

೧. ಕಾಳಿದಾಸನ ಕವಿತೆಯಲ್ಲಿ ಉಪಮಾಲಂಕಾರವು ಹೇರಳವಾಗಿರುವದು. ಒಂದನ್ನು ಒಂದಕ್ಕೆ ಹೋಲಿಸಿರುವದು ಚೆನ್ನಾಗಿ ಎದ್ದುಕಾಣುವಂತೆ ವರ್ಣಿಸಿರುವ ಅಲಂಕಾರವು ಉಪಮಾಲಂಕಾರವು (simile). ಇಲ್ಲಿ ಯಾವದನ್ನು ಹೋಲಿ

ಸುತ್ತಾರೋ ಅದು ಉಪಮೇಯ; ಯಾವದಕ್ಕೆ ಹೋಲಿಸುತ್ತಾರೋ ಅದು ಉಪಮಾನ; ಯಾವದನ್ನು ಎರಡಕ್ಕೂ ಸಮಾನವೆಂದು ಇಟ್ಟುಕೊಳ್ಳುತ್ತಾರೋ ಅದು ಸಮಾನಧರ್ಮ; ಹೋಲಿಕೆಯನ್ನು ಹೇಳುವ ಮಾತು ಉಪಮಾವಾಚಕ.

ಉದಾ:- ವಾಗರ್ಥಾವಿವ ಸಂಪೃಕ್ತೌ ಪಾರ್ವತೀಪರಮೇಶ್ವರೌ ವನ್ದೇ(೧) ಇಲ್ಲಿ ಪಾರ್ವತೀಪರಮೇಶ್ವರರನ್ನು (ಉಪಮೇಯ), ಶಬ್ದಾರ್ಥಗಳಿಗೆ(ಉಪಮಾನ) ಹೋಲಿಸಿದೆ; ಸೇರಿರೋಣವೆಂಬುದು ಸಮಾನಧರ್ಮ, 'ಇವ' ಎಂಬುದು ಉಪಮಾ ವಾಚಕ.

೪, ೧೧, ೧೨, ೧೪, ೧೬, ೨೦, ೨೮, ೩೧, ೩೬, ೩೯, ೪೬, ೫೦, ೫೬, ೭೦, ೭೩, ೮೩-ಈ ಶ್ಲೋಕಗಳಲ್ಲಿ ಉಪಮಾಲಂಕಾರವಿದೆ. ಇವುಗಳಲ್ಲಿ ಉಪ ಮಾನೋಪಮೇಯುಗಳನ್ನೂ ಸಮಾನಧರ್ಮ(point of resemblance)ವನ್ನೂ ಕಂಡುಹಿಡಿಯಬೇಕು.

(೨). ಒಂದರಲ್ಲಿ ಮತ್ತೊಂದರ ಧರ್ಮವು ಸೇರಿರುವದೆಂಬ ಕಾರಣದಿಂದ ಒಂದನ್ನು ಮತ್ತೊಂದೆಂದು ಇಟ್ಟುಕೊಳ್ಳುವದು ಉತ್ಪ್ರೇಕ್ಷೆಯು (supposition).

ಉದಾ:-೧೩ನೆಯ ಶ್ಲೋಕದಲ್ಲಿ ದಿಲೀಪನ ಶರೀರವನ್ನು ಕಂಡು ಕ್ಷಾತ್ರಧರ್ಮ ವಾದ ಪರಾಕ್ರಮವೆ ಶರೀರವನ್ನು ವಹಿಸಿರಬೇಕೆಂದು ಕವಿಯು ಉತ್ಪ್ರೇಕ್ಷಿಸಿರುತ್ತಾನೆ. ದಿಲೀಪನ ಶರೀರದಲ್ಲಿರುವ ಎದೆಯಗಲವಾಗಿರುವಿಕೆ ಮುಂತಾದ ಧರ್ಮದ ಸಂಬಂಧವೆ ಈ ಉತ್ಪ್ರೇಕ್ಷೆಗೆ ಕಾರಣ.

ಇದರಂತೆ ದಿಲೀಪನಲ್ಲಿ ವಿರುದ್ಧಗುಣಗಳು ಸೇರಿದ್ದರಿಂದ ಅವು ಒಡಹುಟ್ಟಿ ದವೋ ಎಂಬಂತಿದ್ದವು ಎಂದು ೨೨ನೆಯ ಶ್ಲೋಕದಲ್ಲಿ ಉತ್ಪ್ರೇಕ್ಷೆ ಮಾಡಿದೆ. ೩೭ ರಲ್ಲಿ ಸ್ವಲ್ಪ ಜನರಿದ್ದರೂ ದೊಡ್ಡ ಸೇನೆಯಿಂದೊಡಗೂಡಿದ್ದರೋ ಎಂಬಂತಿತ್ತು ಎಂದು ಉತ್ಪ್ರೇಕ್ಷೆ ಮಾಡಿದೆ.

## ೯ ಪರೀಕ್ಷೆಯ ಪ್ರಶ್ನೆಗಳು

(೧). ರಘುವಂಶವನ್ನು ಬರೆದ ಕವಿ ಯಾರು? ಆತನ ವಿಷಯವಾಗಿ ನೀವೇನು ಬಲ್ಲಿರಿ? ಈ ಗ್ರಂಥಕ್ಕೆ ಈ ಹೆಸರು ಬರಲು ಕಾರಣವೇನು? ಈ ಗ್ರಂಥದ ವಿಷಯಕ್ಕೆ ಮೂಲಗ್ರಂಥವು ಯಾವುದು?

(೨). ಒಂದನೆಯ ಸರ್ಗದಲ್ಲಿರುವ ಕಥಾವಿಷಯವನ್ನು ೬-೭ ಸಂಸ್ಕೃತ ವಾಕ್ಯಗಳಲ್ಲಿ ಬರೆಯಿರಿ.

ಉತ್ತರ:- ವೈವಸ್ವತಮನೋರ್ವಂಶೇ ದಿಲೀಪೋ ನಾಮ ರಾಜಾ ಬಭೂವ

। ತಸ್ಯ ಮಗಧವಂಶಜಾ ಸುದಕ್ಷಿಣಾಖ್ಯಾ ಪತ್ನ್ಯಾಸೀತ್ । ಮಹತಾಪಿ ಕಾಲೇನ ತಯೋರಪತ್ಯಂ ನಾಭೂತ್ । ತತಃ ಸನ್ತಾನಕಾಮೋ ಭೂಪತಿರ್ವಿಶ್ವಸ್ತೇಷು ಸಚಿವೇಷು ರಾಜ್ಯಭಾರಂ ನಿಕ್ಷಿಪ್ಯ ಸುದಕ್ಷಿಣಯಾ ಸಹ ಗುರೋರ್ವಸಿಷ್ಠಸ್ಯಾಶ್ರಮಂ ಜಗಾಮ । ತಸ್ಯ ಚ ಮುನೇಃ ಪುರಃ ಸ್ವಸಂತಾಪಕಾರಣಂ ಅವೋಚತ್ । ವಸಿಷ್ಠಸ್ತು ನೃಪತೇಃ ಸನ್ತಾನಾಭಾವೇ ಹೇತುಃ ಪುರಾ ತೇನ ಕಾಮಧೇನ್ವವಜ್ಞಾನಮೇವೇತಿ ಧ್ಯಾನಬಲೇನ ವ್ಯಜಾನಾತ್ । ಕಾಮಧೇನುಶಾಪಸ್ಯ ಚ ಪರಿಹಾರಾರ್ಥಂ ತತ್ಸುತಾಂ ನನ್ದಿನಿಂ ನಾಮ ಧೇನುಂ ಆರಾಧಯೇತಿ ಆದಿಶತ್ ॥

(೩). 'ಕುಲಕ', 'ಕಲಾಪಕ' ಎಂದರೇನು? ೧ನೆಯ ಸರ್ಗದಲ್ಲಿ ಕವಿಯು ಯಾವ ಯಾವ ಸಂದರ್ಭದಲ್ಲಿ ಇವನ್ನುಪಯೋಗಿಸಿರುತ್ತಾನೆ?

(೪). ಕವಿಯು ಮೀಮಾಂಸ, ಸಾಂಖ್ಯ, ಯೋಗ, ಶಕುನ, ಪುರಾಣ, ಸಂಗೀತ, ರಾಜನೀತಿ-ಇವುಗಳಿಗೆ ಸಂಬಂಧಪಟ್ಟ ಯಾವ ವಾಕ್ಯಗಳನ್ನು ಈ ಸರ್ಗದಲ್ಲಿ ಉಪಯೋಗಿಸಿರುತ್ತಾನೆ?

(೫). ಈ ವಾಕ್ಯಗಳ ಅಭಿಪ್ರಾಯವನ್ನು ವಿವರಿಸಿ.

'ಸಮ್ಪದ್ವಿನಿಮಯೇನೋಭೌ ದಧರುರ್ಭುವನದ್ವಯಮ್', 'ಉರ್ವೀಂ ಶಶಾಸೈಕಪುರೀಮಿವ', 'ನಾಮಧೇಯಾನಿ ಪೃಚ್ಛನ್ತೌ ವನ್ಯಾನಾಂ ಮಾರ್ಗಶಾಖಿನಾಮ್', 'ಸ ಪಿತಾ ಪಿತರಸ್ತಾಸಾಮ್'.

(೬). (a) ರಾಜನು ಹೇಗಿರಬೇಕೆಂದು ಕವಿಯು ತಿಳಿಸಿರುತ್ತಾನೆ? (b) ವಸಿಷ್ಠನು ಹೇಗೆ ಕಾಲವನ್ನು ಕಳೆಯುತ್ತಿದ್ದನು? ಆತನಿಗೂ ರಾಜನಿಗೆ ಇದ್ದ ಸಂಬಂಧವೇನು? ಸತ್ಸಂತಾನಕ್ಕೆ ಕವಿಯು ಹೆಚ್ಚಿನ ಬೆಲೆಯನ್ನು ಕೊಟ್ಟಿದ್ದಾನೆಂದು ಹೇಗೆ ತಿಳಿಯಬಹುದು?

(೭). (a) ಈ ಪದ್ಯದಲ್ಲಿರುವ ಮಾತುಗಳನ್ನು ನಾಮಪದ, ಕ್ರಿಯಾಪದ, ಅವ್ಯಯ-ಎಂಬ ಮೂರು ಪಂಗಡವಾಗಿ ವಿಂಗಡಿಸಿ ನಾಮಪದಗಳಿಗೆ ಲಿಂಗ ವಚನವಿಭಕ್ತಿಗಳನ್ನೂ ಕ್ರಿಯಾಪದಗಳಿಗೆ ಲಕಾರಪುರುಷವಚನಗಳನ್ನೂ ತಿಳಿಸಿ. (b) ಇಲ್ಲಿರುವ ಶಬ್ದಾಲಂಕಾರದ ಹೆಸರೇನು?

ಅಥಾಥರ್ವನಿಧೇಸ್ತಸ್ಯ ನಿಜಿತಾರಿಪುರಃ ಪುರಃ ।
ಅರ್ಥ್ಯಾಮರ್ಥಪತಿರ್ವಾಚಮಾದದೇ ವದತಾಂ ವರಃ ॥

(೮). ಈ ಮಾತುಗಳ ಅರ್ಥವೇನು? ಉಡುಪಂ, ಪ್ರಾಂಶುಃ, ಶ್ಯಾಮಿಕಾ, ಬಲಿಃ, ಉತ್ಸೃಷ್ಟಮ್, ಮೌರ್ವೀ, ಸಂಸ್ಕಾರಾಃ, ಪಾರದೃಶ್ವಾ, ವ್ಯಾವೃತ್ತಾ,

ವಪ್ರಮ್, ಧೂಃ, ಶಿಖಂಡಿನಃ, ಸ್ಯನ್ದನಃ, ಆಮೋದಃ, ಹೈಯಂಗವೀನಮ್, ರೋಮನ್ಥಃ, ಪ್ರಸೂತಿಃ, ಪ್ರಚೇತಾಃ, ಆಭುಗ್ನಮ್, ದೋಷಜ್ಞಃ, ಸಂವೇಶಃ.

(೯). ಈ ಶ್ಲೋಕಗಳ ಅನ್ವಯವನ್ನೂ ತಾತ್ಪರ್ಯವನ್ನೂ ಬರೆಯಿರಿ. ರೇಖಾಮಾತ್ರಮಪಿ ಕ್ಷುಣ್ಣಾತ್ (೧೭) ಸನ್ತಾನಾರ್ಥಾಯ (೩೪) ನಿರ್ದಿಷ್ಟಾಂ ಕುಲಪತಿನಾ (೯೫).

(೧೦). 'ಸತ್ಯಾಮಪಿ ತಪಃಸಿದ್ಧೌ' ಇಲ್ಲಿ 'ಅಪಿ', ನಾಮ್ನಿ ಕೀರ್ತಿತ 'ಏವ ಯತ್' ಇಲ್ಲಿ 'ಏವ', 'ಅನುಭವವಿಶೇಷಾತ್ತು ಸೇನಾಪರಿವೃತಾವಿವ' ಇಲ್ಲಿ 'ತು', 'ಅಥವಾ ಕೃತವಾಗ್ದ್ವಾರೇ.... ಗತಿಃ' ಇಲ್ಲಿ 'ಅಥವಾ'-ಈ ಮಾತುಗಳ ಸ್ವಾರಸ್ಯ(force)ವೇನು?

(೧೧). (a) 'ಮಣೌ ವಜ್ರಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ' ಇಲ್ಲಿ ಉಪಮಾನೋಪಮೇಯಗಳನ್ನು ವಿವರವಾಗಿ ಬಿಡಿಸಿ ತೋರಿಸಿ. (b) 'ನ ವ್ಯತೀಯುಃ ಪ್ರಜಾಸ್ತಸ್ಯ ನಿಯನ್ತುರ್ನೇಮಿವೃತ್ತಯಃ' ಈ ವಾಕ್ಯದ ಅರ್ಥವನ್ನು ವಿವರಿಸಿ. 'ಯಥಾ ಕುಶಲೇನ ಯನ್ತ್ರಾ ಪ್ರೇಷಿತಾ....' ಹೀಗೆ ಪ್ರಾರಂಭಿಸಿ;

(೧೨). ವಸಿಷ್ಠಾಶ್ರಮದ ವರ್ಣನೆಯನ್ನು ಕವಿಯು ಹೇಗೆ ಮಾಡಿರುತ್ತಾನೆ? ಅದರಲ್ಲಿ ಕವಿಯು ವಸ್ತುಸ್ವಭಾವವನ್ನು ಇದ್ದದ್ದು ಇದ್ದಂತೆ ವರ್ಣನೆಮಾಡುವದರಲ್ಲಿ ಚತುರನೆಂದು ಹೇಗೆ ತೋರಿಸಿಕೊಂಡಿರುತ್ತಾನೆ?

(೧೩). ಹದಿನಾಲ್ಕು ಮನುಗಳು, ದಿಗ್ಗಜಗಳು, ವಿದ್ಯೆಗಳು, ಸಪ್ತಸಮುದ್ರ ಗಳು, ಮೂರು ಅಗ್ನಿಗಳು, ಮೂರು ಋಣಗಳು, ಆರು ಈತಿಗಳು, ಪಂಚಭೂತಗಳ ಗುಣಗಳು, ಸಪ್ತಾಂಗಗಳು- ಇವುಗಳನ್ನು ತಿಳಿಸಿ.

ಉತ್ತರ:- ಮನುಗಳು-ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ. ದಿಗ್ಗಜ ಗಳು:- ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದನ್ತ, ಸಾರ್ವಭೌಮ, ಸುಪ್ರತೀಕ. ವಿದ್ಯೆಗಳು:- ವೇದಗಳು ನಾಲ್ಕು, ವೇದಾಂಗಗಳು ಆರು, ಮೀಮಾಂಸಾ, ನ್ಯಾಯ, ಧರ್ಮಶಾಸ್ತ್ರ, ಪುರಾಣ-ಹೀಗೆ ಹದಿನಾಲ್ಕು; ಅಥವಾ, ಆನ್ವೀಕ್ಷಿಕೀ (logic), ದಂಡನೀತಿ (vedic lore), ವಾರ್ತಾ (political eco-nomy), ದಂಡನೀತಿ (politics)- ಹೀಗೆ ನಾಲ್ಕು. ಸಮುದ್ರಗಳು:- ಲವಣ, ಇಕ್ಷು, ಸುರಾ, ಸರ್ಪಿಸ್, ದಧಿ, ಕ್ಷೀರ, ಶುದ್ಧಜಲ-ಹೀಗೆ ಏಳು.

(೧೪). ಇವುಗಳ ಹೆಸರೇನು? ಯಜ್ಞದ ಹೆಂಡತಿ, ಅಗ್ನಿಯ ಹೆಂಡತಿ, ವಸಿಷ್ಠನ ತಂದೆ, ಪಾತಾಳದ ಒಡೆಯ, ಪರ್ವತಗಳಲ್ಲೆಲ್ಲ ಎತ್ತರವಾದದ್ದು,

ವೇದಗಳ ಮೊದಲಕ್ಷರ, ರಾಜರುಗಳಿಗೆ ಮೊಟ್ಟಮೊದಲನೆಯವನು.

(೧೫). (a)ಗೀಟುಹಾಕಿರುವ ಕಡೆಗಳಲ್ಲಿರುವ ವ್ಯಾಕರಣವಿಶೇಷವೇನು?

1. ಪಪ್ರಚ್ಛ ಕುಶಲಂ ರಾಜ್ಯೇ ರಾಜ್ಯಾಶ್ರಮಮುನಿಂ ಮುನಿಃ ।

2. ಪಯಃ ಪೂರ್ವೈಃ ಸ್ವನಿಶ್ವಾಸೈಃ ಕವೋಷ್ಣಮುಪಭುಜ್ಯತೇ ।

3. ಅಥ ಯನ್ತಾರಮಾದಿಶ್ಯ ಧುರ್ಯಾನ್ ವಿಶ್ರಾಮಯೇತಿ ಸಃ ।
ತಾಮವಾರೋಹಯತ್ಪತ್ನೀಂ ರಥಾದವತತಾರ ಚ ॥

(ಬ) (೧) ಮತ್ತು (೨) ರಲ್ಲಿ ಕರ್ತರಿಪ್ರಯೋಗವನ್ನು ಕರ್ಮಣಿಪ್ರಯೋಗವನ್ನಾಗಿಯೂ ಕರ್ಮಣಿಪ್ರಯೋಗವನ್ನು ಕರ್ತರಿಪ್ರಯೋಗವನ್ನಾಗಿಯೂ ಮಾಡಿ; (೩) ರಲ್ಲಿ ಣಿಜನ್ತಕ್ರಿಯಾಪದವನ್ನು ಸಾಮಾನ್ಯಕ್ರಿಯಾ ಪದವಾಗಿ ಮಾಡಿ.

(೧೬) (a) ನಿತ್ಯಸಮಾಸ, ಪ್ರಾದಿಸಮಾಸ, ಉಪಪದಸಮಾಸ, ನಞ್ ತತ್ಪುರುಷ, ಪ್ರಾದಿಬಹುವ್ರೀಹಿ, ವಿಶೇಷಣೋಭಯಪದ ಕರ್ಮಧಾರಯ-ಇವಕ್ಕೆ ಒಂದೊಂದು ಉದಾಹರಣೆಯನ್ನು ಈ ಸರ್ಗದಿಂದ ತೆಗೆದು ಬರೆಯಿರಿ. (b) ಈ ಶ್ಲೋಕದಲ್ಲಿರುವ ವೃತ್ತಿಗಳಿಗೆ ವಿಗ್ರಹವಾಕ್ಯಗಳನ್ನು ಬರೆದು ವೃತ್ತಿಯ ಹೆಸರನ್ನೂ ಹೇಳಿ:-

ಧರ್ಮಲೋಪಭಯಾದ್ರಾಜ್ಞೀಮೃತುಸ್ನಾತಾಮಿಮಾಂ ಸ್ಮರನ್ ।
ಪ್ರದಕ್ಷಿಣಕ್ರಿಯಾರ್ಹಾಯಾಂ ತಸ್ಯಾಂ ತ್ವಂ ಸಾಧು ನಾಚರಃ ॥

---

# ರಘುವಂಶ

## ಹತ್ತನೆಯ ಸರ್ಗ

ಪೃಥಿವೀಂ ಶಾಸತಸ್ತಸ್ಯ, ಪಾಕಶಾಸನತೇಜಸಃ ।
ಕಿಂಚಿದೂನಮನೂನರ್ದ್ಧೇಃ, ಶರದಾಮಯುತಂ ಯಯೌ ॥೧॥

ಅನ್ವಯ. [ಪೃಥಿವೀಂ ಶಾಸತಃ ಪಾಕಶಾಸನತೇಜಸಃ ಅನೂನರ್ದ್ಧೇಃ ತಸ್ಯ ಕಿಂಚಿದೂನಂ ಶರದಾಂ ಅಯುತಂ ಯಯೌ.]

ಅರ್ಥ. ಪೃಥಿವೀಂ-ಭೂಮಿಯನ್ನು ಶಾಸತಃ-ಆಳುತ್ತಿರುವ ಪಾಕಶಾಸನ ತೇಜಸಃ- (ಪಾಕಶಾಸನ-ಇಂದ್ರನ ತೇಜಸಃ- ತೇಜಸ್ಸುಳ್ಳ) ಇಂದ್ರನಂಥ ಪ್ರಭಾವ ವುಳ್ಳ ಅನೂನರ್ದ್ಧೇಃ- (ಅನೂನ -ಕಡಿಮೆಯಿಲ್ಲದ ಋರ್ದ್ಧೇಃ-ಅಭಿವೃದ್ಧಿಯುಳ್ಳ) ಹೆಚ್ಚಿನ ಸಂಪತ್ತುಳ್ಳ ತಸ್ಯ-ಆತನಿಗೆ ಕಿಂಚಿದೂನಂ-ಸ್ವಲ್ಪ ಕಡಿಮೆಯಾಗಿ ಶರದಾಂ-ವರ್ಷಗಳ ಅಯುತಂ- ಹತ್ತು ಸಾವಿರವು ಯಯೌ- ಕಳೆದುಹೋಯಿತು.

ತಾತ್ಪರ್ಯ. ಆ ದಶರಥನು ಇಂದ್ರನಂಥ ಪ್ರತಾಪದಿಂದ ಭೂಮಿಯನ್ನು ಮಹಾಸಮೃದ್ಧಿಯಿಂದೊಡಗೂಡಿ ಆಳುತ್ತಿರುವಲ್ಲಿ ಸುಮಾರು ಹತ್ತು ಸಾವಿರ ವರ್ಷಗಳು ಕಳೆದುಹೋದವು.

ವಿಗ್ರಹವಾಕ್ಯಗಳು. ೧. ಶಾಸ್ತೀತಿ-ಶಾಸತ್; ತಸ್ಯ-ಶಾಸತಃ (ಕೃ.ವೃ.). ೨. ಪಾಕಂ ಶಾಸ್ತೀತಿ-ಪಾಕಶಾಸನಃ; ಪಾಕಶಾಸನಸ್ಯ ತೇಜಃ-ಪಾಕಶಾಸನತೇಜಃ (ಷ.ತ.); ಪಾಕಶಾಸನತೇಜ ಇವ ತೇಜಃ ಯಸ್ಯ ಸಃ-ಪಾಕಶಾಸನತೇಜಾಃ (ಉ.ಬ.); ತಸ್ಯ- ಪಾಕಶಾಸನತೇಜಸಃ ೩. ನ ಊನಾ; ಅನೂನಾ (ನ.ತ); ಅನೂನಾ ಋದ್ಧಿಃ ಯಸ್ಯ ಸಃ-ಅನೂನರ್ದ್ಧಿಃ (ಷ.ಬ.); ತಸ್ಯ-ಅನೂನರ್ದ್ಧೇಃ.

ವ್ಯಾಕರಣವಿಶೇಷ. ೧.ಪೃಥ್ವೀ, ಪೃಥಿವೀ-ಎಂದು ಎರಡು ರೂಪಗಳಿವೆ. ೨.ಶಾಸನಃ -

ತಕಾರಾನ್ತಪುಲ್ಲಿಂಗ (ಶಾಸತ್, ಶಾಸತೌ, ಶಾಸತಃ); ಶಾಸತ್, ಜಕ್ಷತ್, ಚಕಾಸತ್, ದರಿದ್ರತ್, ಜಾಗ್ರತ್, ದೀಧ್ಯತ್, ವೇವ್ಯತ್-ಈ ಏಳು ಕೃದನ್ತ ಶಬ್ದಗಳಿಗೆ ಪುಲ್ಲಿಂಗದಲ್ಲಿ ಎಲ್ಲಿಯೂ ನುಮಾಗಮ(=ನ್ ಎಂಬಾಗಮ)ವಿಲ್ಲ; ನಪುಂಸಕಲಿಂಗದಲ್ಲಿ ಪ್ರಥಮಾ, ಸಂಬೋಧನ, ದ್ವಿತೀಯಾ ಬಹುವಚನಗಳಲ್ಲಿ ಉಂಟು. ಉದಾಹರಣೆ:- ಶಾಸತ್‌ಶಬ್ದಕ್ಕೆ 'ಶಾಸನ್ತಿ-ಶಾಸತಿ' ಎಂಬ ಎರಡು ರೂಪಗಳಾಗುವವು. ೩. ಪಾಕಶಾಸನತೇಜಸಃ-ಇದಕ್ಕೆ 'ಪಾಕಶಾಸನತೇಜಃ ತೇಜಃ ಯಸ್ಯ ಸಃ' - ಎಂಬುದೇ ನಿಜವಾದ ವಿಗ್ರಹ. 'ಪಾಕಶಾಸನತೇಜಃ' ಎಂಬ ಪೂರ್ವಪದಕ್ಕೆ ಪಾಕಶಾಸನತೇಜಸ್ಸಿಗೆ ಸದೃಶವಾದ ಎಂದು ಲಕ್ಷಣಾರ್ಥ; ಇದನ್ನು ತಿಳಿಸುವದಕ್ಕೆ 'ತೇಜ ಇವ' ಎಂದು ತೋರಿಸುವದು ವಾಡಿಕೆ. ಸಮಾಸವಾಗುವಾಗ 'ಪಾಕಶಾಸನತೇಜಃ' ಎಂಬ ಪದದಲ್ಲಿ ಉತ್ತರಪದವಾಗಿರುವ 'ತೇಜಃ' ಎಂಬುದು ಲೋಪವಾಗಿದೆ. ಸಪ್ತಮ್ಯಂತಸಹಿತವಾದ ಸಮಾಸವಾಗಲಿ ಉಪಮಾನಸಹಿತಸಮಾಸವಾಗಲಿ ಪೂರ್ವಪದವಾಗಿದ್ದರೆ ಬಹುವ್ರೀಹಿಯಾಗುವದು; ಪೂರ್ವಪದದ ಎರಡನೆಯ ಮಾತಿಗೆ ಲೋಪವೂ ಬರುವದು. ಇಂದ್ರನ ತೇಜಸ್ಸಿನಂತಿರುವ ತೇಜಸ್ಸುಳ್ಳವನು- ಎಂದು ವಿಗ್ರಹದ ಅರ್ಥ. ೪. ಶರದಾಂ-ದಕಾರಾನ್ತ ಸ್ತ್ರೀಲಿಂಗ. ೫. ಅಯುತಂ-ಇಲ್ಲಿ ಈ ಸಂಖ್ಯಾವಾಚಕವು ವಿಶೇಷ್ಯವಾಗಿದೆ. ಸಂಸ್ಕೃತದಲ್ಲಿ ಸಂಖ್ಯೆಗಳ ಸ್ಥಾನದ ಬೆಲೆಯನ್ನು ಹೇಳುವ ಮುಖ್ಯಶಬ್ದಗಳು ಯಾವವೆಂದರೆ: ಏಕದಶಶತಸಹಸ್ರಾಣ್ಯಯುತಂ ಲಕ್ಷಂ ತಥಾ ಪ್ರಯುತಮ್ । ಕೋಟ್ಯರ್ಬುದಂ ಚ ಪದ್ಮಂ ಸ್ಥಾನಾತ್ ಸ್ಥಾನಂ ದಶಗುಣಂ ಸ್ಯಾತ್ ॥ ಇಲ್ಲಿರುವ ಶತ, ಸಹಸ್ರ-ಮುಂತಾದ ಶಬ್ದಗಳು ಯಾವಾಗಲೂ ಏಕವಚನ; ಇವನ್ನು ವಿಶೇಷಣವಾಗಿಯೂ ವಿಶೇಷ್ಯವಾಗಿಯೂ ಉಪಯೋಗಿಸಬಹುದು. ಉದಾ: ಶರದಾಂ ಅಯುತಂ'-ವರ್ಷಗಳ ಹತ್ತು ಸಾವಿರ; ಅಥವಾ'ಅಯುತಂ ಶರದಃ'- ಹತ್ತು ಸಾವಿರ ವರ್ಷಗಳು ೬. ಯಯೌ (೨೧)-ಯಾ ಪ್ರಾಪಣೇ(ಯಾ-ಹೋಗು) ಎಂಬ ೨ನೆಯ ಗಣದ ಧಾತುವಿನ ಲಿಟ್(ಪರೋಕ್ಷಭೂತ) ಪ.ಪ್ರ.ಏ.

ವಿಶೇಷವಿಚಾರ. ೧. ಪಾಕನೆಂಬ ದೈತ್ಯನನ್ನು ಕೊಂದದ್ದರಿಂದ ಇಂದ್ರನಿಗೆ ಪಾಕಶಾಸನನೆಂಬ ಹೆಸರು ಬಂತೆಂದು ಕೆಲವರು ಹೇಳುತ್ತಾರೆ; ಅದಿತಿಯ ಗರ್ಭವನ್ನು ಕತ್ತರಿಸಿದ್ದರಿಂದ ಆ ಹೆಸರು ಬಂತೆಂದು ಮತ್ತೆ ಕೆಲವರೆನ್ನುವರು; ಬಾಲಕರಿಗೆ ಎಂದರೆ ಅಜ್ಞರಿಗೆ ತಿಳಿವಳಿಕೆಯನ್ನು ಹೇಳುವದರಿಂದ ಆ ಹೆಸರು ಬಂದಿದೆಯೆಂದು ಬೇರೆ ಕೆಲವರು ಹೇಳುತ್ತಾರೆ. (ಪಾಕಾನ್ ಶಾಸ್ತೀತಿ-ಪಾಕಶಾಸನಃ). ಯಾವ ಅರ್ಥವೇ ಇರಲಿ ಪಾಕಶಾಸನ ಎಂಬ ಮಾತಿನ ಅವಯವಾರ್ಥವೇನೂ ಇಲ್ಲಿ ಬೇಕಿರುವದಿಲ್ಲ. ೨. ಹತ್ತು ಸಾವಿರ ವರ್ಷಗಳೆಂದರೆ ಹಿಂದಿನ ಸರ್ಗದಲ್ಲಿ ಹೇಳಿದಂತೆ ಋಷಿಯ ಶಾಪವು ಬಂದಂದಿನಿಂದ ಎಂದು ಲೆಕ್ಕಹಾಕಬೇಕು, ಹುಟ್ಟಿದಂದಿನಿಂದ ಅಥವಾ ರಾಜ್ಯಾಭಿಷೇಕವಾದಂದಿನಿಂದ ಎಂದು ಲೆಕ್ಕಹಾಕಬಾರದು; ಅದು ರಾಮಾಯಣಕ್ಕೆ ವಿರೋಧವಾಗುವದು ಎಂದು ವ್ಯಾಖ್ಯಾನಕಾರರು ಬರೆದಿದ್ದಾರೆ. ಮನುಷ್ಯನಿಗೆ ನೂರು ವರ್ಷವೇ ಪೂರ್ಣಾಯುಸ್ಸೆಂದು ಶ್ರುತಿಯಲ್ಲಿದ್ದರೂ ಜನರು ಸಾವಿರಾರು ವರ್ಷಗಳು ಬದುಕಿದ್ದಂತೆ ಪುರಾಣಾದಿಗಳಲ್ಲಿ ವರ್ಣಿಸಿರುತ್ತದೆ.

ನ ಚೋಪಲೇಭೇ ಪೂರ್ವೇಷಾಮೃಣನಿರ್ಮೋಕ್ಷಸಾಧನಮ್ ।
ಸುತಾಭಿಧಾನಂ ಸ ಜ್ಯೋತಿಃ ಸದ್ಯಃ ಶೋಕತಮೋಽಪಹಮ್ ॥೨॥

ಅನ್ವಯ. [ಸ ಪೂರ್ವೇಷಾಂ ಋಣನಿರ್ಮೋಕ್ಷಸಾಧನಮ್ ಸದ್ಯಃ ಶೋಕತಮೋಽಪಹಂ ಸುತಾಭಿಧಾನಂ ಜ್ಯೋತಿಃ ನ ಚ ಉಪಲೇಭೇ.]

ಅರ್ಥ. ಸಃ-ಆತನು ಪೂರ್ವೇಷಾಂ- ಹಿಂದಿನವರ ಋಣ ನಿರ್ಮೋಕ್ಷ ಸಾಧನಮ್ - (ಋಣ-ಸಾಲದ ನಿರ್ಮೋಕ್ಷ-ಬಿಡುಗಡೆಗೆ ಸಾಧನಂ-ಸಾಧನವಾದ) ಋಣದಿಂದ ಬಿಡುಗಡೆಯಾಗುವದಕ್ಕೆ ಬೇಕಾದ ಸದ್ಯಃ-ಕೂಡಲೆ ಶೋಕತಮೋಽಪಹಮ್ - (ಶೋಕ-ದುಃಖವೆಂಬ ತಮಃ-ಕತ್ತಲೆಯನ್ನು ಅಪಹಂ-ನಾಶಗೊಳಿಸುವ) ದುಃಖವೆಂಬ ಕತ್ತಲೆಯನ್ನು ಕೂಡಲೆ ಕಳೆಯುವ ಸುತಾಭಿಧಾನಂ-(ಸುತ-ಮಗನೆಂಬ ಅಭಿಧಾನಂ-ಹೆಸರುಳ್ಳ) ಮಗನೆಂಬ ಹೆಸರಿನ ಜ್ಯೋತಿಃ-ಬೆಳಕನ್ನು ನ ಚ ಉಪಲೇಭೇ - ಕಂಡವನೇನೋ ಆಗಲಿಲ್ಲ.

ತಾತ್ಪರ್ಯ. ಆದರೂ ಪಿತೃಗಳ ಋಣವನ್ನು ತೀರಿಸಿಕೊಳ್ಳುವದಕ್ಕೆ ಅವಶ್ಯವಾದ ಗಂಡುಮಗನೇನೋ ಅವನಿಗೆ ಹುಟ್ಟಲಿಲ್ಲ.

ವಿಗ್ರಹವಾಕ್ಯಗಳು. ೧. ಋಣಾತ್ ನಿರ್ಮೋಕ್ಷಃ- ಋಣನಿರ್ಮೋಕ್ಷಃ (ಪಂ. ತ.); ತಸ್ಯ-ಋಣನಿರ್ಮೋಕ್ಷಸ್ಯ; ಋಣನಿರ್ಮೋಕ್ಷಸ್ಯ ಸಾಧನಮ್-ಋಣನಿರ್ಮೋಕ್ಷಸಾಧನಮ್. (ಷ.ತ.). ೨. ಸುತಃ ಇತಿ ಅಭಿಧಾನಂ ಯಸ್ಯ ತತ್-ಸುತಾಭಿಧಾನಮ್ (ಷ.ಬ.). ೩. ಶೋಕ ಏವ ತಮಃ-ಶೋಕತಮಃ (ಅ.ಪೂ.ಕ); ಶೋಕತಮಃ ಅಪಹನ್ತಿ ಇತಿ-ಶೋಕತಮೋಽಪಹಮ್ (ಉಪ.ಸ.).

ವ್ಯಾಕರಣವಿಶೇಷ. ೧. ಪೂರ್ವೇಷಾಂ-ಪೂರ್ವಶಬ್ದವು 'ಮೊದಲನೆಯ', 'ಮೂಡಲದಿಕ್ಕಿಗಿರುವ' ಎಂಬರ್ಥವಾದರೆ ಮೂರು ಲಿಂಗ; 'ಮೂಡಲದಿಕ್ಕು' ಎಂದರ್ಥವಾದರೆ ಸ್ತ್ರೀಲಿಂಗ; 'ಪೂರ್ವಜರು, ಪಿತೃಗಳು' ಎಂಬರ್ಥವಾದರೆ ಪುಲ್ಲಿಂಗ ಬಹುವಚನ; (೧ನೆಯ ಸರ್ಗ ೬೭ (ಪು.೬೪); ೫-೧೪ (ಪು.೫—೧೫). ಈ ಶ್ಲೋಕಗಳಲ್ಲಿ ಹಿಂದಿನವರು, ಪಿತೃಗಳು-ಎಂಬರ್ಥದಲ್ಲಿ ಪ್ರಯೋಗವಾಗಿರುವದನ್ನು ನೋಡಿ.) ೨. ಜ್ಯೋತಿಃ-ಸಕಾರಾನ್ತನಪುಂಸಕ; (ಜ್ಯೋತಿಃ, ಜ್ಯೋತಿಷೀ, ಜ್ಯೋತೀಂಷಿ) ೩. ಸದ್ಯಃ-ಅವ್ಯಯ. ೪. ಶೋಕತಮೋಽಪಹಮ್-ಅಪ ಎಂಬ ಉಪಸರ್ಗಪೂರ್ವಕವಾದ ಹನ್‌ಧಾತುವಿಗೆ ಹಿಂದೆ ಕ್ಲೇಶ, ತಮಸ್ ಎಂಬ ಮಾತುಗಳಿದ್ದರೆ ಡ(=ಅ) ಪ್ರತ್ಯಯವು ಬರುತ್ತದೆ. ಉದಾ: ಕ್ಲೇಶಾಪಹಃ, ತಮೋಽಪಹಮ್. ಹಿಂದಿನ ಪದವು ಇಲ್ಲಿ 'ಶೋಕತಮಃ' ಎಂದಿದ್ದರೂ ತಮಸ್ ಎಂಬುದು ಕೊನೆಯಲ್ಲಿರುವದರಿಂದ ಶೋಕತಮೋಽಪಹಮ್-ಎಂದಾಗಿದೆ ಇದು ಅಕಾರಾನ್ತ ನಪುಂಸಕ. ೫. ಉಪಲೇಭೇ-ಡುಲಭಷ್ ಪ್ರಾಪ್ತೌ (ಲಭ್-ಹೊಂದು) ಎಂಬ ೧ನೆಯ ಗಣದ ಧಾತುವಿನ ಲಿಟ್. ಆ.ಪ್ರ.ಏ. ೬. ನ ಚ-ಚ ಎಂಬುದು ತು ಎಂಬ ಅರ್ಥದಲ್ಲಿ ಉಪಯೋಗವಾಗಿದೆ.

ವಿಶೇಷವಿಚಾರ. ೧. ದೇವಋಣ, ಋಷಿಋಣ, ಪಿತೃಋಣ-ಎಂದು ಮೂರು ಋಣಗಳು; ದೇವಋಣವನ್ನು ಯಜ್ಞಾದಿಗಳಿಂದಲೂ ಋಷಿಋಣವನ್ನು ಶಾಸ್ತ್ರಾಧ್ಯಯನದಿಂದಲೂ ಪಿತೃಋಣವನ್ನು ಪುತ್ರಪ್ರಾಪ್ತಿಯಿಂದಲೂ ತೀರಿಸಿಕೊಳ್ಳಬೇಕು- ಎಂದು ಶಾಸ್ತ್ರವಿರುವದು; ೧-೭೧(ಪು. ೬೭), ೮-೩೦[೧] ಈ ಶ್ಲೋಕಗಳನ್ನು ನೋಡಿರಿ. ೨. 'ಪುತ್ರನಿಂದ ಪಿತೃಗಳು ಹೆಚ್ಚಿನ ತಮಸ್ಸನ್ನು ದಾಟುವರು, ಮಗನೇ ಬೆಳಕು' ಎಂದು ಐತರೇಯಬ್ರಾಹ್ಮಣದಲ್ಲಿದೆ. ಮಗನೇ ಜ್ಯೋತಿಯೆಂದು ಕವಿಯು ವರ್ಣಿಸಿರುವದು ಇದಕ್ಕೆ ಅನುಗುಣವಾಗಿದೆ.

ಅತಿಷ್ಠತ್ಪ್ರತ್ಯಯಾಪೇಕ್ಷಸನ್ತತಿಃ ಸ ಚಿರಂ ನೃಪಃ ।
ಪ್ರಾಙ್ಮನ್ಥಾದನಭಿವ್ಯಕ್ತರತ್ನೋತ್ಪತ್ತಿರಿವಾರ್ಣವಃ[೨] ॥೩॥

ಅನ್ವಯ. [ಪ್ರತ್ಯಯಾಪೇಕ್ಷಸನ್ತತಿಃ ಸ ನೃಪಃ, ಮನ್ಥಾತ್ ಪ್ರಾಕ್ ಅನಭಿವ್ಯಕ್ತರತ್ನೋತ್ಪತ್ತಿಃ ಅರ್ಣವಃ ಇವ ಚಿರಂ ಅತಿಷ್ಠತ್.]

ಅರ್ಥ. ಪ್ರತ್ಯಯಾಪೇಕ್ಷಸನ್ತತಿಃ - (ಪ್ರತ್ಯಯ-ಕಾರಣವನ್ನು ಅಪೇಕ್ಷ-ಬಯಸುವ ಸನ್ತತಿಃ-ಸಂತಾನವುಳ್ಳ) ಕಾರಣಕ್ಕಾಗಿ ಕಾದುಕೊಂಡಿರುವ ಸಂತಾನವುಳ್ಳ ಸ ನೃಪಃ- ಆ ರಾಜನು ಮನ್ಥಾತ್ ಪ್ರಾಕ್-ಕಡೆತಕ್ಕೆ ಮುಂಚೆ ಅನಭಿವ್ಯಕ್ತರತ್ನೋತ್ಪತ್ತಿಃ - (ಅನಭಿವ್ಯಕ್ತ-ಹೊರತೋರದೆ ಇರುವ ರತ್ನ-ರತ್ನಗಳ ಉತ್ಪತ್ತಿಃ-ಹುಟ್ಟುವಿಕೆಯುಳ್ಳ) ರತ್ನಗಳ ಉತ್ಪತ್ತಿಯು ತೋರಿಕೊಳ್ಳದೆ ಇದ್ದ ಅರ್ಣವ ಇವ-ಸಮುದ್ರದಂತೆ ಚಿರಂ-ಬಹುಕಾಲ ಅತಿಷ್ಠತ್-ಇದ್ದನು.

ತಾತ್ಪರ್ಯ. ಹಾಲ್ಗಡಲನ್ನು ಕಡೆಯುವದಕ್ಕೆ ಮುಂಚೆ ಅದರಲ್ಲಿದ್ದ ಉತ್ತಮ ವಸ್ತುಗಳು ಕಾಣಿಸಕೊಳ್ಳದೆ ಇದ್ದಂತೆಯೆ ಆ ರಾಜನಿಗೆ ಸಂತತಿಯಾಗುವ ಯೋಗವಿದ್ದರೂ ತಕ್ಕ ಕಾರಣವಿಲ್ಲದ್ದರಿಂದ ಬಹುಕಾಲ ಹೊರತೋರಿಕೊಳ್ಳದೆ ಇತ್ತು.

ವಿಗ್ರಹವಾಕ್ಯಗಳು. ೧. ಪ್ರತ್ಯಯಂ ಅಪೇಕ್ಷತ ಇತಿ-ಪ್ರತ್ಯಯಾಪೇಕ್ಷಾ (ಉಪ.ಸ.); ಪ್ರತ್ಯಯಾಪೇಕ್ಷಾ ಸನ್ತತಿಃ ಯಸ್ಯ ಸಃ-ಪ್ರತ್ಯಯಾಪೇಕ್ಷಸನ್ತತಿಃ (ಷ.ಬ.). ೨. ರತ್ನಾನಾಂ ಉತ್ಪತ್ತಿಃ-ರತ್ನೋತ್ಪತ್ತಿಃ (ಷ.ತ.); ನ ಅಭಿವ್ಯಕ್ತಾ-ಅನ

---

[೧] ಋಷಿದೇವಗಣಸ್ವಧಾಬಹುಜಾಂ ಶ್ರುತಯಾಗಪ್ರಸ್ವೈಃ ಸ ಪಾರ್ಥಿವಃ ।
ಅನೃಣತ್ವಮ್ ಉಪೇಯಿವಾನ್ ಬಭೌ ಪರಿಧೇರ್ಮುಕ್ತ ಇವೋಷ್ಣದೀಧಿತಿಃ

[೨] ೨-೩.ಈ ಶ್ಲೋಕಗಳ ನಡುವೆ: ಮನೋರ್ವಂಶಶ್ಚಿರಂ ತಸ್ಮಿನ್ನನಭಿವ್ಯಕ್ತಸನ್ತತಿಃ । ನಿಮಜ್ಯ ಪುನರುತ್ಥಾಸ್ಯನ್ನದಃ ಶೋಣ ಇವಾಭವತ್ ॥ (ಆತನಲ್ಲಿ ಬಹುಕಾಲ ಸಂತತಿಯು ತೋರದೆ ಇದ್ದದ್ದರಿಂದ ಮನುವಂಶವು ಶೋಣನದಿಯ ಹಾಗೆ ಮುಳುಗಿ ಎದ್ದದ್ದಾಯಿತು) ಎಂಬ ಹೆಚ್ಚಿಗೆಯ ಶ್ಲೋಕವೊಂದು ಕೆಲವು ಪುಸ್ತಕಗಳಲ್ಲಿದೆ.

ಅಭಿವ್ಯಕ್ತಾ (ನ.ತ.); ಅನಭಿವ್ಯಕ್ತಾ ರತ್ನೋತ್ಪತ್ತಿಃ ಯಸ್ಯ ಸಃ-ಅನಭಿವ್ಯಕ್ತರತ್ನೋತ್ಪತ್ತಿಃ (ಷ.ಬ.).

ವ್ಯಾಕರಣವಿಶೇಷ. ೧. ಪ್ರತ್ಯಯಾಪೇಕ್ಷಸನ್ತತಿಃ-ಇಲ್ಲಿ 'ಪ್ರತ್ಯಯಾಪೇಕ್ಷ' ಎಂಬ ಮಾತು ಸನ್ತತಿಶಬ್ದಕ್ಕೆ ವಿಶೇಷಣವಾಗಿರುವದರಿಂದ ಸ್ತ್ರೀಲಿಂಗವಾಗಿದೆ. ಸಮಾನಾಧಿಕರಣಬಹುವ್ರೀಹಿಯಲ್ಲಿ ಪುಲ್ಲಿಂಗಶಬ್ದದಿಂದ ಬಂದಿರುವ ಆಕಾರಾನ್ತ ಈಕಾರಾನ್ತ ಸ್ತ್ರೀಲಿಂಗ ಶಬ್ದಗಳು ಪೂರ್ವಪದವಾಗಿದ್ದರೆ ಪುಲ್ಲಿಂಗದ ರೂಪವನ್ನೆ ಹೊಂದುವವು. ಆದ್ದರಿಂದ 'ಪ್ರತ್ಯಯಾಪೇಕ್ಷಾಸನ್ತತಿಃ' ಎಂದಾಗುವದಿಲ್ಲ; 'ಪ್ರತ್ಯಯಾಪೇಕ್ಷಸನ್ತತಿಃ' ಎಂದೇ ಆಗುತ್ತದೆ. ಅನಭಿವ್ಯಕ್ತರತ್ನೋತ್ಪತ್ತಿಃ ಎಂಬಲ್ಲಿಯೂ ಹೀಗೆಯೆ. ೨. ಚಿರಂ, ಪ್ರಾಕ್-ಅವ್ಯಯಗಳು. ೩. ಮನ್ಥಾತ್-ಅ.ಪು.ಪಂಚಮೀ; 'ಪ್ರಾಕ್' ಎಂಬ ಶಬ್ದದ ಯೋಗವಿದ್ದರೆ ಪಂಚಮೀವಿಭಕ್ತಿ ಬರುವದು. ೪. ಅನಭಿವ್ಯಕ್ತರತ್ನೋತ್ಪತ್ತಿಃ-ಇದು 'ಅರ್ಣವಃ'-ಎಂಬುದಕ್ಕೆ ವಿಶೇಷಣ; ಪುಲ್ಲಿಂಗ. ೫. ಅತಿಷ್ಠತ್ (೩) ಷ್ಠಾಗತಿನಿವೃತ್ತೌ (ಸ್ಥಾ ತಿಷ್ಠ್-ನಿಲ್ಲು,ಇರು) ಎಂಬ ಒಂದನೆಯ ಗಣದ ಧಾತುವಿನ ಲಙ್ (ಅನದ್ಯ ತನಭೂತ), ಪ.ಪ್ರ.ಏ.

ವಿಶೇಷವಿಚಾರ. ಕ್ಷೀರಸಮುದ್ರವನ್ನು ದೇವತೆಗಳೂ ಅಸುರರೂ ಅಮೃತಕ್ಕಾಗಿ ಮಂದರಪರ್ವತದಿಂದ ಕಡೆಯಲು[೧] ಅನೇಕ ಶ್ರೇಷ್ಠವಸ್ತುಗಳು ಹುಟ್ಟಿದವೆ ಎಂದು ಪುರಾಣಕಥೆ. ಈ ಕಥೆಯನ್ನು ಭಾರತ, ರಾಮಾಯಣ, ವಿಷ್ಣುಪುರಾಣ, ಭಾಗವತ - ಇವುಗಳಲ್ಲಿ ವಿಸ್ತಾರವಾಗಿ ಹೇಳಿದೆ. ಅ ಸಮುದ್ರದಲ್ಲಿ ಹುಟ್ಟಿದ ೧೪ ರತ್ನಗಳನ್ನು ಎಂದರೆ ಶ್ರೇಷ್ಠವಸ್ತುಗಳನ್ನು ಈ ಶ್ಲೋಕದಲ್ಲಿ ಒಟ್ಟುಗೂಡಿಸಿ ಹೇಳಿರುತ್ತದೆ:- ಲಕ್ಷ್ಮೀಃ ಕೌಸ್ತುಭ ಪಾರಿಜಾತಕ ಸುರಾ ಧನ್ವನ್ತರಿಶ್ಚನ್ದ್ರಮಾ ಗಾವಃ ಕಾಮಧುಘಾಃ ಸುರೇಶ್ವರಗಜೋ ರಂಭಾದಿದೇವಾಂಗನಾಃ । ಅಶ್ವಃ ಸಪ್ತಮುಖೋ ವಿಷಂ ಹರಿಧನುಃ ಶಙ್ಖೋಽಮೃತಂ ಚಾಮ್ಬುಧೇಃ । ರತ್ನಾನೀಹ ಚತುರ್ದಶ ಪ್ರತಿದಿನಂ ಕುರ್ಯುಃ ಸದಾ ಮಙ್ಗಲಮ್ ॥ ಕ್ಷೀರ ಸಮುದ್ರದಲ್ಲಿ ಅನೇಕ ರತ್ನಗಳು ಹುಟ್ಟಿದಂತೆ ಮುಂದೆ ಅವನಿಗೆ ಅನೇಕ ಮಕ್ಕಳಾಗುವರೆಂಬುದನ್ನು ಕವಿಯು ಇಲ್ಲಿ ಸೂಚಿಸಿರುತ್ತಾನೆ.

ಋಷ್ಯಶೃಙ್ಗಾದಯಸ್ತಸ್ಯ ಸನ್ತಃ ಸನ್ತಾನಕಾಙ್ಕ್ಷಿಣಃ ।
ಆರೇಭಿರೇ ಜಿತಾತ್ಮಾನಃ ಪುತ್ರೀಯಾಮಿಷ್ಟಿಮೃತ್ವಿಜಃ ॥೪॥

ಅನ್ವಯ. [ಋಷ್ಯಶೃಙ್ಗಾದಯಃ ಋತ್ವಿಜಃ ಜಿತಾತ್ಮಾನಃ ಸನ್ತಃ, ಸನ್ತಾನ ಕಾಙ್ಕ್ಷಿಣಃ ತಸ್ಯ ಪುತ್ರೀಯಾಂ ಇಷ್ಟಿಂ ಆರೇಭಿರೇ]

[೧]ಈ ಕಥೆಯನ್ನು ವಿಸ್ತಾರವಾಗಿ "ಸಮುದ್ರಮಥನ" ಎಂಬ ಗ್ರಂಥದಲ್ಲಿ ವಿವರಿಸಿದೆ. ಈ ಗ್ರಂಥವು ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ಸಿಕ್ಕುತ್ತದೆ.

ಅರ್ಥ. ಋಷ್ಯಶೃಙ್ಗಾದಯಃ - ಋಷ್ಯಶೃಂಗನೇ ಮೊದಲಾದ ಋತ್ವಿಜಃ-ಋತ್ವಿಜರು ಜಿತಾತ್ಮಾನಃ ಸನ್ತಃ-(ಜಿತ-ಜಯಿಸಲ್ಪಟ್ಟ ಆತ್ಮಾನಃ-ಅಂತಃಕರಣವುಳ್ಳವರು ಸನ್ತಃ - ಆಗಿ) ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಸನ್ತಾನಕಾಙ್ಕ್ಷಿಣಃ-ಸಂತತಿಯನ್ನು ಬಯಸುವ ತಸ್ಯ-ಆತನ ಪುತ್ರೀಯಾಂ-ಪುತ್ರಸಂಬಂಧವಾದ ಇಷ್ಟಿಂ-ಇಷ್ಟಿಯನ್ನು ಆರೇಭಿರೇ -ಪ್ರಾರಂಭಿಸಿದರು.

ವಿಗ್ರಹವಾಕ್ಯಗಳು. ೧. ಋಷ್ಯಸ್ಯ ಶೃಙ್ಗಮಿವ ಶೃಙ್ಗಂ ಯಸ್ಯ ಸಃ-ಋಷ್ಯಶೃಙ್ಗಃ (ಉ.ಬ); ಋಷ್ಯಶೃಙ್ಗಃ ಆದಿಃ ಯೇಷಾಂ ತೇ-ಋಷ್ಯಶೃಙ್ಗಾದಯಃ (ಷ.ಬ.). ಸನ್ತಾನಂ ಕಾಙ್ಕ್ಷತ ಇತಿ-ಸನ್ತಾನಕಾಙ್ಕ್ಷೀ (ಉಪ.ಸ.); ತಸ್ಯ - ಸನ್ತಾನಾಕಾಙ್ಕ್ಷಿಣಃ. ೩. ಜಿತಃ ಆತ್ಮಾ ಯೈಃ ತೇ-ಜಿತಾತ್ಮಾನಃ (ತೃ.ಬ.). ೪. ಪುತ್ರಸ್ಯ ನಿಮಿತ್ತಂ-ಪುತ್ರೀಯಾ (ತ.ವೃ.); ತಾಂ-ಪುತ್ರೀಯಾಮ್. ೪. ಋತೌ ಯಜನ್ತೀತಿ - ಋತ್ವಿಜಃ (ಕೃ.ವೃ.). ॥

ವ್ಯಾಕರಣವಿಶೇಷ. ೧. ಸನ್ತಾನಕಾಙ್ಕ್ಷಿಣಃ-ಇದು 'ತಸ್ಯ' ಎಂಬುದಕ್ಕೆ ವಿಶೇಷಣ; ನಕಾರಾನ್ತಪುಲ್ಲಿಂಗ, ಷಷ್ಠೀ ಏಕವಚನ. ಪ್ರಥಮಾಬಹುವಚನವೆಂದೂ 'ಋಷ್ಯಶೃಙ್ಗಾದಯಃ' ಎಂಬುದಕ್ಕೆ ವಿಶೇಷಣವೆಂದೂ ಇಟ್ಟುಕೊಳ್ಳಬಹುದು. ಆಗ 'ಋಷ್ಯಶೃಙ್ಗಾದಯಃ ಋತ್ವಿಜಃ, ತಸ್ಯ ಸನ್ತಾನಾಕಾಙ್ಕ್ಷಿಣಃ ಜಿತಾತ್ಮಾನಃ ಸನ್ತಃ. ಪುತ್ರೀಯಾಂ ಇಷ್ಟಿಂ ಆರೇಭಿರೇ'-ಎಂದು ಅನ್ವಯವಾಗುವದು. ಅವನಿಗೆ ಸಂತಾನವಾಗಲೆಂದು ಇಚ್ಛೆಯಿಂದ ಇಷ್ಟಿಮಾಡಿದರು-ಎಂದರ್ಥ. ೨. ಸನ್ತಃ-ತಕಾರಾನ್ತ ಪುಲ್ಲಿಂಗ ಪ್ರ.ಬ. (ಸನ್,ಸನ್ತೌ, ಸನ್ತಃ) 'ಯೋಗ್ಯರಾದ' ಎಂದೂ ಇದಕ್ಕೆ ಅರ್ಥವನ್ನು ಮಾಡಬಹುದು. ೩. ಪುತ್ರೀಯಾಂ-ಇಲ್ಲಿ 'ಪುತ್ರನಿಮಿತ್ತವಾದ' ಎಂಬ ಅರ್ಥದಲ್ಲಿ ಛ(=ಈಯ) ಪ್ರತ್ಯಯ ಬಂದಿದೆ; ನಿಮಿತ್ತವಾದ ಎಂದರೆ ಪಡೆಯುವ ಅಥವಾ ಪಡೆಯುವದಕ್ಕೆ ಕಾರಣವಾದ ಮತ್ತು ಸೂಚಕವಾದ ಎಂದರ್ಥ. ಯಾಗವು ಪುತ್ರನನ್ನು ಪಡೆಯುವದಕ್ಕೆ ಕಾರಣವಾಗಿದೆ. ೪. ಋತ್ವಿಜಃ-ಜಕಾರಾಂತ ಪು.ಪ್ರ.ಬ.(ಋತ್ವಿಕ್, ಋತ್ವಿಜೌ, ಋತ್ವಿಜಃ) ೫. ಆರೇಭಿರೇ(೨೪)-ರಭ್ ರಾಭಸ್ಯೇ (ರಭ್-ತೊಡಗು, ತ್ವರೆಮಾಡು) ಎಂಬ ೧ನೆಯ ಗಣದ ಧಾತುವಿಗೆ 'ಆ' ಎಂಬ ಉಪಸರ್ಗ ಸೇರಿದೆ; ಲಿಟ್, ಆ.ಪ್ರ.ಬ.

ವಿಶೇಷವಿಚಾರ. ೧. ಋಷ್ಯಶೃಂಗನೇ ಮೊದಲಾದವರು ಎಂದರೆ ಸುಯಜ್ಞ, ವಾಮದೇವ, ಜಾಬಾಲಿ, ಕಾಶ್ಯಪ, ವಸಿಷ್ಠ; ಇವರೆಲ್ಲರೂ ಇಷ್ಟಿಯನ್ನು ಮಾಡಿದರು. (ರಾಮಾ. ಬಾಲ. ೧೨) ೨. ಇಷ್ಟಿಸ್ತು ಚರುಣಾ ಪ್ರೋಕ್ತಾ ಯಾಗಸ್ತು ಪಶುನಾ ಸ್ಮೃತಃ । ಏತಚ್ಛೇಷಃ ಕ್ರತುಃ ಪ್ರೋಕ್ತೋ ಹೋಮೋಽನ್ಯತ್ ಪೂಜನಂ ಸ್ಮೃತಮ್ ॥ -ಎಂಬಂತೆ ಇಷ್ಟಿಯೆಂದರೆ 'ಚರು'ವಿನಿಂದ ಮಾಡುವ ಯಾಗವೆಂದು ಹೇಳುತ್ತಾರೆ. ಪುತ್ರಕಾಮೇಷ್ಟಿಯಲ್ಲಿ ಪುರೋಡಾಶವೆಂಬ ಅಕ್ಕಿಯ ಹಿಟ್ಟನ್ನು ಎಂಟು ಕಪಾಲಗಳೆಂಬ ಹಂಚಿನ ಪಿಲಿಕೆಗಳಲ್ಲಿ ಬೇಯಿಸಿ ಒಂದಾನೊಂದು ಮಂತ್ರದಿಂದ ಅಗ್ನಿದೇವತೆಗೆ ಅರ್ಪಿಸುತ್ತಾರೆ. ೩. ದಶರಥನ ಮಗಳಾದ ಶಾಂತಾದೇವಿಯನ್ನು

ಲೋಮಪಾದನೆಂಬ ಅಂಗರಾಜನು ಸಾಕಿದ್ದನು; ಅವಳನ್ನು ಋಷ್ಯಶೃಂಗನು ಮದುವೆಯಾಗಿದ್ದನು. ವಿಭಾಂಡಕನೆಂಬ ಋಷಿಗೆ ಒಂದು ಹೆಣ್ಣುಜಿಂಕೆಯಲ್ಲಿ ಈತನು ಹುಟ್ಟಿದನೆಂದೂ ತನ್ನ ತಂದೆಯ ಹೊರತು ಮನುಷ್ಯಪ್ರಾಣಿಯನ್ನೇ ಅವನು ಬಹುಕಾಲ ನೋಡಿರಲಿಲ್ಲವೆಂದೂ ಲೋಮಪಾದನು ಬ್ರಾಹ್ಮಣರ ಆಜ್ಞೆಯಂತೆ ಅವನನ್ನು ಸುಂದರಿಯರಾದ ಸ್ತ್ರೀಯರ ಮೂಲಕ ಬರಮಾಡಿಕೊಂಡದ್ದರಿಂದ ಆತನ ರಾಜ್ಯದಲ್ಲಿ ಅನಾವೃಷ್ಟಿಯು ಹೋಗಿ ಸುಭಿಕ್ಷವಾಯಿತೆಂದೂ ರಾಮಾಯಣದಲ್ಲಿ ಕಥೆ ಇದೆ.

ತಸ್ಮಿನ್ನವಸರೇ ದೇವಾಃ ಪೌಲಸ್ತ್ಯೋಪಪ್ಲುತಾ ಹರಿಮ್ ।
ಅಭಿಜಗ್ಮುರ್ನಿದಾಘಾರ್ತಾಶ್ಛಾಯಾವೃಕ್ಷಮಿವಾಧ್ವಗಾಃ ॥೫॥

ಅನ್ವಯ. [ತಸ್ಮಿನ್ ಅವಸರೇ ದೇವಾಃ ಪೌಲಸ್ತ್ಯೋಪಪ್ಲುತಾಃ (ಸನ್ತಃ) ನಿದಾಘಾರ್ತಾಃ ಅಧ್ವಗಾಃ ಛಾಯಾವೃಕ್ಷಂ ಇವ ಹರಿಂ ಅಭಿಜಗ್ಮುಃ]

ಅರ್ಥ. ತಸ್ಮಿನ್- ಆ ಅವಸರೇ- ಕಾಲದಲ್ಲಿ ದೇವಾಃ-ದೇವತೆಗಳು ಪೌಲಸ್ತ್ಯೋಪಪ್ಲುತಾಃ- (ಪೌಲಸ್ತ್ಯ-ರಾವಣನಿಂದ ಉಪಪ್ಲುತಾಃ-ಪೀಡಿತರಾಗಿ) ರಾವಣನ ಬಾಧೆಯನ್ನು ತಡೆಯಲಾರದೆ ನಿದಾಘಾರ್ತಾಃ- (ನಿದಾಘ-ಸೆಕೆಯಿಂದ ಆರ್ತಾಃ-ಸಂಕಟಪಟ್ಟ) ಸೆಕೆಯಿಂದ ಸಂಕಟಪಡುತ್ತಿರುವ ಅಧ್ವಗಾಃ-ದಾರಿಗಳು ಛಾಯಾವೃಕ್ಷಮಿವ - ನೆರಳಿನ ಮರವನ್ನು ಹೇಗೋ ಹಾಗೆ ಹರಿಂ-ವಿಷ್ಣುವನ್ನು ಕುರಿತು ಅಭಿಜಗ್ಮುಃ - ಹೊಂದಿದರು.

ತಾತ್ಪರ್ಯ. ಆ ಕಾಲಕ್ಕೆ ಸರಿಯಾಗಿ ರಾವಣನ ಬಾಧೆಯನ್ನು ತಾಳಲಾರದೆ ದೇವತೆಗಳು, ಸೆಕೆಯಿಂದ ಸಂಕಟಪಡುತ್ತಿರುವ ದಾರಿಹೋಕರು ತುಂಬ ನೆರಳಿರುವ ಮರದ ಬಳಿಗೆ ಬರುವಂತೆ, ವಿಷ್ಣುವಿನ ಬಳಿಗೆ ಬಂದರು.

ವಿಗ್ರಹವಾಕ್ಯಗಳು. ೧. ಪುಲಸ್ತ್ಯಸ್ಯ ಗೋತ್ರಾಪತ್ಯಂ ಪುಮಾನ್-ಪೌಲಸ್ತ್ಯಃ (ತ.ವೃ.); ತೇನ-ಪೌಲಸ್ತ್ಯೇನ; ಪೌಲಸ್ತ್ಯೇನ ಉಪಪ್ಲುತಾಃ- ಪೌಲಸ್ತ್ಯೋಪಪ್ಲುತಾಃ (ತೃ.ತ). ೨. ನಿದಾಘೇನ ಆರ್ತಾಃ-ನಿದಾಘಾರ್ತಾಃ (ತೃ.ತ.). ೩. ಛಾಯಾ ಪ್ರಧಾನಃ ವೃಕ್ಷಃ - ಛಾಯಾವೃಕ್ಷಃ (ಉ.ಮ.ಕ.); ತಂ-ಛಾಯಾವೃಕ್ಷಮ್.

ವ್ಯಾಕರಣವಿಶೇಷ. ಅಭಿಜಗ್ಮುಃ (೧೫)-ಗಮ್ಲ್ಗತೌ (ಗಮ್-ಹೋಗು) ಎಂಬ ೧ನೆ ಗಣದ ಧಾತುವಿಗೆ 'ಅಭಿ' ಎಂಬ ಉಪಸರ್ಗವು ಸೇರಿ ಸಮೀಪಿಸು ಎಂಬರ್ಥವಾಗಿದೆ; ಲಿಟ್,ಪ.ಪ್ರ.ಬ.

ವಿಶೇಷ. ೧. ಪುಲಸ್ತ್ಯನೆಂಬ ಋಷಿಯು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನು. ಇವನು ರಾವಣನೇ ಮೊದಲಾದ ರಾಕ್ಷಸರಿಗೆ ಮೂಲ ಪುರುಷನು. ರಾವಣನು ವಿಶ್ರವಸ್ಸು ಎಂಬಾತನಿಂದ ನಿಕಷಾ ಎಂಬ ಅವನ ಹೆಂಡತಿಯ

ಹೊಟ್ಟೆಯಲ್ಲಿ ಹುಟ್ಟಿದವನು. ೨. ರಾಮಾಯಣದಲ್ಲಿ ದೇವತೆಗಳು ಬ್ರಹ್ಮನಲ್ಲಿ ದೂರು ಹೇಳಿಕೊಂಡರೆಂದಿದೆ. ಕವಿಯು ಬೇರೆ ಯಾವದೋ ಪುರಾಣದ ಆಧಾರದಿಂದ ವಿಷ್ಣುವಿನಲ್ಲಿಗೇ ನೇರವಾಗಿ ಹೋದದ್ದಾಗಿ ಬರೆದಿರಬೇಕೆಂದು ತೋರುವದು.

ತೇ ಚ ಪ್ರಾಪುರುದನ್ವನ್ತಂ ಬುಬುಧೇ ಚಾದಿಪೂರುಷಃ ।
ಅವ್ಯಾಕ್ಷೇಪೋ ಭವಿಷ್ಯನ್ತ್ಯಾಃ ಕಾರ್ಯಸಿದ್ಧೇರ್ಹಿ ಲಕ್ಷಣಮ್ ॥೬॥

ಅನ್ವಯ. [ತೇ ಚ ಉದನ್ವನ್ತಂ ಪ್ರಾಪುಃ, ಆದಿಪೂರುಷಶ್ಚ ಬಬುಧೇ. ಅವ್ಯಾಕ್ಷೇಪಃ ಭವಿಷ್ಯನ್ತ್ಯಾಃ ಕಾರ್ಯಸಿದ್ಧೇಃ ಲಕ್ಷಣಂ ಹಿ. ]

ಅರ್ಥ. ತೇ ಚ-ಅವರೂ ಉದನ್ವನ್ತಂ-ಸಮುದ್ರವನ್ನು ಪ್ರಾಪುಃ-ಹೊಂದಿದರು, ಆದಿಪೂರುಷಶ್ಚ-ವಿಷ್ಣುವೂ ಸಹ ಬುಬುಧೇ-ಎಚ್ಚತ್ತನು. ಅವ್ಯಾಕ್ಷೇಪಃ-ಮತ್ತೊಂದರಲ್ಲಿ ಮನಸ್ಸುಹೋಗದೆ ಇರುವದು ಭವಿಷ್ಯನ್ತ್ಯಾಃ-ಮುಂದೆ ಆಗುವ ಕಾರ್ಯಸಿದ್ಧೇಃ -ಕೆಲಸದ ಕೈಗೂಡುವಿಕೆಗೆ ಲಕ್ಷಣಂ ಹಿ - ಗುರುತಷ್ಟೆ?

ತಾತ್ಪರ್ಯ. ದೇವತೆಗಳೂ ಕ್ಷೀರಸಮುದ್ರಕ್ಕೆ ಬಂದರು, ಅಷ್ಟು ಹೊತ್ತಿಗೆ ವಿಷ್ಣುವೂ ಯೋಗನಿದ್ರೆಯನ್ನು ಬಿಟ್ಟು ಎಚ್ಚತ್ತನು. ನಾವು ಯಾರಲ್ಲಿಗೆ ಹೋಗುವೆವೊ ಅವರು ಆಗ್ಗೆ ಬೇರೆ ಕೆಲಸದಲ್ಲಿ ತೊಡಗದೆ ಇರುವದೆಂಬುದು ಮುಂದೆ ನಮ್ಮ ಕಾರ್ಯವು ಸಿದ್ಧಿಯಾಗುವದೆಂಬುದಕ್ಕೆ ಗುರುತು.

ವಿಗ್ರಹವಾಕ್ಯಗಳು. ೧. ಉದಕಮಸ್ಯಾಸ್ತೀತಿ-(ಅಥವಾ ಉದಕಮಸ್ಮಿನ್ ಅಸ್ತೀತಿ) ಉದನ್ವಾನ್ (ತ.ವೃ.) ತಂ- ಉದನ್ವನತಮ್. ೨. ಆದಿಶ್ಚ ಅಸೌ ಪೂರುಷಶ್ಚ-ಆದಿಪೂರುಷಃ (ವಿ.ಪೂ.ಕ.). ೩. ನ ವ್ಯಾಕ್ಷೇಪಃ-ಅವ್ಯಾಕ್ಷೇಪಃ (ನ.ತ.) ೪. ಭವಿಷ್ಯತೀತಿ - ಭವಿಷ್ಯನ್ತೀ (ಕೃ.ವೃ.); ತಸ್ಯಾಃ ಭವಿಷ್ಯನ್ತ್ಯಾಃ ೫. ಕಾರ್ಯಸ್ಯ ಸಿದ್ಧಿಃ-ಕಾರ್ಯಸಿದ್ಧಿಃ (ಷ.ತ.); ತಸ್ಯಾಃ-ಕಾರ್ಯಸಿದ್ಧೇಃ.

ವ್ಯಾಕರಣವಿಶೇಷ. ೧. ಉದನ್ವಾನ್ -ಇಲ್ಲಿ ಉದಕ ಎಂಬ ಶಬ್ದಕ್ಕೆ ಉದನ್ ಎಂಬಾದೇಶ ಬಂದಿದೆ. ವಾನ್ ಹೆಚ್ಚಾಗಿ ಉಳ್ಳ ಎಂಬರ್ಥದಲ್ಲಿ ಮತುಪ್(ಮತ್) ಎಂಬ ಪ್ರತ್ಯಯ ಬಂದಿದೆ; ಮತ್ಪ್ರತ್ಯಯಕ್ಕೆ ವತ್ ಎಂಬ ಆದೇಶವಾಗಿದೆ. ಮಕಾರ ಅವರ್ಣಗಳು ಕೊನೆಯಲ್ಲಿ ಅಥವಾ ಉಪಾನ್ತ್ಯದಲ್ಲಿದ್ದರೆ ಮತ್ಪ್ರತ್ಯಯದ ಮಕಾರಕ್ಕೆ ವಕಾರವೂ ಆದೇಶವಾಗುವದು. ೨. ಪೂರುಷಃ, ಪುರುಷಃ-ಎರಡು ರೂಪಗಳೂ ಉಂಟು. ೩. ತೇ ಚ ಪ್ರಾಪುಃ, ಆದಿಪೂರುಷಶ್ಚ ಬುಬುಧೇ-ಎಂಬಲ್ಲಿ 'ಚ-ಚ' ಎಂಬ ಪ್ರಯೋಗವು 'ಬರುವದೂ ಎದ್ದನು' ಎಂದು ಸಮಕಾಲತ್ವವನ್ನು ತೋರಿಸುತ್ತದೆ.

ವಿಶೇಷ. ೧. ಆದಿಪೂರುಷನೆಂಬುದು ವಿಷ್ಣುವಿಗೆ ಸಂಕೇತವು. ಮಿಕ್ಕವರೆಲ್ಲ ಈಚೆಗೆ ಹುಟ್ಟಿದ ಪುರುಷರು, ಅವನೇ ಮೂಲಪುರುಷನು. ೨. ಈ ಶ್ಲೋಕದ

ಉತ್ತರಾರ್ಧವು ಸಂಭಾಷಣೆಯಲ್ಲಿ ಬಹಳವಾಗಿ ಬಳಕೆಯಲ್ಲಿರುವದು. ಹೊಗೆಯಿಂದ ಬೆಂಕಿಯನ್ನು ಊಹಿಸಬಹುದಾಗಿರುವಂತೆ ದೇವತೆಗಳು ಬರುತ್ತಲೂ ವಿಷ್ಣುವು ಎಚ್ಚತ್ತದ್ದರಿಂದ ಮುಂದೆ ಅವರ ಕಾರ್ಯವು ಬೇಗ ಆಗಬಹುದೆಂದು ಊಹಿಸಬಹುದೆಂಬ ಭಾವವನ್ನು ಈ ಶ್ಲೋಕಾರ್ಧದಲ್ಲಿ ಕವಿಯು ತೋರಿಸಿರುತ್ತಾನೆ.

ಭೋಗಿಭೋಗಾಸನಾಸೀನಂ ದದೃಶುಸ್ತಂ ದಿವೌಕಸಃ ।
ತತ್ಫಣಾಮಣ್ಡಲೋದರ್ಚಿರ್ಮಣಿದ್ಯೋತಿತವಿಗ್ರಹಮ್ ॥೭॥

ಅನ್ವಯ. [ದಿವೌಕಸಃ ಭೋಗಿಭೋಗಾಸನಾಸೀನಂ ತತ್ಫಣಾಮಣ್ಡಲೋದರ್ಚಿರ್ಮಣಿದ್ಯೋತಿತವಿಗ್ರಹಂ ತಂ ದದೃಶುಃ.]

ಅರ್ಥ. ದಿವೌಕಸಃ-ದೇವತೆಗಳು ಭೋಗಿಭೋಗಾಸನಾಸೀನಂ - (ಭೋಗಿ - ಹೆಡೆಯಹಾವಿನ ಭೋಗ - ಶರೀರವೆಂಬ ಆಸನ-ಆಸನದಲ್ಲಿ ಆಸೀನಂ - ಕುಳಿತಿರುವ) ಆದಿಶೇಷನ ಮೈಯೆಂಬ ಸಿಂಹಾಸನದಲ್ಲಿ ಕುಳಿತಿರುವ ತತ್ಫಣಾಮಣ್ಡಲೋದರ್ಚಿರ್ಮಣಿದ್ಯೋತಿತವಿಗ್ರಹಂ-(ತತ್-ಅದರ ಫಣಾಮಣ್ಡಲ-ಹೆಡೆಯ ಪ್ರದೇಶದಲ್ಲಿ ಉದರ್ಚಿಃ-ಮೇಲಕ್ಕೇಳುವ ಕಿರಣವುಳ್ಳ ಮಣಿ-ರತ್ನಗಳಿಂದ ದ್ಯೋತಿತ - ಬೆಳಗಿಸಲ್ಪಟ್ಟ ವಿಗ್ರಹಂ-ಶರೀರವುಳ್ಳ) ಆ ಶೇಷನ ಹೆಡೆಗಳಲ್ಲಿದ್ದ ರತ್ನದ ಕಿರಣಗಳಿಂದ ಹೊಳೆಯುವ ಶರೀರವುಳ್ಳ ತಂ-ಆತನನ್ನು ದದೃಶುಃ-ನೋಡಿದರು.

ವಿಗ್ರಹವಾಕ್ಯಗಳು. ೧. ದ್ಯೌಃ ಓಕಃ ಯೇಷಾಂ ತೇ-ದಿವೌಕಸಃ (ಇಲ್ಲದಿದ್ದರೆ ದಿವಂ ಓಕಃ ಯೇಷಾಂ ತೇ-ದಿವೌಕಸಃ)(ಷ.ಬ.). ೨. ಭೋಗಃ ಅಸ್ಯಾಸ್ತೀತಿ ಭೋಗೀ(ತ.ವೃ.); ತಸ್ಯ-ಭೋಗಿನಃ; ಭೋಗಿನಃ ಭೋಗಃ-ಭೋಗಿಭೋಗಃ(ಷ.ತ.); ಭೋಗಿಭೋಗ ಏವ ಆಸನಂ-ಭೋಗಿಭೋಗಾಸನಂ (ಅ. ಪೂ. ಕ.); ತಸ್ಮಿನ್-ಭೋಗಿಭೋಗಾಸನೇ; ಭೋಗಿಭೋಗಾಸನೇ ಆಸೀನಂ-ಭೋಗಿಭೋಗಾಸನಾಸೀನಂ(ಸ.ತ.) ೩. ತಸ್ಯ ಫಣಾಃ-ತತ್ಫಣಾಃ (ಷ.ತ.); ತತ್ಫಣಾನಾಂ ಮಣ್ಡಲಂ- ತತ್ಫಣಾಮಣ್ಡಲಂ (ಷ.ತ.); ತಸ್ಮಿನ್-ತತ್ಫಣಾಮಣ್ಡಲೇ; ಉದ್ಗತಾ ಅರ್ಚೀಂಷಿ ಯೇಷಾಂ ತೇ-ಉದರ್ಚಿಷಃ (ಪ್ರಾ.ಬ.); ತತ್ಫಣಾಮಣ್ಡಲೇ ಉದರ್ಚಿಷಃ- ತತ್ಫಣಾಮಣ್ಡಲೋದರ್ಚಿಷಃ (ಸ.ತ.); ತತ್ಫಣಾಮಣ್ಡಲೋದರ್ಚಿಷಶ್ಚ ತೇ ಮಣಯಶ್ಚ-ತತ್ಫಣಾಮಣ್ಡಲೋದರ್ಚಿರ್ಮಣಯಃ (ವಿ.ಪೂ.ಕ.); ತೈಃ-ತತ್ಫಣಾ... ಮಣಿಭಿಃ; ತತ್ಫಣಾಮಣ್ಡಲೋದರ್ಚಿರ್ಮಣಿಭಿಃ ದ್ಯೋತಿತಃ ತತ್ಫಣಾ ... ದ್ಯೋತಿತಃ (ತೃ.ತ.); ತತ್ಫಣಾಮಣ್ಡಲೋದರ್ಚಿರ್ಮಣಿದ್ಯೋತಿತಃ

ವಿಗ್ರಹಃ ಯಸ್ಯ ಸಃ - ತತ್ಫಣಾ... ವಿಗ್ರಹ; ತಂ ತತ್ಫಣಾಮಣ್ಡಲೋದರ್ಚಿರ್ಮಣಿದ್ಯೋತಿತವಿಗ್ರಹಮ್.

ವ್ಯಾಕರಣವಿಶೇಷ. ೧. ದಿವೌಕಸಃ- ದಿವ್‌ಶಬ್ದವನ್ನು ಅಥವಾ ದಿವಶಬ್ದವನ್ನು ಪೂರ್ವಪದವಾಗಿ ಇಟ್ಟುಕೊಂಡು ವಿಗ್ರಹಬಿಡಿಸಬೇಕು. ಈ ಶಬ್ದದ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ (ಪು. ೨೦೨); ಓಕಃ-ಇದು ಸಕಾರಾನ್ತನಪುಂಸಕ ೨. ತತ್ಫಣಾ... ವಿಗ್ರಹಂ-ಇಂಥ ದೊಡ್ಡ ಸಮಾಸವನ್ನು ಉಪಯೋಗಿಸುವದು ಕಾಳಿದಾಸಕಾವ್ಯದಲ್ಲಿ ಬಹುಕಡಿಮೆ. ಇಲ್ಲಿ ಅರ್ಚಿಸ್‌ಶಬ್ದವು ನಪುಂಸಕವಾದರೂ ತತ್ಫಣಾಮಣ್ಡಲೋದರ್ಚಿಸ್ ಶಬ್ದವು ಮಣಿಶಬ್ದಕ್ಕೆ ವಿಶೇಷಣವಾದ್ದರಿಂದ ಪುಲ್ಲಿಂಗವಾಗಿದೆ. ೩. ದದೃಶುಃ-(೧೯) ದೃಶಿರ್‌ಪ್ರೇಕ್ಷಣೇ (ದೃಶ್, ಪಶ್ಯ-ನೋಡು) ಎಂಬ ೪ನೆಯ ಗಣದ ಧಾತುವಿನ ಲಿಟ್. ಪ.ಪ್ರ.ಬ.

ವಿಶೇಷ. ನಾಗರಹಾವಿನ ಹೆಡೆಯ ಮೇಲೆ ಒಂದು ರತ್ನವಿರುವದೆಂದು ವರ್ಣಿಸುವದು ಕವಿಸಮಯವು; ವಿಷವು ಹೆಚ್ಚಾಗಿದ್ದಷ್ಟೂ ರತ್ನದ ಬೆಳಕು ಹೆಚ್ಚಾಗಿರುವದಂತೆ. ಆದಿಶೇಷನು ಸಾವಿರ ಹೆಡೆಗಳುಳ್ಳವನಾದ್ದರಿಂದ ಅವನ ಹೆಡೆಗಳ ಮೇಲೆ ಇರುವ ರತ್ನಗಳ ಹೊಳಪು ವಿಷ್ಣುವಿನ ಶರೀರವನ್ನೆಲ್ಲ ಬೆಳಗುತ್ತಿತ್ತೆಂದು ವರ್ಣಿಸಿದೆ.

ಶ್ರಿಯಃ ಪದ್ಮನಿಷಣ್ಣಾಯಾಃ ಕ್ಷೌಮಾನ್ತರಿತಮೇಖಲೇ ।
ಅಙ್ಕೇ ನಿಕ್ಷಿಪ್ತಚರಣಮಾಸ್ತೀರ್ಣಕರಪಲ್ಲವೇ ॥೮॥

ಅನ್ವಯ. [ಪದ್ಮನಿಷಣ್ಣಾಯಾಃ ಶ್ರಿಯಃ ಕ್ಷೌಮಾನ್ತರಿತಮೇಖಲೇ ಆಸ್ತೀರ್ಣಕರಪಲ್ಲವೇ ನಿಕ್ಷಿಪ್ತಚರಣಂ (ತಂ ದದೃಶುಃ).]

ಅರ್ಥ. ಪದ್ಮನಿಷಣ್ಣಾಯಾಃ-(ಪದ್ಮ-ಕಮಲದಲ್ಲಿ ನಿಷಣ್ಣಾಯಾಃ-ಕುಳಿತಿರುವ) ಕಮಲದ ಮೇಲೆ ಕುಳಿತಿರುವ ಶ್ರಿಯಃ-ಲಕ್ಷ್ಮಿಯ ಕ್ಷೌಮಾನ್ತರಿತಮೇಖಲೇ - (ಕ್ಷೌಮ-ಪಟ್ಟೆಯ ಸೀರೆಯಿಂದ ಅನ್ತರಿತ-ಮುಚ್ಚಲ್ಪಟ್ಟಿದ್ದ ಮೇಖಲೇ-ಒಡ್ಯಾಣವುಳ್ಳ) ಡಾಬಿನ ಮೇಲೆ ಪಟ್ಟೆಯ ಸೀರೆಯನ್ನು ಮುಚ್ಚಿರುವ ಆಸ್ತೀರ್ಣಕರಪಲ್ಲವೇ - (ಆಸ್ತೀರ್ಣ-ಬಿಚ್ಚಿರುವ ಕರಪಲ್ಲವೇ - ಚಿಗುರಿನಂತೆ ಇರುವ ಕೈಗಳುಳ್ಳ) ಮೃದುವಾದ ಕೈಗಳನ್ನು ಹರಡಿರುವ ಅಙ್ಕೇ-ತೊಡೆಯ ಮೇಲೆ ನಿಕ್ಷಿಪ್ತಚರಣಮ್-(ನಿಕ್ಷಿಪ್ತ - ಇಡಲ್ಪಟ್ಟ ಚರಣಂ-ಕಾಲುಗಳುಳ್ಳ) ಕಾಲುಗಳನ್ನಿಟ್ಟುಕೊಂಡಿರುವ (ತಂ-ಆತನನ್ನು ದದೃಶುಃ-ನೋಡಿದರು.)

ತಾತ್ಪರ್ಯ. ಲಕ್ಷ್ಮೀದೇವಿಯು ಆ ವಿಷ್ಣುವಿನ ಬಳಿಯಲ್ಲಿ ಕಮಲಾಸನದಲ್ಲಿ ಕುಳಿತಿದ್ದಳು. ತನ್ನ ಒಡ್ಯಾಣಕ್ಕೆ ಆತನ ಕೋಮಲವಾದ ಕಾಲುಗಳು ತಗುಲಿಯಾವೆಂದು ಅದರ ಮೇಲೆ ಪಟ್ಟೆಯ ಸೀರೆಯನ್ನು ಮುಸುಕಿಟ್ಟು ಅದರ ಮೇಲೆ

ಮೃದುವಾದ ತನ್ನ ಕೈಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ವಿಷ್ಣುವಿನ ಕಾಲುಗಳನ್ನು ಒತ್ತುತ್ತಿದ್ದಳು.

ವಿಗ್ರಹವಾಕ್ಯಗಳು. ೧. ಪದ್ಮೇ ನಿಷಣ್ಣಾ-ಪದ್ಮನಿಷಣ್ಣಾ (ಸ.ತ.); ತಸ್ಯಾಃ-ಪದ್ಮನಿಷಣ್ಣಾಯಾಃ. ೨. ಕ್ಷೌಮೇಣ ಅನ್ತರಿತಾ-ಕ್ಷೌಮಾನ್ತರಿತಾ (ತೃ.ತ.); ಕ್ಷೌಮಾನ್ತರಿತಾ ಮೇಖಲಾ ಯಸ್ಮಿನ್ ಸಃ-ಕ್ಷೌಮಾನ್ತರಿತಮೇಖಲಃ (ಸ.ಬ.); ತಸ್ಮಿನ್-ಕ್ಷೌಮಾನ್ತರಿತಮೇಖಲೇ. ೩. ನಿಕ್ಷಿಪ್ತೌ ಚರಣೌ ಯೇನ ಸಃ-ನಿಕ್ಷಿಪ್ತಚರಣಃ (ತೃ.ಬ.); ತಂ-ನಿಕ್ಷಿಪ್ತಚರಣಮ್. ೪. ಕರೌ ಪಲ್ಲವಾವಿವ-ಕರಪಲ್ಲವೌ (ಉ.ಉ.ಕ.); ಆಸ್ತೀರ್ಣೌ ಕರಪಲ್ಲವೌ ಯಸ್ಮಿನ್ ಸಃ-ಆಸ್ತೀರ್ಣಕರ ಪಲ್ಲವಃ (ಸ.ಬ.) ತಸ್ಮಿನ್-ಆಸ್ತೀರ್ಣಕರಪಲ್ಲವೇ.

ವ್ಯಾಕರಣವಿಶೇಷ. ೧. ಶ್ರಿಯಃ-ಈಕಾರಾನ್ತ ಸ್ತ್ರೀಲಿಂಗ; ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ (ಪು.೧೯೯)ನೋಡಿ. ೨. ಈ ಶ್ಲೋಕದಿಂದ ೧೪ನೆಯ ಶ್ಲೋಕದವರೆಗೂ ಇರುವ ದ್ವಿತೀಯೆಗಳು ವಿಷ್ಣುವಿನ ವಿಶೇಷಣಗಳು; ಅಲ್ಲಲ್ಲ 'ತಂ ದದೃಶುಃ' ಎಂಬ ಮಾತುಗಳನ್ನು ಸೇರಿಸಿಕೊಂಡು ಅರ್ಥಮಾಡಬೇಕಾಗುವದು.

ವಿಚಾರ. ೧. ಏಳನೆಯ ಶ್ಲೋಕದಿಂದ ಹದಿನಾಲ್ಕನೆಯ ಶ್ಲೋಕವು ಪೂರ್ತಿಯಾಗುವವರೆಗೆ ಒಂದೇ ವಾಕ್ಯವು. ಇದಕ್ಕೆ ಕುಲಕವೆನ್ನುತ್ತಾರೆ.

> ದ್ವಾಭ್ಯಾಂಯುಗ್ಮಮಿತಿಪ್ರೋಕ್ತಂ ತ್ರಿಭಿಃ ಶ್ಲೋಕೈರ್ವಿಶೇಷಕಮ್ ।
> ಕಲಾಪಕಂ ಚತುರ್ಭಿಃ ಸ್ಯಾತ್ ತದೂರ್ಧ್ವಂ ಕುಲಕಂ ಸ್ಮೃತಮ್ ॥

(ಎರಡು ಶ್ಲೋಕಗಳು ಸೇರಿ ಒಂದೇ ವಾಕ್ಯವಾದರೆ ಯುಗ್ಮವೆಂದು ಹೆಸರು; ಮೂರು ಸೇರಿದ್ದರೆ ವಿಶೇಷಕ; ನಾಲ್ಕು ಸೇರಿದ್ದರೆ ಕಲಾಪಕ; ನಾಲ್ಕಕ್ಕಿಂತ ಹೆಚ್ಚು ಶ್ಲೋಕಗಳು ಸೇರಿ ಒಂದು ವಾಕ್ಯವಾಗಿದ್ದರೆ ಕುಲಕವೆನಿಸುವದು.) ೨. ಈ ಕುಲಕವಾಕ್ಯದಲ್ಲಿ ವಿಷ್ಣುವಿನ ವರ್ಣನೆಯಿದೆ.

> ಪ್ರಬುದ್ಧಪುಣ್ಡರೀಕಾಕ್ಷಂ ಬಾಲಾತಪನಿಭಾಂಶುಕಮ್ ।
> ದಿವಸಂ ಶಾರದಮಿವ ಪ್ರಾರಮ್ಭಸುಖದರ್ಶನಮ್ ॥೯॥

ಅನ್ವಯ. [ಪ್ರಬುದ್ಧಪುಣ್ಡರೀಕಾಕ್ಷಂ ಬಾಲಾತಪನಿಭಾಂಶುಕಂ ಪ್ರಾರಮ್ಭ ಸುಖದರ್ಶನಂ ಶಾರದಂ ದಿವಸಂ ಇವ (ಸ್ಥಿತಂ ತಂ ದದೃಶುಃ)]

ಅರ್ಥ. ಪ್ರಬುದ್ಧಪುಣ್ಡರೀಕಾಕ್ಷಂ- (ಪ್ರಬುದ್ಧ-ಅರಳಿದ ಪುಂಡರೀಕ-ಕೆಂದಾವರೆಯಂತೆ ಅಕ್ಷಂ-ಕಣ್ಣುಗಳುಳ್ಳ) ಅರಳಿದ ಕೆಂದಾವರೆಯಂಥ ಕಣ್ಣುಗಳುಳ್ಳವನಾಗಿಯೂ ಬಾಲಾತಪನಿಭಾಂಶುಕಂ-(ಬಾಲಾತಪ- ಎಳೆಬಿಸಿಲಿಗೆ ನಿಭಂ-ಸಮವಾದ

ಅಂಶುಕಂ-ವಸ್ತ್ರವುಳ್ಳ) ಮುಂಬಿಸಿಲಿನ ಬಣ್ಣದ ವಸ್ತ್ರವನ್ನು ಧರಿಸಿರುವವನಾಗಿಯೂ ಪ್ರಾರಂಭಸುಖದರ್ಶನಂ- (ಪ್ರಾರಮ್ಭ-ಯೋಗಿಗಳಿಗೆ ಸುಖ- ಸುಲಭವಾದ ದರ್ಶನಂ-ದರ್ಶನವುಳ್ಳ) ಯೋಗಿಗಳಿಗೆ ಸುಲಭವಾಗಿ ಗೋಚರನಾಗುವವನಾಗಿಯೂ ಶಾರದಂ-ಶರದೃತುವಿನ ದಿವಸಮಿವ-ಹಗಲಿನಂತೆ ಇದ್ದ (ತಂ- ಆತನನ್ನು ದದೃಶುಃ-ಕಂಡರು.)

ತಾತ್ಪರ್ಯ. ವಿಷ್ಣುವು ಅರಳಿದ ಕೆಂದಾವರೆಯಂತಿದ್ದ ತನ್ನ ಕಣ್ಣುಗಳಿಂದ ನೋಡುತ್ತಿದ್ದನು, ಪೀತಾಂಬರವನ್ನು ಉಟ್ಟಿದ್ದನು, ಯೋಗಿಗಳಿಗೆ ಸುಲಭವಾಗಿ ಗೋಚರನಾಗುವನಾದ ಆತನು ಶರತ್ಕಾಲದ ಹಗಲಿನಂತೆ ಒಪ್ಪುತ್ತಿದ್ದನು.

ವಿಗ್ರಹವಾಕ್ಯಗಳು. ಇಲ್ಲಿರುವ ವಿಶೇಷಣಗಳು ವಿಷ್ಣುವಿಗೇ ಅಲ್ಲದೆ ಶರತ್ಕಾಲದ ಹಗಲಿಗೂ ಹೊಂದುವಂತಿವೆ. ಆದ್ದರಿಂದ ಇವಕ್ಕೆ ಎರಡು ಬಗೆಯ ಅರ್ಥಗಳಾಗುತ್ತವೆ; ಎರಡು ಬಗೆಯ ವಿಗ್ರಹಗಳಾಗುತ್ತವೆ. ಮೊದಲು ವಿಷ್ಣುವಿನ ಪರವಾಗಿಯೂ ಆಮೇಲೆ ಶರದ್ದಿನದ ಪರವಾಗಿಯೂ ವಿಗ್ರಹವಾಕ್ಯವನ್ನು ಬರೆದಿರುತ್ತದೆ. ೧. ಪ್ರಬುದ್ಧೇ ಚ ತೇ ಪುಣ್ಡರೀಕೇ-ಪ್ರಬುದ್ಧಪುಣ್ಡರೀಕೇ (ವಿ.ಪೂ.ಕ.); ಪ್ರಬುದ್ಧಪುಣ್ಡರೀಕೇ ಇವ ಅಕ್ಷಿಣೀ ಯಸ್ಯ ಸಃ-ಪ್ರಬುದ್ಧಪುಣ್ಡರೀಕಾಕ್ಷಃ (ಉ.ಬ.); ತಂ- ಪ್ರಬುದ್ಧಪುಣ್ಡರೀಕಾಕ್ಷಮ್. ೨. ಬಾಲಶ್ಚ ಅಸೌ ಆತಪಶ್ಚ ಬಾಲಾತಪಃ (ವಿ.ಪೂ.ಕ); ತೇನ-ಬಾಲಾತಪೇನ; ಬಾಲಾತಪೇನ ನಿಭಮ್-ಬಾಲಾತಪನಿಭಮ್ (ತೃ.ತ.) ತೇನ ಬಾಲಾತಪನಿಭೆನ ; ಬಾಲತಪನಿಭಮ್ ಅಂಶುಕಂ ಯಸ್ಯ ಸಃ-ಬಾಲಾತಪನಿಭಾಂಶುಕಃ (ಷ.ಬ.); ತಂ-ಬಾಲಾತಪನಿಭಾಂಶುಕಮ್. ೩.ಪ್ರಕೃಷ್ಟಃ ಆರಮ್ಭಃ ಯೇಷಾಂ ತೇ-ಪ್ರಾರಮ್ಭಾಃ (ಪ್ರಾ.ಬ.); ತೇಷಾಂ-ಪ್ರಾರಮ್ಭಾನಾಂ; ಸುಖಂ ದರ್ಶನಂ ಯಸ್ಯ ಸಃ-ಸುಖದರ್ಶನಃ (ಷ.ಬ.) ಪ್ರಾರಮ್ಭಾನಾಂ ಸುಖದರ್ಶನಃ-ಪ್ರಾರಮ್ಭಸುಖದರ್ಶನಃ (ಷ.ತ.); ತಂ-ಪ್ರಾರಮ್ಭರಾಸುಖದರ್ಶನಮ್. ಇವಿಷ್ಟೂ ವಿಷ್ಣುವಿನ ಪರವಾಗಿರುವ ವಿಶೇಷಣಗಳ ವಿಗ್ರಹ [೧. ಪ್ರಬುದ್ಧಂ ಚ ತತ್ ಪುಣ್ಡರೀಕಂ ಚ ಪ್ರಬುದ್ಧಪುಣ್ಡರೀಕಂ (ವಿ.ಪೂ.ಕ.); ಪ್ರಬುದ್ಧಪುಣ್ಡರೀಕಮೇವ ಅಕ್ಷಿ ಯಸ್ಯ ಸಃ-ಪ್ರಬುದ್ಧಪುಣ್ಡರೀಕಾಕ್ಷಃ (ಷ.ಬ.); ತಂ - ಪ್ರಬುದ್ಧಪುಣ್ಡರೀಕಾಕ್ಷಮ್ (ಅರಳಿದ ಕಮಲವೆಂಬ ಕಣ್ಣುಳ್ಳ). ೨. ಬಾಲಶ್ಚಾಸೌ ಆತಪಶ್ಚ-ಬಾಲಾತಪಃ (ವಿ.ಪೂ.ಕ.); ಬಾಲಾತಪಸ್ಯ ನಿಭಃ-ಬಾಲಾತಪನಿಭಃ (ಷ.ತ.); ಬಾಲಾತಪನಿಭಃ ಅಂಶುಕಃ ಯಸ್ಯ ಸಃ-ಬಾಲಾತಪನಿಭಾಂಶುಕಃ(ಷ.ಬ.) (ಮುಂಬಿಸಿಲಿನ ನೆಪದಿಂದ ವಸ್ತ್ರವನ್ನು ಧರಿಸಿರುವ) ೩. ಸುಖಂ ದರ್ಶನಂ ಯಸ್ಯ ಸಃ - ಸುಖದರ್ಶನಃ (ಷ.ಬ.); ಪ್ರಾರಮ್ಭೇ ಸುಖದರ್ಶನಃ-ಪ್ರಾರಮ್ಭಸುಖದರ್ಶನಃ (ಸ.ಬ). (ಮೊದಲಭಾಗದಲ್ಲಿ ಸುಖವಾಗಿ ಕಾಣುವ)-ಇವು ಶರತ್ಕಾಲದ ಹಗಲಿನ ಪರವಾಗಿ

ರುವ ವಿಶೇಷಣಗಳ ವಿಗ್ರಹ.] ೪. ಶರದಃ ಅಯಂ-ಶಾರದಃ (ತ.ವೃ.); ತಂ - ಶಾರದವ್.

ವಿಚಾರ. ಕವಿಯು ಮೂರು ವಿಶೇಷಣಗಳನ್ನು ಶರದ್ದಿನಕ್ಕೂ ವಿಷ್ಣುವಿಗೂ ಸಮವಾಗಿ ಉಪಯೋಗಿಸಿರುತ್ತಾನಾದರೂ ಇವೆರಡಕ್ಕೂ ಬೇರೆ ಬೇರೆ ಅರ್ಥವಿದೆ. ಆದ್ದರಿಂದ ಶರದ್ದಿನದಂತೆ ಎಂದು ಹೋಲಿಸಿರುವದು ಶ್ಲೇಷದಿಂದಾದದ್ದು.

ಪ್ರಭಾನುಲಿಪ್ತಶ್ರೀವತ್ಸಂ ಲಕ್ಷ್ಮೀವಿಭ್ರಮದರ್ಪಣಮ್ ।
ಕೌಸ್ತುಭಾಖ್ಯಮಪಾಂ ಸಾರಂ ಬಿಭ್ರಾಣಂ ಬೃಹತೋರಸಾ ॥೧೦॥

ಅನ್ವಯ. [ಪ್ರಭಾನುಲಿಪ್ತಶ್ರೀವತ್ಸಂ ಲಕ್ಷ್ಮೀವಿಭ್ರಮದರ್ಪಣಂ ಕೌಸ್ತುಭಾಖ್ಯಂ ಅಪಾಂ ಸಾರಂ ಬೃಹತಾ ಉರಸಾ ಬಿಭ್ರಾಣಂ(ತಂ ದದೃಶುಃ). ]

ಅರ್ಥ. ಪ್ರಭಾನುಲಿಪ್ತಶ್ರೀವತ್ಸಂ-(ಪ್ರಭಾ-ಕಾಂತಿಯಿಂದ ಅನುಲಿಪ್ತ - ಬಳಿಯಲ್ಪಟ್ಟ ಶ್ರೀವತ್ಸಂ-ಶ್ರೀವತ್ಸವುಳ್ಳ) ತನ್ನ ಕಾಂತಿಯಿಂದ ಶ್ರೀವತ್ಸವನ್ನು ಬೆಳಗುತ್ತಿರುವದಾಗಿಯೂ ಲಕ್ಷ್ಮೀವಿಭ್ರಮದರ್ಪಣಂ-(ಲಕ್ಷ್ಮೀ-ಲಕ್ಷ್ಮಿಯ ವಿಭ್ರಮ-ವಿಲಾಸದ ದರ್ಪಣಂ-ಕನ್ನಡಿಯಾಗಿರುವ) ಲಕ್ಷ್ಮಿಯು ಆಟಕ್ಕಾಗಿ ಉಪಯೋಗಿಸುವ ಕನ್ನಡಿಯಾಗಿಯೂ ಇರುವ ಕೌಸ್ತುಭಾಖ್ಯಂ-ಕೌಸ್ತುಭವೆಂಬ ಹೆಸರುಳ್ಳ ಅಪಾಂ-ನೀರುಗಳ ಸಾರಂ-ಗಟ್ಟಿಯನ್ನು ಬೃಹತಾ-ದೊಡ್ಡದಾದ ಉರಸಾ-ಎದೆಯಿಂದ ಬಿಭ್ರಾಣಂ - ತೊಟ್ಟಿರುವ (ತಂ-ಆತನನ್ನು ದದೃಶುಃ- ನೋಡಿದರು.)

ತಾತ್ಪರ್ಯ. ವಿಷ್ಣುವು ತನ್ನ ವಿಶಾಲವಾದ ಎದೆಯಲ್ಲಿ ಹಾಕಿಕೊಂಡಿದ್ದ ಕೌಸ್ತುಭಮಣಿಯು ಶ್ರೀವತ್ಸವೆಂಬ ಮಚ್ಚೆಯನ್ನು ಚೆನ್ನಾಗಿ ಬೆಳಗುತ್ತಲಿತ್ತು; ಅದು ಲಕ್ಷ್ಮೀದೇವಿಯು ಮುಖವನ್ನು ನೋಡಿಕೊಳ್ಳುವ ವಿಲಾಸದ ಕನ್ನಡಿಯೋ ಎಂಬಂತಿತ್ತು.

ವಿಗ್ರಹವಾಕ್ಯಗಳು. ೧. ಪ್ರಭಯಾ ಅನುಲಿಪ್ತಃ-ಪ್ರಭಾನುಲಿಪ್ತಃ(ತೃ.ತ.); ಪ್ರಭಾನುಲಿಪ್ತಃ ಶ್ರೀವತ್ಸಃ ಯೇನ ಸಃ-ಪ್ರಭಾನುಲಿಪ್ತಶ್ರೀವತ್ಸಃ (ತೃ.ಬ.); ತಂ-ಪ್ರಭಾನುಲಿಪ್ತಶ್ರೀವತ್ಸಂ. ೨.ವಿಭ್ರಮಸ್ಯ ದರ್ಪಣಂ - ವಿಭ್ರಮದರ್ಪಣಂ (ಷ.ತ.). ಲಕ್ಷ್ಮ್ಯಾಃ ವಿಭ್ರಮದರ್ಪಣಂ-ಲಕ್ಷ್ಮೀವಿಭ್ರಮದರ್ಪಣಂ (ಷ.ತ.). ೩. ಕೌಸ್ತುಭ ಇತಿ ಆಖ್ಯಾ ಯಸ್ಯ ಸಃ-ಕೌಸ್ತುಭಾಖ್ಯಃ (ಷ.ಬ.); ತಂ-ಕೌಸ್ತುಭಾಖ್ಯಮ್. ೪.ಬಿಭರ್ತೀತಿ ಬಿಭ್ರಾಣಃ (ಕೃ.ವೃ.); ತಂ-ಬಿಭ್ರಾಣಮ್.

ವ್ಯಾಕರಣವಿಶೇಷ. ೧. 'ಪ್ರಭಾನುಲಿಪ್ತಶ್ರೀವತ್ಸಂ'-ಮುಂತಾದ ದ್ವಿತೀಯೆಗಳು 'ಸಾರಂ'ಎಂಬುದಕ್ಕೆ ವಿಶೇಷಣಗಳಾದ್ದರಿಂದ ಪುಲ್ಲಿಂಗ. ೨. ಅಪಾಂ-ಷ.ಸ್ತ್ರೀ. ನಿತ್ಯಬಹುವಚನ. ೩.ಬೃಹತಾ-ತಕಾರಾಂತ ನ

ಪುಂಸಕ; (ಬೃಹತ್.ಬೃಹತೀ, ಬೃಹನ್ತಿ.) ೪. ಉರಸಾ-ಸಕಾರಾಂತ ನಪುಂಸಕ; (ಉರಃ, ಉರಸೀ, ಉರಾಂಸಿ.)

ವಿಚಾರ. ೧. ಶ್ರೀವತ್ಸವೆಂಬುದು ವಿಷ್ಣುವಿನ ಎದೆಯ ಮೇಲಿರುವ ಒಂದಾನೊಂದು ಮಚ್ಚೆ. ದೇವತೆಗಳಲ್ಲಿ ಯಾರು ಶ್ರೇಷ್ಠರೆಂದು ನಿರ್ಣಯಿಸಬೇಕೆಂಬ ಋಷಿಗಳ ಅನುಜ್ಞೆಯಿಂದ ಭೃಗುಋಷಿಯು ವಿಷ್ಣುವಿನ ಎದೆಯನ್ನು ಒದ್ದನೆಂದೂ ವಿಷ್ಣುವು ಕೂಡಲೇ ಎದ್ದು ವಿನಯದಿಂದ ಅವನ ಪಾದಸೇವೆಯನ್ನು ಮಾಡಿದ್ದಲ್ಲದೆ, 'ತಮ್ಮ ಹೆಜ್ಜೆಯ ಗುರುತು ನನ್ನ ಎದೆಯ ಮೇಲೆ ಯಾವಾಗಲೂ ಇರಲಿ' ಎಂದು ಹೇಳಿದನೆಂದೂ ಭಾಗವತ (೧೦-೮೯-೧೨ರಿಂದ೧೨)ದಲ್ಲಿ ಹೇಳಿದೆ. ಶಿವನ ಶೂಲದ ಗುರುತು ತಪಸ್ಸುಮಾಡುತ್ತಿದ್ದ ನಾರಾಯಣನ ಎದೆಯ ಮೇಲೆ ಆಯಿತೆಂದೂ ಅದಕ್ಕೆ ಶ್ರೀವತ್ಸವೆಂತ ಹೆಸರೆಂದೂ ಭಾರತದ ಶಾಂತಿಪರ್ವದಲ್ಲಿದೆ. ೨.ಕೌಸ್ತುಭವೆಂಬುದು ಕ್ಷೀರಸಾಗರದಲ್ಲಿ ಹುಟ್ಟಿದ ರತ್ನವು; ಇನೆಯ ಶ್ಲೋಕದ ವಿಚಾರವನ್ನು (ಪು.೧೧೧) ನೋಡಿ.

> ಬಾಹುಭಿರ್ವಿಟಪಾಕಾರೈರ್ದಿವ್ಯಾಭರಣಭೂಷಿತೈಃ ।
> ಆವಿರ್ಭೂತಮಪಾಂ ಮಧ್ಯೇ ಪಾರಿಜಾತಮಿವಾಪರಮ್ ॥೧೧॥

ಅನ್ವಯ. [ವಿಟಪಾಕಾರೈಃ ದಿವ್ಯಾಭರಣಭೂಷಿತೈಃ ಬಾಹುಭಿಃ ಅಪಾಂ ಮಧ್ಯೇ ಆವಿರ್ಭೂತಂ ಅಪರಂ ಪಾರಿಜಾತಂ ಇವ (ಸ್ಥಿತಂ ತಂ ದದೃಶುಃ)]

ಅರ್ಥ. ವಿಟಪಾಕಾರೈಃ -(ವಿಟಪ-ಕೊಂಬೆಗಳ ಆಕಾರೈಃ-ಆಕಾರವುಳ್ಳ) ಕೊಂಬೆಗಳಂತಿರುವ ದಿವ್ಯಾಭರಣಭೂಷಿತೈಃ - (ದಿವ್ಯ-ಸ್ವರ್ಗದ ಆಭರಣ - ಒಡವೆಗಳಿಂದ ಭೂಷಿತೈಃ-ಅಲಂಕರಿಸಲ್ಪಟ್ಟಿರುವ) ಸ್ವರ್ಗಲೋಕದ ಒಡವೆಗಳಿಂದ ಒಪ್ಪುವ ಬಾಹುಭಿಃ- ಭುಜಗಳಿಂದ ಅಪಾಂ-ನೀರುಗಳ ಮಧ್ಯೇ-ನಡುವೆ ಆವಿರ್ಭೂತಂ-ತೋರಿಕೊಂಡಿರುವ ಅಪರಂ-ಮತ್ತೊಂದು ಪಾರಿಜಾತಮಿವ - ಪಾರಿಜಾತದ ಹಾಗೆ (ಸ್ಥಿತಂ-ಇರುವ ತಂ-ಆತನನ್ನು ದದೃಶುಃ-ಕಂಡರು.)

ತಾತ್ಪರ್ಯ. ದಿವ್ಯವಾದ ಒಡವೆಗಳಿಂದ ಒಪ್ಪುತ್ತಿದ್ದ ನಾಲ್ಕು ಭುಜಗಳಿಂದ ಕೂಡಿದ್ದ ವಿಷ್ಣುವು ಸಮುದ್ರದಿಂದ ಹುಟ್ಟಿದ ಮತ್ತೊಂದು ಪಾರಿಜಾತವೊ ಎಂಬಂತೆ ಇದ್ದನು.

ವಿಗ್ರಹವಾಕ್ಯಗಳು. ೧. ವಿಟಪಾನಾಂ ಆಕಾರ ಇವ ಆಕಾರಃ ಯೇಷಾಂ ತೇ - ವಿಟಪಾಕಾರಾಃ (ಉ.ಬ.); ತೈಃ-ವಿಟಪಾಕಾರೈಃ ೨. ದಿವಿ ಭವಾನಿ-ದಿವ್ಯಾನಿ (ತ.ವೃ); ದಿವ್ಯಾನಿ ಚ ತಾನಿ ಆಭರಣಾನಿ ಚ-ದಿವ್ಯಾಭರಣಾನಿ (ವಿ.ಪೂ.ಕ.); ತೈಃ - ದಿವ್ಯಾಭರಣೈಃ; ದಿವ್ಯಾಭರಣೈಃ ಭೂಷಿತಾಃ-ದಿವ್ಯಾಭರಣಭೂಷಿತಾಃ (ತೃ.ತ.);

ತೈಃ-ದಿವ್ಯಾಭರಣಭೂಷಿತೈಃ.

ವ್ಯಾಕರಣವಿಶೇಷ. ೧. ವಿಟಪಾಕಾರೈಃ-ಇಲ್ಲಿ ಪೂರ್ವಪದಕ್ಕೆ ಸೇರಿದ ಆಕಾರವೆಂಬ ಮಾತು ಲೋಪವಾಗಿದೆ; ೧ನೆಯ ಶ್ಲೋಕದ ೩ನೆಯ ಟಿಪ್ಪಣಿಯನ್ನು (ಪು.೧೦೮) ನೋಡಿ.

ವಿಚಾರ. ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ-ಇವು ಐದೂ ದೇವಲೋಕದಲ್ಲಿರುವ ವೃಕ್ಷಗಳು. ಇವುಗಳಲ್ಲಿ ಪಾರಿಜಾತವೇ ಎಲ್ಲಕ್ಕೂ ಹೆಚ್ಚಿನದು. (೬ನೆಯ ಸರ್ಗದ ೬ನೆಯ ಶ್ಲೋಕವನ್ನು ನೋಡಿ). ಪಾರಿಜಾತವೂ ಸಮುದ್ರಮಥನ ಕಾಲದಲ್ಲಿ ಹುಟ್ಟಿತು. ಪಾರಿಜಾತಕ್ಕೆ ಅನೇಕ ಕೊಂಬೆಗಳಿವೆ, ಸುವಾಸನೆಯ ಅನೇಕ ಪುಷ್ಪಗಳಿವೆ, ಅದು ಕೇಳಿದ್ದನ್ನು ಕೊಡುವದು; ವಿಷ್ಣುವಿಗೆ ನಾಲ್ಕು ಕೈಗಳು, ಅನೇಕ ದಿವ್ಯಾಭರಣಗಳಿವೆ, ಭಕ್ತರು ಕೇಳಿದ್ದನ್ನು ಕೊಡುವನು - ಎಂಬುದನ್ನು ತಿಳಿಸುವದಕ್ಕೆ ಕವಿಯು ಈ ಹೋಲಿಕೆಯನ್ನು ಕೊಟ್ಟಿರುತ್ತಾನೆ.

ದೈತ್ಯಸ್ತ್ರೀಗಣ್ಡಲೇಖಾನಾಂ ಮದರಾಗವಿಲೋಪಿಭಿಃ ।
ಹೇತಿಭಿಶ್ಚೇತನಾವದ್ಭಿರುದೀರಿತಜಯಸ್ವನಮ್ ॥೧೨॥

ಅನ್ವಯ. [ದೈತ್ಯಸ್ತ್ರೀಗಣ್ಡಲೇಖಾನಾಂ ಮದರಾಗವಿಲೋಪಿಭಿಃ ಚೇತನಾವದ್ಭಿಃ ಹೇತಿಭಿಃ ಉದೀರಿತಜಯಸ್ವನಂ (ತಂ ದದೃಶುಃ).]

ಅರ್ಥ. ದೈತ್ಯಸ್ತ್ರೀಗಣ್ಡಲೇಖಾನಾಂ-(ದೈತ್ಯ-ರಾಕ್ಷಸರ ಸ್ತ್ರೀ - ಹೆಂಗಸರ ಗಣ್ಡಲೇಖಾನಾಂ-ಕಪೋಲಸ್ಥಲಗಳ) ಅಸುರರ ಹೆಂಡಂದಿರ ಕೆನ್ನೆಯ ಮೇಲಿನ ಮದರಾಗವಿಲೋಪಿಭಿಃ - (ಮದರಾಗ- ಮದದಿಂದಾಗಿರುವ ಕೆಂಪನ್ನು ವಿಲೋಪಿಭಿಃ -ನಾಶಗೊಳಿಸುವ) ಮದ್ಯಮದದಿಂದಾಗಿರುವ ಕೆಂಪನ್ನು ಹೋಗಲಾಡಿಸುವಸ್ವಭಾವವುಳ್ಳ ಚೇತನಾವದ್ಭಿಃ-ಜೀವವುಳ್ಳ ಹೇತಿಭಿಃ-ಆಯುಧಗಳಿಂದ ಉದೀರಿತಜಯಸ್ವನಂ -ಹೇಳಲ್ಪಟ್ಟ ಜಯಧ್ವನಿಯುಳ್ಳ (ತಂ-ಆತನನ್ನು ದದೃಶುಃ-ಕಂಡರು.)

ತಾತ್ಪರ್ಯ. ದೈತ್ಯರನ್ನು ಕೊಂದು, ದೈತ್ಯಸ್ತ್ರೀಯರ ಕೆನ್ನೆಯ ಮೇಲಣ ಕೆಂಪನ್ನು ಇಳಿಸುವ ಶಕ್ತಿಯುಳ್ಳ ಸುದರ್ಶನವೇ ಮುಂತಾದ ಆಯುಧಗಳು ಸಜೀವವಾಗಿ ನಿಂತು ವಿಷ್ಣುವನ್ನೆ ಜಯಶಬ್ದಪೂರ್ವಕವಾಗಿ ಸೇವಿಸುತ್ತಿದ್ದವು.

ವಿಗ್ರಹವಾಕ್ಯಗಳು. ೧. ದೈತ್ಯಾನಾಂ ಸ್ತ್ರಿಯಃ-ದೈತ್ಯಸ್ತ್ರಿಯಃ (ಷ.ತ); ತೇಷಾಂ - ದೈತ್ಯಸ್ತ್ರೀಣಾಂ ಗಣ್ಡಾನ್ ಲಿಖನ್ತೀತಿ-ಗಣ್ಡಲೇಖಾಃ (ಉಪ.ಸ.) ದೈತ್ಯಸ್ತ್ರೀಣಾಂ ಗಣ್ಡಲೇಖಾಃ-ದೈತ್ಯಸ್ತ್ರೀಗಣ್ಡಲೇಖಾಃ (ಷ.ತ.); ತಾಸಾಂ - ದೈತ್ಯಸ್ತ್ರೀಗಣ್ಡಲೇಖಾನಾಮ್. ೨. ಮದಸ್ಯರಾಗಃ-ಮದರಾಗಃ (ಷ.ತ.); ತಂ-ಮದರಾಗಂ;

ಮದರಾಗಂ ವಿಲುಮ್ಪನ್ತೀತಿ-ಮದರಾಗವಿಲೋಪಿನಃ (ಉ.ಸ.); ತೈಃ-ಮದರಾಗ ವಿಲೋಪಿಭಿಃ ೩. ಚೇತನಾ ಏಷಾಂ ಅಸ್ತೀತಿ-ಚೇತನಾವನ್ತಃ (ತ.ವೃ.); ತೈಃ-ಚೇತನಾವದ್ಭಿಃ ೪. ಜಯ ಇತಿ ಸ್ವನಃ-ಜಯಸ್ವನಃ (ಸಂ.ಪೂ.ಕ.); ಉದೀರಿತಃ ಜಯಸ್ವನಃ ಯಸ್ಯ ಸಃ - ಉದೀರಿತಜಯಸ್ವನಃ (ಷ.ಬ.).

ವ್ಯಾಕರಣವಿಶೇಷ. ಉದೀರಿತಜಯಸ್ವನಂ-'ಉದೀರಿತಃ ಜಯಸ್ವನಃ ಯೇನ ಸಃ' ಎಂದು ವಿಗ್ರಹಮಾಡಕೂಡದು; ಆಗ ವಿಷ್ಣುವೇ ಜಯಶಬ್ದವನ್ನು ಹೇಳುತ್ತಿದ್ದನೆಂದು ಅಪಾರ್ಥವಾಗುವದು.

ವಿಚಾರ. ವಿಷ್ಣುವಿನ ಚಕ್ರಕ್ಕೆ ಸುದರ್ಶನವೆಂದೂ ಶಂಖಕ್ಕೆ ಪಾಂಚಜನ್ಯ ವೆಂದೂ ಗದೆಗೆ ಕೌಮೋದಕಿಯೆಂದೂ ಕತ್ತಿಗೆ ನಂದಕವೆಂದೂ ಧನುಸ್ಸಿಗೆ ಶಾರ್ಙ್ಗ ವೆಂದೂ ಹೆಸರು. ಈ ಆಯುಧಗಳ ಅಭಿಮಾನದೇವತೆಗಳೇ ತಮ್ಮೊಡೆಯನನ್ನು ಜಯಜಯವೆಂದು ಹೊಗಳುತ್ತಿದ್ದರೆಂದು ಕವಿಯು ವರ್ಣಿಸಿರುತ್ತಾನೆ.

ಮುಕ್ತಶೇಷವಿರೋಧೇನ ಕುಲಿಶವ್ರಣಲಕ್ಷ್ಮಣಾ ।
ಉಪಸ್ಥಿತಂ ಪ್ರಾಞ್ಜಲಿನಾ ವಿನೀತೇನ ಗರುತ್ಮತಾ ॥೧೩॥

ಅನ್ವಯ. [ಮುಕ್ತಶೇಷವಿರೋಧೇನ ಕುಲಿಶವ್ರಣಲಕ್ಷ್ಮಣಾ ಪ್ರಾಞ್ಜಲಿನಾ ವಿನೀತೇನ ಗರುತ್ಮತಾ ಉಪಸ್ಥಿತಂ (ತಂ ದದೃಶುಃ)]

ಅರ್ಥ. ಮುಕ್ತಶೇಷವಿರೋಧೇನ-(ಮುಕ್ತ-ಬಿಡಲ್ಪಟ್ಟ ಶೇಷ-ಶೇಷನ ವಿರೋಧೇನ-ವಿರೋಧವುಳ್ಳ) ಆದಿಶೇಷನಿಗೂ ತನಗೂ ಇದ್ದ ಹಗೆತನವನ್ನು ಬಿಟ್ಟಿರುವನಾಗಿಯೂ ಕುಲಿಶವ್ರಣಲಕ್ಷ್ಮಣಾ-(ಕುಲಿಶ-ವಜ್ರದಿಂದಾದ ವ್ರಣ-ಗಾಯವೆಂಬ ಲಕ್ಷ್ಮಣಾ-ಗುರುತುಳ್ಳ) ವಜ್ರಾಯುಧದಿಂದಾಗಿರುವ ಗಾಯದ ಗುರುತುಗಳುಳ್ಳವನಾಗಿಯೂ ಪ್ರಾಞ್ಜಲಿನಾ ಕೈಮುಗಿದುಕೊಂಡಿರುವನಾಗಿಯೂ ವಿನೀತೇನ-ವಿನಯವುಳ್ಳವನಾಗಿಯೂ ಇರುವ ಗರುತ್ಮತಾ-ಗರುಡನಿಂದ ಉಪಸ್ಥಿತಂ-ಸೇವಿತನಾಗಿದ್ದ (ತಂ-ಆತನನ್ನು ದದೃಶುಃ-ಕಂಡರು.)

ತಾತ್ಪರ್ಯ. ಗರುಡನು ತನ್ನ ಹಗೆಯಾದ ಆದಿಶೇಷನಲ್ಲಿ ಕೂಡ ವೈರವನ್ನು ಬಿಟ್ಟು ವಿನಯದಿಂದ ಕೈಮುಗಿದುಕೊಂಡು ವಿಷ್ಣುವನ್ನು ಸೇವಿಸುತ್ತಿದ್ದನು. ಅಮೃತವನ್ನು ತಂದಾಗ ಇಂದ್ರಾಯುಧದಿಂದಾಗಿದ್ದ ಪೆಟ್ಟುಗಳ ಗುರುತುಗಳು ಅವನ ಮೈ ಮೇಲೆ ಇನ್ನೂ ಇರುತ್ತಿದ್ದವು.

ವಿಗ್ರಹವಾಕ್ಯಗಳು. ೧. ಶೇಷೇಣ ವಿರೋಧಃ-ಶೇಷವಿರೋಧಃ(ತೃ.ತ.), ಮುಕ್ತಃ ಶೇಷವಿರೋಧಃ ಯೇನ ಸಃ-ಮುಕ್ತಶೇಷವಿರೋಧಃ. ೨. ಕುಲಿಶೇನ ವ್ರಣಾಃ-ಕುಲಿಶವ್ರಣಾಃ (ತೃ.ತ.); ಕುಲಿಶವ್ರಣಾನಾಂ ಲಕ್ಷ್ಮಾಣಿ ಯಸ್ಯ ಸಃ-ಕುಲಿಶ

ವ್ರಣಲಕ್ಷ್ಮಾ (ಷ.ಬ.); ತೇನ-ಕುಲಿಶವ್ರಣಲಕ್ಷ್ಮಣಾ. ೩. ಪ್ರಬದ್ಧಃ ಅಞ್ಜಲೀ ಯೇನ ಸಃ-ಪ್ರಾಞ್ಜಲಿಃ (ಪ್ರಾ.ಬ); ತೇನ-ಪ್ರಾಞ್ಜಲಿನಾ.

ವ್ಯಾಕರಣವಿಶೇಷ. ಕುಲಿಶವ್ರಣಲಕ್ಷ್ಮಣಾ-ಲಕ್ಷ್ಮನ್‌ಶಬ್ದವು ನಪುಂಸಕವಾದರೂ ಕುಲಿಶವ್ರಣಲಕ್ಷ್ಮನ್ ಶಬ್ದವು ಗರುಡನಿಗೆ ವಿಶೇಷಣವಾದ್ದರಿಂದ ಪುಲ್ಲಿಂಗವಾಗಿದೆ. (ಕುಲಿಶ ವ್ರಣಲಕ್ಷ್ಮಾ, –ಲಕ್ಷ್ಮಾಣೌ, –ಲಕ್ಷ್ಮಾಣಃ)

ವಿಚಾರ. ೧. ಗರುಡನ ತಾಯಿಯಾದ ವಿನುತೆಯು ಕದ್ರುವೆಂಬ ತನ್ನ ಸವತಿಗೆ ಒಂದಾನೊಂದು ಜೂಜಿನಲ್ಲಿ ಸೋತು ದಾಸಿಯಾಗಿದ್ದಳು. ಅವಳನ್ನು ಬಿಡುಗಡೆ ಮಾಡುವದಕ್ಕಾಗಿ ಗರುಡನು ಕದ್ರುವಿನ ಅಪ್ಪಣೆಯಂತೆ ದೇವತೆಗಳಲ್ಲಿದ್ದ ಅಮೃತವನ್ನು ತರುತ್ತಿರುವಾಗ ಇಂದ್ರನು ಅವನನ್ನು ವಜ್ರಾಯುಧದಿಂದ ಹೊಡೆದನು. ಇದೇ ಸಂದರ್ಭದಲ್ಲಿಯೇ ಕದ್ರುವಿನ ಮಕ್ಕಳಾದ ಸರ್ಪಗಳಿಗೂ ಗರುಡನಿಗೂ ನಿತ್ಯವೈರ ವುಂಟಾಯಿತು. ೨. ಗರುಡನು ಅಮೃತವನ್ನು ತಂದ ಮೇಲೆ ವಿಷ್ಣುವಿಗೆ ಸ್ನೇಹಿತನಾಗಿ ಅವನ ವಾಹನವಾಗಿರುವದಕ್ಕೆ ಒಪ್ಪಿಕೊಂಡನು. ಮುಂದೆ ಇಂದ್ರನ ಸಾರಥಿಯಾದ ಮಾತಲಿಯು ತನ್ನ ಮಗಳಾದ ಗುಣಕೇಶಿಗೆ ಸುಮುಖನೆಂಬ ಒಬ್ಬ ನಾಗನನ್ನು ಗಂಡನಾಗುವಂತೆ ಒಪ್ಪಿಸಿದನು. ಆದರೆ ಗರುಡನು ಸುಮುಖನ ತಂದೆಯನ್ನು ಮೊದಲೇ ತಿಂದು ಹಾಕಿದ್ದನು. ಅವನನ್ನು ಒಂದು ತಿಂಗಳಲ್ಲಿ ತಿನ್ನುವದಾಗಿ ಪ್ರತಿಜ್ಞೆಮಾಡಿದ್ದನು. ಆದ್ದರಿಂದ ಮಾತಲಿಯು ಸುಮುಖನನ್ನು ಇಂದ್ರಲೋಕಕ್ಕೆ ಕರೆದುಕೊಂಡು ಬಂದು ವಿಷ್ಣುವಿನ ಅನುಮತಿಯಂತೆ ಅವನಿಗೆ ದೀರ್ಘಾಯುಸ್ಸನ್ನು ಇಂದ್ರನಿಂದ ಕೊಡಿಸಿದನು. ಗರುಡನು ಇದನ್ನೆಲ್ಲ ಕೇಳಿ ಸಿಟ್ಟುಗೊಂಡು ಇಂದ್ರನನ್ನೂ ವಿಷ್ಣುವನ್ನೂ ನಿಂದಿಸುತ್ತಾ ತನ್ನ ಪರಾಕ್ರಮವನ್ನು ಮತ್ತೆ ಮತ್ತೆ ಕೊಚ್ಚಿಕೊಂಡನು. ವಿಷ್ಣುವು "ಹಾಗಾದರೆ ನನ್ನ ಎಡಗೈಯಿನ ಒಂದು ಬೆರಳನ್ನು ಇಡುತ್ತೇನೆ, ಅದರ ಭಾರವನ್ನು ತಡೆದುಕೊಂಡರೆ ನೀನು ನಿಜವಾಗಿಯೂ ಬಲಿಷ್ಠನೇ ಸರಿ" ಎಂದು ಇಡ ಹೋಗಲು ಅದರ ಭಾರವನ್ನು ತಡೆದುಕೊಳ್ಳಲಾರದೆ ಗರುಡನು ತನ್ನ ಗರ್ವವನ್ನಳಿದು ವಿನೀತನಾದನೆಂದು ಭಾರತದಲ್ಲಿದೆ. 'ವಿನೀತೇನ'-ಎಂಬ ಮಾತಿನಲ್ಲಿ ಈ ಕಥೆಯು ಸೂಚಿತವಾಗಿದೆಯೆಂದು ಮಲ್ಲಿನಾಥವ್ಯಾಖ್ಯಾನದಲ್ಲಿದೆ.

ಯೋಗನಿದ್ರಾನ್ತವಿಶದ್ಯೈಃ ಪಾವನೈರವಲೋಕನೈಃ ।
ಭೃಗ್ವಾದೀನನುಗೃಹ್ಣನ್ತಂ ಸೌಖಶಾಯನಿಕಾನೃಷೀನ್ ॥೧೪॥

ಅನ್ವಯ. [ಯೋಗನಿದ್ರಾನ್ತವಿಶದ್ಯೈಃ ಪಾವನೈಃ ಅವಲೋಕನೈಃ ಸೌಖಶಾಯನಿಕಾನ್ ಭೃಗ್ವಾದೀನ್ ಅನುಗೃಹ್ಣನ್ತಂ (ತಂ ದದೃಶುಃ.)]

ಅರ್ಥ. ಯೋಗನಿದ್ರಾನ್ತವಿಶದೈಃ- (ಯೋಗ-ಯೋಗವೆಂಬ ನಿದ್ರಾ-ನಿದ್ರೆಯ ಅನ್ತ-ಕೊನೆಯಲ್ಲಿ ವಿಶದೈಃ-ಪ್ರಸನ್ನವಾಗಿರುವ) ಯೋಗನಿದ್ರೆಯಿಂದೆಚ್ಚತ್ತು ನಿರ್ಮಲವಾಗಿರುವ ಪಾವನೈಃ-ಪವಿತ್ರವಾದ ಅವಲೋಕನೈಃ- ನೋಟಗಳಿಂದ ಸೌಖಶಾಯನಿಕಾನ್-ಸುಖನಿದ್ರೆಯನ್ನು ಕೇಳುತ್ತಿರುವ ಭೃಗ್ವಾದೀನ್-ಭೃಗುವೇ ಮೊದಲಾದ ಋಷೀನ್-ಋಷಿಗಳನ್ನು ಅನುಗೃಹ್ಣನ್ತಂ-ಅನುಗ್ರಹಿಸುತ್ತಿರುವ (ತಂ-ಆತನನ್ನು ದದೃಶುಃ - ಕಂಡರು.)

ತಾತ್ಪರ್ಯ. ವಿಷ್ಣುವು ಆಗ ತಾನೆ ಯೋಗನಿದ್ರೆಯಿಂದ ಎಚ್ಚತ್ತು 'ಸುಖನಿದ್ರೆಯಾಯಿತೆ?' ಎಂದು ಕೇಳುವುದಕ್ಕೆ ಬಂದಿರುವ ಭೃಗುವೇ ಮುಂತಾದ ಋಷಿಗಳನ್ನು ನಿರ್ಮಲವಾದ ನೋಟಗಳಿಂದ ನೋಡುತ್ತಾ ಅವರನ್ನು ಪಾವನಗೊಳಿಸುತ್ತಿದ್ದನು.

ವಿಗ್ರಹವಾಕ್ಯಗಳು. ೧. ಯೋಗ ಏವ ನಿದ್ರಾ-ಯೋಗನಿದ್ರಾ (ಅ.ಪೂ.ಕ.); ತಸ್ಯಾಃ-ಯೋಗನಿದ್ರಾಯಾಃ; ಯೋಗನಿದ್ರಾಯಾಃ ಅನ್ತಃ-ಯೋಗನಿದ್ರಾನ್ತಃ (ಷ.ತ.); ತಸ್ಮಿನ್-ಯೋಗನಿದ್ರಾನ್ತೇ; ಯೋಗನಿದ್ರಾನ್ತೇ ವಿಶದಾನಿ-ಯೋಗನಿದ್ರಾಂತವಿಶದಾನಿ (ನ.ತ.); ತೈಃ-ಯೋಗನಿದ್ರಾನ್ತವಿಶದೈಃ. ೨. ಭೃಗುಃ ಆದಿಃ ಯೇಷಾಂ ತೇ-ಭೃಗ್ವಾದಯಃ (ಷ.ಬ); ತಾನ್-ಭೃಗ್ವಾದೀನ್. ೩. ಅನುಗೃಹ್ಣಾತೀತಿ ಅನುಗೃಹ್ಣನ್ (ಕೃ.ವೃ.); ತಂ-ಅನುಗೃಹ್ಣನ್ತಮ್. ೪. ಸುಖೇನ ಶಯನಂ-ಸುಖಶಯನಮ್ (ತೃ.ತ.); ಸುಖಶಯನಂ ಪೃಚ್ಛನ್ತೀತಿ-ಸೌಖಶಾಯನಿಕಾಃ (ತ.ವೃ.); ತಾನ್ - ಸೌಖಶಾಯನಿಕಾನ್.

ವ್ಯಾಕರಣವಿಶೇಷ. ಭೃಗ್ವಾದೀನ್-ಇದು ತದ್ಗುಣಸಂವಿಜ್ಞಾನಬಹುವ್ರೀಹಿ. ಬಹುವ್ರೀಹಿಯ ಸಮಾಸಾರ್ಥದಲ್ಲಿ ವಿಶೇಷಣದ ಭಾಗವೂ ಸೇರಿಕೊಂಡಿದ್ದರೆ ತದ್ಗುಣಸಂವಿಜ್ಞಾನಬಹುವ್ರೀಹಿ ಎಂದು ಹೆಸರಾಗುವದು. ಇಲ್ಲಿ ಭೃಗುವೂ ಸಪ್ತರ್ಷಿಗಳಲ್ಲಿ ಸೇರಿಕೊಂಡಿರುತ್ತಾನೆ.

ವಿಚಾರ. ಭೃಗುಂ ಮರೀಚಿಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ । ವಸಿಷ್ಠಂ ಚ ಮಹಾತೇಜಾಃ ಸೋಽಸೃಜನ್ ಮನಸಾ ಸುತಾನ್ ॥ ಈ ಶ್ಲೋಕದಲ್ಲಿ ಹೇಳಿರುವ ಏಳು ಜನ ಋಷಿಗಳು ಭೃಗ್ವಾದಿಗಳು; ಇವರಿಗೆ "ಸಪ್ತಬ್ರಹ್ಮರು" ಎಂದೂ ಹೆಸರುಂಟು.

ಪ್ರಣಿಪತ್ಯ ಸುರಾಸ್ತಸ್ಮೈ ಶಮಯಿತ್ರೇ ಸುರದ್ವಿಷಾಮ್ ।
ಅಥೈನಂ ತುಷ್ಟುವುಃ ಸ್ತುತ್ಯಮವಾಙ್ಮನಸಗೋಚರಮ್ ॥೧೫॥

ಅನ್ವಯ. [ಅಥ ಸುರಾಃ ಸುರದ್ವಿಷಾಂ ಶಮಯಿತ್ರೇ ತಸ್ಮೈ ಪ್ರಣಿಪತ್ಯ, ಸ್ತುತ್ಯಂ ಅವಾಙ್ಮನಸಗೋಚರಂ ಏನಂ ತುಷ್ಟುವುಃ.]

ಅರ್ಥ. ಅಥ-ಆಮೇಲೆ ಸುರಾಃ-ದೇವತೆಗಳು ಸುರದ್ವಿಷಾಂ-(ಸುರ-ದೇವತೆ

ಗಳ, ದ್ವಿಷಾಂ-ಶತ್ರುಗಳ) ಅಸುರರ ಶಮಯಿತ್ರೇ-ನಾಶಗೊಳಿಸುವವನಾದ ತಸ್ಮೈ - ಆತನಿಗೆ ಪ್ರಣಿಪತ್ಯ-ನಮಸ್ಕಾರಮಾಡಿ ಸ್ತುತ್ಯಂ-ಹೊಗಳುವದಕ್ಕೆ ಯೋಗ್ಯನಾದ ಅವಾಙ್ಮನಸಗೋಚರಂ-ಮಾತಿಗೂ ಮನಸ್ಸಿಗೂ ಗೋಚರವಲ್ಲದ ಏನಂ-ಈತನನ್ನು ತುಷ್ಟುವುಃ-ಹೊಗಳಿದರು.

ತಾತ್ಪರ್ಯ. ಆಮೇಲೆ ದೇವತೆಗಳು ಅಸುರನಾಶಕನಾದ ವಿಷ್ಣುವಿಗೆ ನಮಸ್ಕಾರವನ್ನು ಮಾಡಿ ಮಾತಿಗೂ ಮನಸ್ಸಿಗೂ ನಿಲುಕದ ಸ್ವರೂಪವುಳ್ಳ ಆತನನ್ನು ಮುಂದೆ ಹೇಳುವಂತೆ ಸ್ತೋತ್ರಮಾಡಿದರು.

ವಿಗ್ರಹವಾಕ್ಯಗಳು. ೧. ಶಮಯತೀತಿ-ಶಮಯಿತಾ(ತ.ವೃ.); ತಸ್ಮೈ-ಶಮಯಿತ್ರೇ ೨. ಸುರಾನ್ ದ್ವಿಷನ್ತೀತಿ-ಸುರದ್ವಿಷಃ (ಉಪ.ಸ.); ತೇಷಾಂ-ಸುರದ್ವಿಷಾಮ್. ೩. ಸ್ತೋತುಂ ಯೋಗ್ಯಃ-ಸ್ತುತ್ಯಃ (ಕೃ.ವೃ.); ತಂ ಸ್ತುತ್ಯಮ್. ೪. ವಾಕ್ಚ ಮನಶ್ಚ- ವಾಙ್ಮನಸೇ (ದ್ವ.); ತಯೋಃ- ವಾಙ್ಮನಸಯೋ; ವಾಙ್ಮನಸಯೋಃ ಗೋಚರಃ- ವಾಙ್ಮನಸಗೋಚರಃ (ಷ.ತ); ನ ವಾಙ್ಮನಸಗೋಚರಃ-ಅವಾಙ್ಮನಸಗೋಚರಃ (ನ.ತ.).

ವ್ಯಾಕರಣವಿಶೇಷ. ೧. ಸುರದ್ವಿಷಾಮ್ - ಷಕಾರಾನ್ತಪುಲ್ಲಿಂಗ. (ಸುರದ್ವಿಟ್, ಸುರದ್ವಿಷೌ, ಸುರದ್ವಿಷಃ) ಇದು "ಕರ್ಮಾರ್ಥಕಷಷ್ಠಿ"; ಆದ್ದರಿಂದ 'ಅಸುರರನ್ನು' ಎಂದು ಕನ್ನಡಿಸಬೇಕಾಗುತ್ತದೆ ೨. ಏನಂ-ಒಂದು ವಾಕ್ಯದಲ್ಲಿ ಒಂದು ಸಲ ಹೇಳಿ ಮತ್ತೆ ಅದರ ವಿಷಯದಲ್ಲಿ ಏನಾದರೂ ಹೇಳುವದಕ್ಕೆ ಹೊರಡುವದು "ಅನ್ವಾದೇಶ"ವೆನಿಸುವದು; ಈ ಅರ್ಥದಲ್ಲಿ 'ಇದಂ' 'ಏತತ್'-ಶಬ್ದಗಳಿಗೆ ದ್ವಿತೀಯಾ, ತೃತೀಯೈಕವಚನ, ಮತ್ತು ಷಷ್ಠೀ ಸಪ್ತಮೀ ದ್ವಿವಚನ- ಈ ವಿಭಕ್ತಿಗಳಲ್ಲಿ 'ಏನ' ಎಂಬ ಆದೇಶವಾಗುವದು. ಈ ಶ್ಲೋಕದಲ್ಲಿ 'ತಸ್ಮೈ ಪ್ರಣಿಪತ್ಯ' ಎಂದು ವಿಷ್ಣುವಿಗೆ ನಮಸ್ಕಾರ ಮಾಡಿದರೆಂದು ಹೇಳಿ ಮತ್ತೆ ಅವನನ್ನು ಹೊಗಳಿದರು ಎಂದು ಹೇಳುವದಕ್ಕೆ ಹೊರಟಿರುವದರಿಂದ 'ಏನಂ' ಎಂದು ಪ್ರಯೋಗಿಸಿದೆ. ಆದ್ದರಿಂದ ಇಲ್ಲಿ 'ಏನಂ' ಎಂಬುದು ಅನ್ವಾದೇಶವಾಯಿತು. ೩. ಅವಾಙ್ಮನಸಗೋಚರಮ್-ಮನಃಶಬ್ದವು ಸಕಾರಾನ್ತವಾದರೂ ದ್ವಂದ್ವಸಮಾಸದಲ್ಲಿ ಅಚ್‌ಪ್ರತ್ಯಯವು ಬಂದು ಅಕಾರಾನ್ತವಾಗಿದೆ. ೪. ತುಷ್ಟುವುಃ-ಷ್ಟುಞ್ ಸ್ತುತೌ (ಸ್ತು-ಹೊಗಳು) ಎಂಬ ೨ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಬ.

ವಿಚಾರ. ೧. ಪರಮಾತ್ಮನು ನಿರ್ಗುಣನಾದ್ದರಿಂದ ಅವನು ಮಾತುಗಳಿಂದ ವರ್ಣಿಸುವದಕ್ಕಾಗಲಿ ಮನಸ್ಸಿನಿಂದ ವಿಷಯಮಾಡಿಕೊಳ್ಳುವದಕ್ಕಾಗಲಿ ಆಗದವನೆಂದು ಶ್ರುತಿಯಲ್ಲಿದೆ. ವರ್ಣಿಸುವದಕ್ಕಾಗದ ಸ್ವರೂಪವನ್ನು ಹೊಗಳಿದರು ಎಂಬುದು ವಿರೋಧವಾದರೂ ಅವನ ಸಗುಣರೂಪವನ್ನೇ ಹೊಗಳಿದರೆಂಬ ತಾತ್ಪರ್ಯವಿರುವದರಿಂದ ಯಾವ ವಿರೋಧವೂ ಇಲ್ಲ.

ನಮೋ ವಿಶ್ವಸೃಜೇ ಪೂರ್ವಂ ವಿಶ್ವಂ ತದನು ಬಿಭ್ರತೇ ।
ಅಥ ವಿಶ್ವಸ್ಯ ಸಂಹರ್ತ್ರೇ ತುಭ್ಯಂ ತ್ರೇಧಾಸ್ಥಿತಾತ್ಮನೇ ॥೧೬॥

ಅನ್ವಯ. [ಪೂರ್ವಂ ವಿಶ್ವಸೃಜೇ, ತದನು ವಿಶ್ವಂ ಬಿಭ್ರತೇ, ಅಥ ವಿಶ್ವಸ್ಯ ಸಂಹರ್ತ್ರೇ ತ್ರೇಧಾಸ್ಥಿತಾತ್ಮನೇ ತುಭ್ಯಂ ನಮಃ.]

ಅರ್ಥ. ಪೂರ್ವಂ-ಮೊದಲು ವಿಶ್ವಸೃಜೇ-ಜಗತ್ತನ್ನು ಹುಟ್ಟಿಸುವವನಾಗಿಯೂ ತದನು-ಆಮೇಲೆ ವಿಶ್ವಂ-ಪ್ರಪಂಚವನ್ನು ಬಿಭ್ರತೇ-ಕಾಪಾಡುವವನಾಗಿಯೂ ಅಥ - ಆಮೇಲೆ ವಿಶ್ವಸ್ಯ-ಪ್ರಪಂಚದ ಸಂಹರ್ತ್ರೇ-ನಾಶಕನಾಗಿಯೂ ತ್ರೇಧಾಸ್ಥಿತಾತ್ಮನೇ - (ತ್ರೇಧಾ- ಮೂರು ಬಗೆಯ ಸ್ಥಿತಾತ್ಮನೇ- ರೂಪದಲ್ಲಿರುವ) ತುಭ್ಯಂ-ನಿನಗೆ ನಮಃ-ನಮಸ್ಕಾರವು.

ತಾತ್ಪರ್ಯ. ಮೊದಲು ಜಗತ್ತನ್ನು ಸೃಷ್ಟಿಮಾಡಿ ಆಮೇಲೆ ಅದರ ರಕ್ಷಣೆಯನ್ನೂ ಕೊನೆಗೆ ಸಂಹಾರವನ್ನೂ ಮಾಡುವ ನಿನಗೆ ನಮಸ್ಕಾರ.

ವಿಗ್ರಹವಾಕ್ಯಗಳು. ೧. ವಿಶ್ವಂ ಸೃಜತೀತಿ-ವಿಶ್ವಸೃಟ್ (ಕೃ.ವೃ.); ತಸ್ಮೈ-ವಿಶ್ವಸೃಜೇ ೨. ಭಿಭರ್ತೀತಿ-ಬಿಭ್ರತ್ (ಕೃ.ವೃ.); ತಸ್ಮೈ-ಬಿಭ್ರತೇ. ೩. ಸಂಹರತೀತಿ-ಸಂಹರ್ತಾ (ಕೃ.ವೃ.); ತಸ್ಮೈ-ಸಂಹರ್ತ್ರೇ. ೪. ತ್ರೇಧಾ ಸ್ಥಿತಃ-ತ್ರೇಧಾಸ್ಥಿತಃ (ಸಾ.ಸ.); ತ್ರೇಧಾಸ್ಥಿತಃ ಆತ್ಮಾ ಯಸ್ಯ ಸಃ- ತ್ರೇಧಾಸ್ಥಿತಾತ್ಮಾ (ಷ.ಬ.); ತಸ್ಮೈ-ತ್ರೇಧಾಸ್ಥಿತಾತ್ಮನೇ.

ವ್ಯಾಕರಣವಿಶೇಷ. ೧. ವಿಶ್ವಸೃಜೇ- ಜಕಾರಾನ್ತ, ಪುಲ್ಲಿಂಗ (ವಿಶ್ವಸೃಟ್, ವಿಶ್ವಸೃಜೌ, ವಿಶ್ವಸೃಜಃ); 'ನಮಃ', 'ಸ್ವಸ್ತಿ', 'ಸ್ವಾಹಾ', ' ಸ್ವಧಾ', 'ಅಲಂ', ವಷಟ್'-ಈ ಶಬ್ದಗಳ ಯೋಗವಿದ್ದರೆ ಚತುರ್ಥೀವಿಭಕ್ತಿ ಬರುವದು. ೨. ತದನು-ತತ್ ಅನು ಎಂದು ಎರಡು ಮಾತುಗಳು; ತತ್-ಎಂಬುದು ದ್ವಿತೀಯಾವಿಭಕ್ತಿ. ೩. ವಿಶ್ವ-ಅಕಾರಾನ್ತ ನಪುಂಸಕ; ಸರ್ವನಾಮಶಬ್ದ. ೪. ನಮಃ, ಅನು, ಅಥ, ತ್ರೇಧಾ-ಇವೆಲ್ಲ ಅವ್ಯಯಗಳು. ೫. ಬಿಭ್ರತೇ-ತಕಾರಾನ್ತ ಪುಲ್ಲಿಂಗ; (ಬಿಭ್ರತ್, ಬಿಭ್ರತೌ, ಬಿಭ್ರತಃ.)

ವಿಚಾರ. ಬ್ರಹ್ಮವಿಷ್ಣುರುದ್ರರೆಂಬ ಮೂರು ರೂಪಗಳೂ ವಿಷ್ಣುವಿಗೇ ಸೇರಿದವೆಂದು ಇಲ್ಲಿ ಕವಿಯು ವರ್ಣಿಸಿರುತ್ತಾನೆ.

ರಸಾನ್ತರಾಣ್ಯೇಕರಸಂ ಯಥಾ ದಿವ್ಯಂ ಪಯೋಽಶ್ನುತೇ ।
ದೇಶೇ ದೇಶೇ ಗುಣೇಷ್ವೇವಮವಸ್ಥಾಸ್ತ್ವಮವಿಕ್ರಿಯಃ ॥೧೭॥

ಅನ್ವಯ. [ಏಕರಸಂ ದಿವ್ಯಂ ಪಯಃ ದೇಶೇ ದೇಶೇ ರಸಾನ್ತರಾಣಿ ಯಥಾ ಅಶ್ನುತೇ ಏವಂ ಅವಿಕ್ರಿಯಃ ತ್ವಂ ಗುಣೇಷು ಅವಸ್ಥಾಃ (ಅಶ್ನುಷೇ)]

ಅರ್ಥ. ಏಕರಸಂ-ಒಂದೇ ರುಚಿಯುಳ್ಳ ದಿವ್ಯಂ-ಅಂತರಿಕ್ಷದಲ್ಲುಂಟಾದ

ಪಯಃ - ನೀರು ದೇಶೇ ದೇಶೇ-ಒಂದೊಂದು ಸ್ಥಳದಲ್ಲಿಯೂ ರಸಾನ್ತರಾಣಿ-ಬೇರೆ ಬೇರೆ ರುಚಿಗಳನ್ನು ಯಥಾ-ಹೇಗೆ ಅಶ್ನುತೇ-ಹೊಂದುತ್ತದೆಯೊ ಏವಂ-ಹೀಗೆ ಅವಿಕ್ರಿಯಃ - ವಿಕಾರಗಳಿಲ್ಲದ ತ್ವಂ-ನೀನು ಗುಣೇಷು-ಗುಣಗಳಲ್ಲಿ ಅವಸ್ಥಾಃ-ಅವಸ್ಥೆಗಳನ್ನು (ಅಶ್ನುಷೇ - ಹೊಂದುತ್ತೀಯೆ).

ತಾತ್ಪರ್ಯ. ಅಂತರಿಕ್ಷದಲ್ಲಿರುವ ನೀರಿನಲ್ಲಿ ನಿಜವಾಗಿ ಸಿಹಿಯೆಂಬ ಒಂದೇ ರುಚಿಯಿದ್ದರೂ ಅದು ಬೀಳುವ ಬೇರೆ ಬೇರೆ ನೆಲದ ಸಂಬಂಧದಿಂದ ಆಯಾ ಬೇರೆ ಬೇರೆ ರುಚಿಯನ್ನು ಹೊಂದುವ ಹಾಗೆ ನೀನು ಸತ್ತ್ವಾದಿಗುಣಗಳ ಸಂಬಂಧದಿಂದ ಸ್ರಷ್ಟೃತ್ವವೇ ಮುಂತಾದ ಅವಸ್ಥೆಗಳನ್ನು ಹೊಂದುತ್ತಿರುವೆ.

ವಿಗ್ರಹವಾಕ್ಯಗಳು. ೧. ಅನ್ಯೇ ರಸಾಃ-ರಸಾನ್ತರಾಣಿ (ಮ.ವ್ಯ.). ೨. ಏಕಃ ರಸಃ ಯಸ್ಯ ತತ್-ಏಕರಸಮ್ (ಷ.ಬ.). ೩. ದಿವಿ ಭವಂ-ದಿವ್ಯಮ್ (ತ.ವ್ಯ.) ೪. ಅವಿದ್ಯಮಾನಾ ವಿಕ್ರಿಯಾ ಯಸ್ಯ ಸಃ-ಅವಿಕ್ರಿಯಃ (ನ.ಬ.).

ವ್ಯಾಕರಣವಿಶೇಷ. ೧. ರಸಾನ್ತರಾಣಿ- ಇದು ನಿತ್ಯಸಮಾಸ, ಸಮಾಸದಲ್ಲಿರುವ 'ಅನ್ತರ'ಎಂಬ ಪದದಿಂದ ವಿಗ್ರಹಮಾಡಕೂಡದು. ೨. ಪಯಃ-ಸಕಾರಾನ್ತ ನಪುಂಸಕ. ೩. ಅವಿಕ್ರಿಯಃ-ಇಲ್ಲಿ ನಞ್ ಮುಂದೆ 'ಇರು' ಎಂಬರ್ಥದ ಉತ್ತರಪದವು ಲೋಪವಾಗಿದೆ; 'ಅವಿದ್ಯಮಾನವಿಕ್ರಿಯಃ' ಎಂದೂ ಆಗಬಹುದು. ೪. ಅಶ್ನುತೇ-ಅಶೂವ್ಯಾಪ್ತೌ (೬) (ಅಶ್-ಹಬ್ಬಿರು, ಹೊಂದು) ಎಂಬ ೫ನೆಯ ಗಣದ ಧಾತುವಿನ ಲಟ್. ಆ.ಪ್ರ.ಏ.

ವಿಚಾರ. ನೆಲದಲ್ಲಿರುವ ವಸ್ತುಗಳ ರುಚಿಯಿಂದ ನೀರಿನ ರುಚಿಯು ಬೇರೆಯಾಗುವಂತೆ ಗುಣಗಳೆಂಬ ಉಪಾಧಿಯಿಂದ ಪರಮಾತ್ಮನು ಬ್ರಹ್ಮವಿಷ್ಣುರುದ್ರರೆಂಬ ರೂಪಗಳನ್ನು ಹೊಂದುವನು ಎಂಬುದಕ್ಕೆ ಮಾತ್ರ ದೃಷ್ಟಾಂತವನ್ನು ತೆಗೆದುಕೊಳ್ಳಬೇಕು. ಪರಮಾತ್ಮನು ಅಸಂಗನಾದ್ದರಿಂದ ಅವನಲ್ಲಿ ಗುಣಗಳ ಸಂಬಂಧವು ನಿಜವಾಗಿ ಆಗುವದಿಲ್ಲ. ೨. ಸತ್ತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳಿಂದ ಪ್ರಕೃತಿಯೆಂಬ ಮೂಲಕಾರಣವಾಗಿದೆ ಎಂದು ಸಾಂಖ್ಯರು ಹೇಳುತ್ತಾರೆ; ಈ ಪ್ರಕೃತಿಯನ್ನು ತನ್ನ ವಶದಲ್ಲಿಟ್ಟುಕೊಂಡು ಪರಮಾತ್ಮನು ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ವೇದಾಂತಿಗಳು ಹೇಳುವರು. ಕಾಳಿದಾಸನು ವೇದಾಂತಿಗಳ ಮತವನ್ನು ಇಲ್ಲಿ ಅನುಸರಿಸಿರುತ್ತಾನೆ.

ಅಮೇಯೋ ಮಿತಲೋಕಸ್ತ್ವಮನರ್ಥೀ ಪ್ರಾರ್ಥನಾವಹಃ ।
ಅಜಿತೋ ಜಿಷ್ಣುರತ್ಯನ್ತಮವ್ಯಕ್ತೋ ವ್ಯಕ್ತಕಾರಣಮ್ ॥೧೮॥

ಅನ್ವಯ. [ತ್ವಂ ಅಮೇಯಃ ಮಿತಲೋಕಃ, ಅನರ್ಥೀ ಪ್ರಾರ್ಥನಾವಹಃ,

ಅಜಿತಃ ಜಿಷ್ಣುಃ, ಅತ್ಯನ್ತಂ ಅವ್ಯಕ್ತಃ ವ್ಯಕ್ತಕಾರಣಮ್.]

ಅರ್ಥ. ತ್ವಂ-ನೀನು [೧] ಅಮೇಯಃ-ಪ್ರಮಾಣಗಳಿಂದ ಗೊತ್ತುಪಡಿಸುವದಕ್ಕೆ ಆಗುವವನಲ್ಲ, ಮಿತಲೋಕಃ-(ಮಿತ-ಗೊತ್ತುಪಡಿಸಲ್ಪಟ್ಟ ಲೋಕಃ-ಲೋಕಗಳುಳ್ಳವನು) ಜಗತ್ತನ್ನೆಲ್ಲ ಗೊತ್ತಾಗಿ ತಿಳಿದಿರುವವನು; ಅನರ್ಥೀ - ಬಯಕೆಯಿರುವವನಲ್ಲ, ಪ್ರಾರ್ಥನಾವಹಃ-(ಪ್ರಾರ್ಥನಾ-ಬಯಕೆಗಳ ಆವಹಃ-ತರುವವನು) ಬಯಕೆಗಳನ್ನು ಕೈಗೂಡಿಸುವವನು; ಅಜಿತಃ-ಜಯಿಸಲ್ಪಟ್ಟವನಲ್ಲ ಜಿಷ್ಣುಃ-ಜಯಿಸುವವನು; ಅತ್ಯನ್ತಂ-ಬಹಳವಾಗಿ ಅವ್ಯಕ್ತಃ- ಸೂಕ್ಷ್ಮನಾದವನು, ವ್ಯಕ್ತಕಾರಣಂ-(ವ್ಯಕ್ತ-ಸ್ಥೂಲವಾದದ್ದರ ಕಾರಣಂ-ಕಾರಣವು) ಸ್ಥೂಲಪ್ರಪಂಚಕ್ಕೆ ಕಾರಣನು.

ತಾತ್ಪರ್ಯ. ನಿನ್ನನ್ನು ಯಾರೂ ಅರಿತವರಿಲ್ಲ, ನೀನು ಎಲ್ಲವನ್ನು ಅರಿತಿರುವೆ; ನೀನು ಯಾವ ಆಸೆಯೂ ಇರುವವನಲ್ಲ, ಎಲ್ಲರ ಆಸೆಯನ್ನು ನೆರವೇರಿಸುವವನು; ಯಾರಿಗೂ ಸೋತವನಲ್ಲ, ಎಲ್ಲರನ್ನೂ ಗೆಲ್ಲುವವನು; ತೀರ ಸೂಕ್ಷ್ಮರೂಪದಲ್ಲಿರುವವನು, ಸ್ಥೂಲರೂಪದಲ್ಲಿರುವ ಪ್ರಪಂಚಕ್ಕೆ ಕಾರಣನಾದವನು.

ವಿಗ್ರಹವಾಕ್ಯಗಳು. ೧. ಮಾತುಂ ಯೋಗ್ಯಃ-ಮೇಯಃ (ಕೃ.ವೃ.); ನ ಮೇಯಃ- ಅಮೇಯಃ (ನ.ತ.). ೨. ಮಿತಾಃ ಲೋಕಾಃ ಯೇನ ಸಃ-ಮಿತಲೋಕಃ (ತೃ.ಬ.). ೩. ಅಸನ್ನಿಹಿತಃ ಅರ್ಥೋ ಅಸ್ಯೇತಿ-ಅರ್ಥೀ ಬಯಕೆ ಇರುವವನು (ತ.ವೃ.); ನ ಅರ್ಥೀ-ಅನರ್ಥೀ (ನ.ತ.). ೪. ಆವಹತೀತಿ ಆವಹಃ (ಕೃ.ವೃ.); ಪ್ರಾರ್ಥನಾನಾಂ ಆವಹಃ-ಪ್ರಾರ್ಥನಾವಹಃ (ಷ.ತ.) ೫. ನ ಜಿತಃ-ಅಜಿತಃ (ನ.ತ.). ೬. ಜಯತೀತಿ-ಜಿಷ್ಣುಃ (ಕೃ.ವೃ). ೭. ಅತಿಕ್ರಾನ್ತಃ ಅನ್ತಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ-ಅತ್ಯನ್ತಮ್. ೮. ನ ವ್ಯಕ್ತಃ-ಅವ್ಯಕ್ತಃ (ನ.ತ.) ೯. ವ್ಯಕ್ತಸ್ಯ ಕಾರಣಮ್-ವ್ಯಕ್ತಕಾರಣಮ್.

ವ್ಯಾಕರಣವಿಶೇಷ. ೧. ಅನರ್ಥೀ-ಬಯಸುವ ಪದಾರ್ಥವು ಅಪ್ರಾಪ್ತವಾಗಿದೆ ಎಂಬರ್ಥದಲ್ಲಿ ಇನ್‌ಪ್ರತ್ಯಯವು ಬಂದಿದೆ; ಪದಾರ್ಥವು ಇದೆ ಎಂಬರ್ಥದಲ್ಲಿ 'ಅರ್ಥವಾನ್' ಎಂದು ಪ್ರಯೋಗವಾಗುವದು. ೨. ಜಿಷ್ಣುಃ-ಇಲ್ಲಿ ತಾಚ್ಛೀಲ್ಯ (ಎಂದರೆ ಸ್ವಭಾವ)ವನ್ನು ಹೇಳುವದಕ್ಕೆ ಪ್ರತ್ಯಯ ಬಂದಿದೆ; ಗ್ಲೈ, ಜಿ,

[೧] ೧೮.ಮತ್ತು ೧೯.ಈ ಶ್ಲೋಕಗಳ ನಡುವೆ ಕೆಲವು ಪುಸ್ತಕಗಳಲ್ಲಿ ಈ ಶ್ಲೋಕವಿದೆ: ಏಕಃ ಕಾರಣತಸ್ತಾಂ ತಾಮವಸ್ಥಾಂ ಪ್ರತಿಪದ್ಯಸೇ । ನಾನಾತ್ವಂ ರಾಗಸಂಯೋಗಾತ್ಸ್ಫಟಿಕಸ್ಯೇವ ತೇ ಸ್ಮೃತಮ್ ॥

"ನೀನು ಒಬ್ಬನೇ ಆಗಿದ್ದರೂ (ಉಪಾಧಿಯ ಕಾರಣದಿಂದ ಆಯಾ ಅವಸ್ಥೆಯನ್ನು ಪಡೆಯುತ್ತಿರುವ; (ದಾಸಿವಾಳದ ಹೂ ಮುಂತಾದ್ದರ) ಕೆಂಪಿನ ಸಂಬಂಧದಿಂದ ಸ್ಫಟಿಕಕ್ಕೆ ಹೇಗೋ ಹಾಗೆ ನಿನಗೆ ಬಹುತ್ವವು ಉಪಾಧಿಯ ಸಂಬಂಧದಿಂದ ಆಗಿರುವದು" ಎಂದು ಶ್ಲೋಕದ ಅಭಿಪ್ರಾಯವು. ಒಬ್ಬ ವ್ಯಾಖ್ಯಾನಕಾರರು ಬರೆದಿರುವಂತೆ ಇದು ಯಾರೋ ಈಚೆಗೆ ಸೇರಿಸಿರುವ ಪದ್ಯವೆಂದು ತೋರುತ್ತದೆ. ಇದರ ಅಭಿಪ್ರಾಯವು ೨೦ನೆಯ ಪದ್ಯದಲ್ಲಿ ಸೇರಿರುತ್ತದೆ.

ಸ್ಥಾ-ಈ ಧಾತುಗಳಿಗೆ ತಚ್ಛೀಲ (ಆ ಸ್ವಭಾವವುಳ್ಳ), ತದ್ಧರ್ಮ (ಆ ಧರ್ಮವುಳ್ಳ), ತತ್ಸಾಧುಕಾರಿ (ಅದನ್ನು ಚೆನ್ನಾಗಿ ಮಾಡುವ) ಎಂಬರ್ಥದಲ್ಲಿ ಗ್ಸ್ನು(=ಸ್ನು) ಎಂಬ ಪ್ರತ್ಯಯವು ಬರುವದು.

ವಿಚಾರ. ಸಾಂಖ್ಯರು ಪ್ರಕೃತಿಗೆ ಅವ್ಯಕ್ತವೆಂದು ಹೆಸರಿಟ್ಟಿರುತ್ತಾರೆ. ಪ್ರಕೃತಿಗಿಂತಲೂ ಅವ್ಯಕ್ತನಾಗಿರುವದರಿಂದ ಪರಮಾತ್ಮನನ್ನು ವೇದಾಂತಿಗಳು ಅವ್ಯಕ್ತನೆನ್ನುವರು.

ಹೃದಯಸ್ಥಮನಾಸನ್ನಮಕಾಮಂ ತ್ವಾಂ ತಪಸ್ವಿನಮ್ ।
ದಯಾಲುಮನಘಸ್ಪೃಷ್ಟಂ ಪುರಾಣಮಜರಂ ವಿದುಃ ॥೧೯॥

ಅನ್ವಯ. [ತ್ವಾಂ ಹೃದಯಸ್ಥಂ ಅನಾಸನ್ನಂ ವಿದುಃ, ಅಕಾಮಂ ತಪಸ್ವಿನಂ (ವಿದುಃ) ದಯಾಲುಂ ಅನಘಸ್ಪೃಷ್ಟಂ (ವಿದುಃ); ಪುರಾಣಂ ಅಜರಂ(ವಿದುಃ.)]

ಅರ್ಥ. ತ್ವಾಂ-ನಿನ್ನನ್ನು ಹೃದಯಸ್ಥಂ-ಹೃದಯದಲ್ಲಿರುವವನಾಗಿಯೂ ಅನಾಸನ್ನಂ-ಹತ್ತಿರವಿಲ್ಲದವನನ್ನಾಗಿಯೂ ವಿದುಃ- ತಿಳಿಯುತ್ತಾರೆ; ಅಕಾಮಂ-ಬಯಕೆಯಿಲ್ಲದವನನ್ನಾಗಿಯೂ ತಪಸ್ವಿನಂ-ಉತ್ತಮವಾದ ತಪಸ್ಸುಳ್ಳವನನ್ನಾಗಿಯೂ (ವಿದುಃ -ತಿಳಿಯುತ್ತಾರೆ); ದಯಾಲುಂ-ಕೃಪೆಯುಳ್ಳವನನ್ನಾಗಿಯೂ ಅನಘಸ್ಪೃಷ್ಟಂ-ದುಃಖದಿಂದ ಮುಟ್ಟಲ್ಪಡದೆ ಇರುವವನನ್ನಾಗಿಯೂ (ವಿದುಃ-ತಿಳಿಯುತ್ತಾರೆ); ಪುರಾಣಂ - ಹಳೆಯವವನನ್ನಾಗಿಯೂ ಅಜರಂ-ಮುಪ್ಪಿಲ್ಲದವನನ್ನಾಗಿಯೂ (ವಿದುಃ-ತಿಳಿಯುವರು).

ತಾತ್ಪರ್ಯ. ನೀನು ಹೃದಯದಲ್ಲಿರುವವನಾದರೂ ಅಜ್ಞರಿಗೆ ಬಹುದೂರನಾಗಿರುವೆ, ಯಾವ ಬಯಕೆಯಿಲ್ಲದಿದ್ದರೂ ತಪಸ್ವಿಯಾಗಿರುವೆ, ಎಲ್ಲರಲ್ಲಿಯೂ ದಯೆಯುಳ್ಳವನಾಗಿದ್ದರೂ ದುಃಖರಹಿತನಾಗಿಯೂ ಇರುವೆ, ಅನಾದಿಕಾಲದಿಂದ ಇರುವವನಾದರೂ ಮುಪ್ಪಿಲ್ಲದವನಾಗಿರುತ್ತೀಯೆ-ಹೀಗೆಂದು ತಿಳಿದವರು ಹೇಳುತ್ತಾರೆ.

ವಿಗ್ರಹವಾಕ್ಯಗಳು. ೧. ಹೃದಯೇ ತಿಷ್ಠತಿ ಇತಿ-ಹೃದಯಸ್ಥಃ (ಕೃ.ವೃ.). ೨. ನ ಆಸನ್ನಃ-ಅನಾಸನ್ನಃ (ನ.ತ.). ೩.ಅವಿದ್ಯಮಾನಃ ಕಾಮಃ ಯಸ್ಯ ಸಃ-ಅಕಾಮಃ (ನ.ಬ) ೪. (ಪ್ರಶಸ್ತಂ)ತಪಃ ಅಸ್ಯ ಅಸ್ತೀತಿ-ತಪಸ್ವೀ (ತ.ವೃ.) ೫.ದಯತೇ ಇತಿ ದಯಾಲುಃ (ಕೃ.ವೃ.); ತಂ ದಯಾಲುಮ್ ೬. ಅಘೇನ ಸ್ಪೃಷ್ಟಃ-ಅಘಸ್ಪೃಷ್ಟಃ (ತೃ.ತ)ನ ಅಘಸ್ಪೃಷ್ಟಃ-ಅನಘಸ್ಪೃಷ್ಟಃ (ನ.ತ.); ತಂ-ಅನಘಸ್ಪೃಷ್ಟಮ್ ೭.ಅವಿದ್ಯಮಾನಾ ಜರಾ ಯಸ್ಯ ಸಃ-ಅಜರಃ (ನ.ಬ.); ತಂ-ಅಜರಮ್.

ವ್ಯಾಕರಣವಿಶೇಷ. ೧.ಅಕಾಮಂ-೧೭ನೆಯ ಶ್ಲೋಕದ ೩ನೆಯ ಟಿಪ್ಪಣಿಯನ್ನು (ಪು. ೧೨೭)

ನೋಡಿ. ೨. ತಪಸ್ವಿನಮ್-ತಪಸ್‌ಶಬ್ದಕ್ಕೆ ಉಳ್ಳ ಎಂಬರ್ಥದಲ್ಲಿ ವಿನಿ(=ವಿನ್) ಪ್ರತ್ಯಯವು ಬಂದಿದೆ. ೩.ವಿದುಃ-ವಿದಜ್ಞಾನೇ (ವಿದ್ ತಿಳಿ) ಎಂಬ ೨ನೆಯ ಗಣದ ಧಾತುವಿನ ಲಟ್, ಪ.ಪ್ರ.ಬ. ಈ ಧಾತು 'ಇರು' ಎಂಬರ್ಥದಲ್ಲಿ ೪ನೆಯ ಗಣ 'ವಿದ್ಯತೇ'; 'ತಿಳಿ' ಎಂಬರ್ಥದಲ್ಲಿ ೨ನೆಯ ಗಣ 'ವೇತ್ತಿ'; ಯೋಚಿಸು ಎಂಬರ್ಥದಲ್ಲಿ ೭ನೆಯ ಗಣ 'ವಿನ್ತೇ' ಪಡೆ ಎಂಬರ್ಥದಲ್ಲಿ ೬ನೆಯ ಗಣ: 'ವಿನ್ದತಿ', 'ವಿನ್ದತೇ'.

ವಿಚಾರ. ೧.ಪರಮಾತ್ಮನು ಎಲ್ಲರ ಹೃದಯದಲ್ಲಿಯೂ ಇದ್ದರೂ ಜ್ಞಾನಿಗಳಿಗೆ ಮಟ್ಟಿಗೆ ಅವನು ಇರುವದು ಗೊತ್ತಾಗುತ್ತದೆ ಎಂದು ವೇದಾಂತಿಗಳು ಹೇಳುವರು. ೨.ತಪಸ್ಸುಮಾಡುವವರು ಏನಾದರೂ ಬಯಕೆಯಿಂದ ಮಾಡುವರಷ್ಟೆ; ನಿಷ್ಕಾಮನಾದ ವಿಷ್ಣುವು ಜನರಿಗೆ ಒಳ್ಳೆಯ ಮಾರ್ಗವನ್ನು ತಿಳಿಸುವದಕ್ಕಾಗಿ ನಾರಾಯಣಋಷಿಯಾಗಿ ಬದರಿಕಾಶ್ರಮದಲ್ಲಿ ತಪಸ್ಸುಮಾಡುತ್ತಿರುವನೆಂದು ಪುರಾಣಗಳಲ್ಲಿ ವರ್ಣಿಸಿರುತ್ತದೆ. ೩.ದಯೆಯಿರುವವನಿಗೆ ದುಃಖವಿದ್ದೇ ಇರುವದು. ಈರ್ಷೀ ಘೃಣೀ ತ್ವಸಂತುಷ್ಟಃ ಕ್ರೋಧನೋ ನಿತ್ಯಶಂಕಿತಃ । ಪರಭಾಗ್ಯೋಪಜೀವೀ ಚ ಷಡೇತೇ ನಿತ್ಯದುಃಖಿತಾಃ (ಹೊಟ್ಟೆಕಿಚ್ಚಿನವನು, ದಯೆಯುಳ್ಳವನು, ತೃಪ್ತಿಯಿಲ್ಲದವನು, ಸಿಡುಕನು, ಅಂಜುಪುರುಕನು, ಮತ್ತೊಬ್ಬರ ಸಂಪತ್ತನ್ನನುಭವಿಸುವನು - ಇವರು ಆರು ಜನರೂ ನಿತ್ಯದುಃಖಿಗಳು)- ಎಂಬ ಭಾರತವಚನದಂತೆ ದಯೆಯಿರುವವನಿಗೆ ದುಃಖವಿರಲೇಬೇಕು. ಏಕೆಂದರೆ ಮತ್ತೊಬ್ಬರ ದುಃಖವನ್ನು ನೋಡಿ ತಡೆಯಲಾರದೆ ಇರುವ ದುಃಖವೇ ದಯೆಯು. ಆದರೆ ಪರಮಾತ್ಮನಿಗೆ ಮಾತ್ರ ಯಾವ ದುಃಖವೂ ಇಲ್ಲ, ಆದರೂ ದಯೆಯುಳ್ಳವನಾಗಿರುವನು. ೪.ಎಷ್ಟು ಹೆಚ್ಚು ಕಾಲ ಪ್ರಾಣಿಗಳು ಬದುಕಿರುವವೊ ಅಷ್ಟು ಮುಪ್ಪಾಗುವವು; ಪರಮಾತ್ಮನು ಹಾಗಲ್ಲ, ಅವನಿಗೆ ಕಾಲದಿಂದ ಯಾವ ವಿಕಾರವೂ ಆಗುವದಿಲ್ಲ. ೫.ಒಂದಕ್ಕೊಂದು ವಿರೋಧವಾಗಿರುವ ಗುಣಗಳು ಪರಮಾತ್ಮನಲ್ಲಿವೆ ಎಂದು ವರ್ಣಿಸಿದ್ದರಿಂದ ಪರಮಾತ್ಮನಲ್ಲಿ ಅಲೌಕಿಕಮಹಿಮೆಯಿದೆ ಎಂದು ಹೇಳಿದಂತೆ ಆಯಿತು.

ಸರ್ವಜ್ಞಸ್ತ್ವಮವಿಜ್ಞಾತಃ ಸರ್ವಯೋನಿಸ್ತ್ವಮಾತ್ಮಭೂಃ ।
ಸರ್ವಪ್ರಭುರನೀಶಸ್ತ್ವಮೇಕಸ್ತ್ವಂ ಸರ್ವರೂಪಭಾಕ್ ॥೨೦॥

ಅನ್ವಯ. [ತ್ವಂ ಸರ್ವಜ್ಞಃ ಅವಿಜ್ಞಾತಃ, ತ್ವಂ ಸರ್ವಯೋನಿಃ ಆತ್ಮಭೂಃ ತ್ವಂ ಸರ್ವಪ್ರಭುಃ ಅನೀಶಃ, ತ್ವಂ ಏಕಃ ಸರ್ವರೂಪಭಾಕ್]

ಅರ್ಥ. ತ್ವಂ-ನೀನು ಸರ್ವಜ್ಞಃ-ಎಲ್ಲವನ್ನೂ ಬಲ್ಲವನು ಅವಿಜ್ಞಾತಃ-ತಿಳಿಯಲ್ಪಟ್ಟವನಲ್ಲ; ತ್ವಂ-ನೀನು ಸರ್ವಯೋನಿಃ-ಎಲ್ಲಕ್ಕೂ ಕಾರಣನು ಆತ್ಮಭೂಃ - ನಿನ್ನಿಂದಲೆ ಹುಟ್ಟಿದವನು; ತ್ವಂ- ನೀನು ಸರ್ವಪ್ರಭುಃ-ಎಲ್ಲಕ್ಕೂ ಒಡೆಯನು ಅನೀಶಃ

- ಒಡೆಯನಿಲ್ಲದವನು; ತ್ವಂ-ನೀನು ಏಕಃ-ಒಬ್ಬನು ಸರ್ವರೂಪಭಾಕ್-ಎಲ್ಲ ರೂಪಗಳನ್ನೂ ಹೊಂದುವವನು.

ತಾತ್ಪರ್ಯ. ನೀನು ಎಲ್ಲವನ್ನೂ ಬಲ್ಲೆ, ನಿನ್ನ ತತ್ತ್ವವನ್ನು ಯಾರೂ ಅರಿಯರು; ನೀನು ಎಲ್ಲಕ್ಕೂ ಕಾರಣನು, ನಿನಗೆ ಬೇರೊಂದು ಕಾರಣವಿಲ್ಲ; ನೀನು ಎಲ್ಲಕ್ಕೂ ಒಡೆಯನು, ನಿನಗೆ ಬೇರೊಬ್ಬ ಒಡೆಯನಿಲ್ಲ; ನೀನು ಒಬ್ಬನೆ, ಎಲ್ಲಾ ರೂಪಗಳನ್ನೂ ಹೊಂದಿರುತ್ತಿಯೆ.

ವಿಗ್ರಹವಾಕ್ಯಗಳು. ೧.ಜಾನಾತೀತಿ-ಜ್ಞಃ (ಕೃ.ವೃ.); ಸರ್ವಸ್ಯ ಜ್ಞಃ-ಸರ್ವಜ್ಞಃ (ಷ.ತ.). ೨.ನ ವಿಜ್ಞಾತಃ-ಅವಿಜ್ಞಾತಃ (ನ.ತ.). ೩. ಸರ್ವಸ್ಯ ಯೋನಿಃ - ಸರ್ವಯೋನಿಃ (ಷ.ತ.). ೪.ಆತ್ಮನಃ ಭವತೀತಿ ಆತ್ಮಭೂಃ (ಉ.ಸ.). ೫. ಪ್ರಭವತೀತಿ- ಪ್ರಭುಃ (ಕೃ.ವೃ.); ಸರ್ವಸ್ಯ ಪ್ರಭುಃ-ಸರ್ವಪ್ರಭುಃ (ಷ.ತ.). ೬.ಅವಿದ್ಯಮಾನಃ ಈಶಃ ಯಸ್ಯ ಸಃ-ಅನೀಶಃ (ನ.ಬ). ೭.ಸರ್ವಾಣಿ ಚ ತಾನಿ ರೂಪಾಣಿ ಚ-ಸರ್ವರೂಪಾಣಿ (ವಿ. ಪೂ. ಕ.); ಸರ್ವರೂಪಾಣಿ ಭಜತೇ ಇತಿ-ಸರ್ವರೂಪಭಾಕ್ (ಉಪ.ಸ.).

ವ್ಯಾಕರಣವಿಶೇಷ. ೧.ಸರ್ವಜ್ಞಃ-ಇಲ್ಲಿ ಜ್ಞಃ ಎಂಬುದು ಸ್ವತಂತ್ರವಾಗಿ ಆಗಿರುವ ಕೃದಂತ, ಆದ್ದರಿಂದ ಉಪಪದಸಮಾಸವಲ್ಲ; ಸರ್ವಂ ಜಾನಾತೀತಿ-ಸರ್ವಜ್ಞಃ ಎಂದು ವಿಗ್ರಹಬಿಡಿಸಬಾರದು. ೨. ಆತ್ಮಭೂಃ-ಊಕಾರಾನ್ತ ಪುಲ್ಲಿಂಗ (ಆತ್ಮಭೂಃ, ಆತ್ಮಭುವೌ, ಆತ್ಮಭುವಃ) ೩. ಸರ್ವರೂಪಭಾಕ್-ಜಕಾರಾನ್ತ ಪುಲ್ಲಿಂಗ; (ಸರ್ವರೂಪಭಾಕ್, ೦ಭಾಜೌ ೦ಭಾಜಃ); ಭಜ್‌ಧಾತುವಿಗೆ ಹಿಂದೆ ಸುಬನ್ತವಾಗಲಿ ಉಪಸರ್ಗವಾಗಲಿ ಇದ್ದರೆ ಸಮಾಸದಲ್ಲಿ 'ಣ್ವಿ' ಎಂಬ ಪ್ರತ್ಯಯ ಬಂದು 'ಭಾಕ್' ಎಂಬ ರೂಪವಾಗುವದು.

ವಿಚಾರ. ಪರಮಾತ್ಮನು ಒಬ್ಬನೇ ಇದ್ದು ಎಲ್ಲಾ ರೂಪಗಳನ್ನು ಧರಿಸುವನೆಂದು ಹೇಳಿರುವದರಿಂದ ಶಂಕರಾಚಾರ್ಯರೇ ಮುಂತಾದವರು ಹೇಳಿರುವ ಉಪನಿಷತ್‌ಸಮ್ಮತವಾದ ಅದ್ವೈತವಾದವನ್ನು ಕವಿಯು ಅಂಗೀಕರಿಸಿರುವನೆಂದು ಹೇಳಬಹುದು.

ಸಪ್ತಸಾಮೋಪಗೀತಂ ತ್ವಾಂ ಸಪ್ತಾರ್ಣವಜಲೇಶಯಮ್ ।
ಸಪ್ತಾರ್ಚಿರ್ಮುಖಮಾಚಖ್ಯುಃ ಸಪ್ತಲೋಕೈಕಸಂಶ್ರಯಮ್ ॥೨೧॥

ಅನ್ವಯ. [ತ್ವಾಂ ಸಪ್ತಸಾಮೋಪಗೀತಂ ಸಪ್ತಾರ್ಣವಜಲೇಶಯಂ ಸಪ್ತಾರ್ಚಿರ್ಮುಖಂ ಸಪ್ತಲೋಕೈಕಸಂಶ್ರಯಮ್ ಆಚಖ್ಯುಃ.]

ಅರ್ಥ. ತ್ವಾಂ- ನಿನ್ನನ್ನು ಸಪ್ತಸಾಮೋಪಗೀತಂ-(ಸಪ್ತ-ಏಳು ಸಾಮ-ಸಾಮಗಳಿಂದ ಉಪಗೀತಂ-ಗಾನಮಾಡಲ್ಪಟ್ಟ) ಏಳು ಸಾಮಗಳಿಂದ ಗಾನಮಾಡಿಸಿಕೊಳ್ಳು

ವವನೆಂದೂ ಸಪ್ತಾರ್ಣವಜಲೇಶಯಮ್- (ಸಪ್ತ-ಏಳು ಅರ್ಣವ-ಸಮುದ್ರಗಳ ಜಲೇ-ನೀರಿನಲ್ಲಿ ಶಯಮ್-ಮಲಗಿರುವ) ಏಳು ಸಮುದ್ರಗಳ ನೀರಿನಮೇಲೂ ಮಲಗಿರುವವನೆಂದೂ ಸಪ್ತಾರ್ಚಿರ್ಮುಖಂ- (ಸಪ್ತ-ಏಳು ಅರ್ಚಿಃ-ಕಿರಣಗಳುಳ್ಳ ಅಗ್ನಿಯು ಮುಖಂ- ಮುಖವಾಗುಳ್ಳ) ಅಗ್ನಿಮುಖನೆಂದೂ ಸಪ್ತಲೋಕೈಕಸಂಶ್ರಯಂ - (ಸಪ್ತ-ಏಳು ಲೋಕ-ಲೋಕಗಳಿಗೆ ಏಕ- ಒಬ್ಬನೆ ಸಂಶ್ರಯಮ್- ಆಶ್ರಯನಾದ) ಏಳು ಲೋಕಗಳಿಗೂ ತಾನೊಬ್ಬನೇ ಆಧಾರನಾದವನೆಂದೂ ಆಚಖ್ಯುಃ-ಹೇಳಿರುತ್ತಾರೆ.

ವಿಗ್ರಹವಾಕ್ಯಗಳು. ೧.ಸಪ್ತಭಿಃ ಸಾಮಭಿಃ ಉಪಗೀತಂ-ಸಪ್ತಸಾಮೋಪಗೀತಮ್ (ದ್ವಿಗು,ತೃ.ತ.). ೨.ಸಪ್ತಾನಾಂ ಅರ್ಣವಾನಾಂ ಜಲಂ-ಸಪ್ತಾರ್ಣವಜಲಮ್ (ದ್ವಿ.ಷ.ತ.); ತಸ್ಮಿನ್-ಸಪ್ತಾರ್ಣವಜಲೇ; ಸಪ್ತಾರ್ಣವಜಲೇ ಶೇತೇ ಇತಿ - ಸಪ್ತಾರ್ಣವಜಲೇಶಯಃ (ಉ.ಸ.); ತಂ-ಸಪ್ತಾರ್ಣವಜಲೇಶಯಮ್. ೩.ಸಪ್ತ ಅರ್ಚೀಂಷಿ ಯಸ್ಯ ಸಃ-ಸಪ್ತಾರ್ಚಿಃ (ಷ.ಬ.); ಸಪ್ತಾರ್ಚಿಃ ಮುಖಂ ಯಸ್ಯ ಸಃ- ಸಪ್ತಾರ್ಚಿರ್ಮುಖಃ (ಷ.ಬ.); ತಂ-ಸಪ್ತಾರ್ಚಿರ್ಮುಖಂ. ೪.ಏಕಶ್ಚಾಸೌ ಸಂಶ್ರಯಶ್ಚ -ಏಕಸಂಶ್ರಯಃ (ವಿ.ಪೂ.ಕ.); ಸಪ್ತಾನಾಂ ಲೋಕಾನಾಂ ಏಕಸಂಶ್ರಯಃ- ಸಪ್ತ ಲೋಕೈಕಸಂಶ್ರಯಃ (ದ್ವಿ.ಷ.ತ.); ತಂ- ಸಪ್ತಲೋಕೈಕಸಂಶ್ರಯಮ್.

ವ್ಯಾಕರಣವಿಶೇಷ. ೧. ಸಪ್ತಸಾಮೋಪಗೀತಂ-ದಿಗ್ವಾಚಕಶಬ್ದವೂ ಸಂಖ್ಯಾಪೂರ್ವಪದವಾಗಿರುವ ಶಬ್ದವೂ ಸಮಾನಾಧಿಕರಣಪದದೊಡನೆ ಸಮಾಸವಾಗಬೇಕಾದರೂ ಸಂಜ್ಞಾನಾಮ (proper name)ವಾಗಬೇಕು. ಉದಾ: 'ಸಪ್ತರ್ಷಯಃ'; ಮಿಕ್ಕ ಕಡೆಗಳಲ್ಲಿ ಇವು ಸಮಾಸವಾಗುವದಿಲ್ಲ. ಆದರೆ ಮುಂದೆ ತದ್ಧಿತಪ್ರತ್ಯಯವನ್ನು ಸೇರಿಸಬೇಕಾಗಿದ್ದರೂ ಮುಂದೆ ಇನ್ನೊಂದು ಉತ್ತರಪದದೊಡನೆ ಸೇರಿ ಸಮಾಸವಾಗಬೇಕಾಗಿದ್ದರೂ ಸಮಾಹಾರ (aggregate)ವೆಂಬ ಅರ್ಥವನ್ನು ಕೊಟ್ಟರೂ ಸಮಾಸವಾಗಬಹುದು. ಉದಾ: (೧) 'ಷಾಣ್ಮಾತುರಃ' ಇಲ್ಲಿ ತದ್ಧಿತಪ್ರತ್ಯಯ ಸೇರಿದೆ; (೨) 'ಪಂಚಗವಮ್' ಇಲ್ಲಿ ಸಮಾಹಾರವೆಂಬರ್ಥವಿದೆ; (೩) 'ಸಪ್ತಸಾಮೋಪಗೀತಂ,' ಇಲ್ಲಿ 'ಸಪ್ತಸಾಮ' ಎಂಬ ಸಮಾಸವಾಗಿ 'ಉಪಗೀತಂ' ಎಂಬ ಉತ್ತರಪದದೊಡನೆ ಮತ್ತೆ ಸಮಾಸವಾಗಿದೆ. ಈ ಮೂರು ಸಂದರ್ಭಗಳಲ್ಲಿ ಆದ ಸಂಖ್ಯಾಸಮಾಸಕ್ಕೆ 'ದ್ವಿಗು'ವೆಂದು ಹೆಸರು. 'ಸಪ್ತಾರ್ಣವ' 'ಸಪ್ತಲೋಕ' ಎಂಬ ಸಮಾಸಗಳೂ 'ದ್ವಿಗು'ಗಳೆ. ೨.ಸಪ್ತಾರ್ಚಿಃ-ಸಕಾರಾನ್ತ ಪುಲ್ಲಿಂಗ; (ಸಪ್ತಾರ್ಚಿಃ ಸಪ್ತಾರ್ಚಿಷೌ ಸಪ್ತಾರ್ಚಿಷಃ). ೩. ಜಲೇಶಯಮ್-'ಶಯ', 'ವಾಸ', 'ವಸಿನ್' ಈ ಮಾತುಗಳು ಪರವಾದರೆ ವ್ಯಂಜನಾಂತವಾದ ಮತ್ತು ಅಕಾರಾನ್ತವಾದ ಶಬ್ದಗಳಿಗೆ ಸೇರಿರುವ ಕಾಲವಾಚಕಗಳಲ್ಲದ ಶಬ್ದಗಳ ಸಪ್ತಮೀವಿಭಕ್ತಿಯು ವಿಕಲ್ಪವಾಗಿ ಲೋಪವಾಗುವದು. 'ಜಲಶಯ' 'ಜಲೇಶಯ' ಎರಡೂ ಸರಿ. ೪.ಏಕಸಂಶ್ರಯಂ- ಏಕಶಬ್ದವು ಸಂಖ್ಯಾವಾಚಕವಾದರೂ ೧ನೆಯ ಟಿಪ್ಪಣಿಯಲ್ಲಿ ಹೇಳಿದ ನಿಯಮವು ಇದಕ್ಕಿಲ್ಲ. ೫.(ಆಚಖ್ಯುಃ)-ಚಕ್ಷಿಙ್

ವ್ಯಕ್ತಾಯಾಂ ವಾಚಿ (ಚಕ್ಷ್-ಮಾತಾಡು) ಎಂಬ ೨ನೆಯ ಗಣದ ಧಾತುವಿನ ಲಿಟ್. ಪ.ಪ್ರ.ಬ.

ವಿಚಾರ. ೧.ರಥಂತರ, ಬೃಹತ್ಸಾಮ, ವಾಮದೇವ್ಯ, ವೈರೂಪ್ಯ, ಪಾವಮಾನ, ವೈರಾಜ, ಚಾಂದ್ರಮಸ-ಇವು ಏಳು ಸಾಮಗಳು. ೨.ಲವಣ (ಉಪ್ಪು), ಇಕ್ಷು(ಕಬ್ಬಿನ ರಸ), ಸುರಾ (ಹೆಂಡ), ಸರ್ಪಿಸ್(ತುಪ್ಪ), ದಧಿ(ಮೊಸರು), ಕ್ಷೀರ (ಹಾಲು), ಶುದ್ಧಜಲ(ಸಿಹಿನೀರು)-ಇವು ಏಳು ಸಮುದ್ರಗಳು. ೩.ಕಾಲೀ ಕರಾಲೀ ಮನೋಜವಾ ಸುಲೋಹಿತಾ ಸುಧೂಮ್ರವರ್ಣಾ ಸ್ಫುಲಿಂಗಿನೀ ವಿಶ್ವರುಚೀ - ಇವು ಅಗ್ನಿಯ ನಾಲಗೆಗಳೆಂದು ಮುಂಡಕೋಪನಿಷತ್ತಿನಲ್ಲಿದೆ; ಹಿರಣ್ಯಾ ಕನಕಾ ರಕ್ತಾ ಕೃಷ್ಣಾ ಚ ಸುಪ್ರಭಾ ಚಾನ್ಯಾ ಅತಿರಿಕ್ತಾ ಬಹುರೂಪೇತಿ ಚ ಸಪ್ತ ಸಪ್ತಾರ್ಚಿಷೋ ಜಿಹ್ವಾಃ ॥ ಎಂದು ಹಲಾಯುಧ ನಿಘಂಟು. ೪.ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಂ- ಇವು ಏಳು ಲೋಕಗಳು.

ಚತುರ್ವರ್ಗಫಲಂ ಜ್ಞಾನಂ ಕಾಲಾವಸ್ಥಾಶ್ಚತುರ್ಯುಗಾಃ ।
ಚತುರ್ವರ್ಣಮಯೋ ಲೋಕಸ್ತ್ವತ್ತಃ ಸರ್ವಂ ಚತುರ್ಮುಖಾತ್ ॥೨೨॥

ಅನ್ವಯ. [ಚತುರ್ವರ್ಗಫಲಂ ಜ್ಞಾನಂ, ಚತುರ್ಯುಗಾಃ ಕಾಲಾವಸ್ಥಾಃ, ಚತುರ್ವರ್ಣಮಯೋ ಲೋಕಃ, ಸರ್ವಂ ಚತುರ್ಮುಖಾತ್ ತ್ವತ್ತಃ (ಜಾತಂ).]

ಅರ್ಥ. ಚತುರ್ವರ್ಗಫಲಂ-ಚತುರ್ವರ್ಗವೆಂಬ ಫಲವುಳ್ಳ ಜ್ಞಾನಂ-ತಿಳಿವು ಚತುರ್ಯುಗಾಃ-ಚತುರ್ಯುಗಗಳುಳ್ಳ ಕಾಲಾವಸ್ಥಾಃ - ಕಾಲದ ಅವಸ್ಥೆಗಳು ಚತುರ್ವರ್ಣಮಯಃ-ನಾಲ್ಕು ವರ್ಣಗಳಿಂದ ತುಂಬಿರುವ ಲೋಕಃ-ಲೋಕವು ಸರ್ವಂ-ಇದೆಲ್ಲವೂ ಚತುರ್ಮುಖಾತ್-ನಾಲ್ಕು ಮುಖಗಳುಳ್ಳ (ಬ್ರಹ್ಮಸ್ವರೂಪನಾದ) ತ್ವತ್ತಃ-ನಿನ್ನ ದೆಸೆಯಿಂದ ಜಾತಂ-ಉಂಟಾಗಿದೆ.

ವಿಗ್ರಹವಾಕ್ಯಗಳು. ೧.ಚತುರ್ಣಾಂ ವರ್ಗಃ-ಚತುರ್ವರ್ಗಃ (ಷ.ತ.); ಚತುರ್ವರ್ಗಃ ಫಲಂ ಯಸ್ಯ ತತ್-ಚತುರ್ವರ್ಗಫಲಮ್(ಷ.ಬ). ೨.ಚತ್ವಾರಿ ಯುಗಾನಿ ಯಾಸು ತಾಃ-ಚತುರ್ಯುಗಾಃ (ಸ.ಬ.). ೩.ಕಾಲಸ್ಯ ಅವಸ್ಥಾಃ ಕಾಲಾವಸ್ಥಾಃ (ಷ.ತ.). ೪.ಚತ್ವಾರೋ ವರ್ಣಾಃ ಪ್ರಕೃತಾಃ ಉಚ್ಯನ್ತೇ ಅಸ್ಮಿನ್ನಿತಿ-ಚತುರ್ವರ್ಣಮಯಃ (ದ್ವಿ; ತ.ವೃ.). ೫.ಚತ್ವಾರಿ ಮುಖಾನಿ ಯಸ್ಯ ಸಃ-ಚತುರ್ಮುಖಃ (ಷ.ಬ.); ತಸ್ಮಾತ್-ಚತುರ್ಮುಖಾತ್.

ವ್ಯಾಕರಣವಿಶೇಷ. ೧.ಚತುರ್ವರ್ಣಮಯಃ-ಇಲ್ಲಿ 'ಮಯ' ಎಂಬ ತದ್ಧಿತಪ್ರತ್ಯಯವನ್ನು ಹಚ್ಚುವದಕ್ಕಾಗಿ ಚತುರ್ವರ್ಣವೆಂಬ ದ್ವಿಗುಸಮಾಸವಾಗಿದೆ; ೨೧ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು ನೋಡಿ. (ನಾಲ್ಕು ವರ್ಣಗಳು) ಪ್ರಚುರವಾಗಿದೆ ಎಂಬರ್ಥದಲ್ಲಿ ಮಯಟ್ (=ಮಯ) ಪ್ರತ್ಯಯವು

ಬಂದಿದೆ.

ವಿಚಾರ. ೧.ಧರ್ಮ, ಅರ್ಥ, ಕಾಮ-ಇವು ಮೂರು ಸೇರಿದರೆ ತ್ರಿವರ್ಗವೆಂದು ಹೆಸರು; ಧರ್ಮ, ಅರ್ಥ, ಕಾಮ, ಮೋಕ್ಷ-ಎಂಬ ನಾಲ್ಕು ಪುರುಷಾರ್ಥಗಳು ಸೇರಿದರೆ ಚತುರ್ವರ್ಗವೆಂದು ಹೆಸರು. ೨.ಕೃತ, ತ್ರೇತಾ, ದ್ವಾಪರ, ಕಲಿ - ಇವು ಚತುರ್ಯುಗಗಳು. ೩.ವಿಷ್ಣುವು ಬ್ರಹ್ಮನ ರೂಪದಿಂದ ಎಲ್ಲವನ್ನೂ ಸೃಷ್ಟಿಸುವನೆಂದು ಇಲ್ಲಿ ವರ್ಣಿಸಿದೆ. ೧೭ನೆಯ ಶ್ಲೋಕವನ್ನು (ಪು. ೧೨೬) ನೋಡಿ.

ಅಭ್ಯಾಸನಿಗೃಹೀತೇನ ಮನಸಾ ಹೃದಯಾಶ್ರಯಮ್ ।
ಜ್ಯೋತಿರ್ಮಯಂ ವಿಚಿನ್ವನ್ತಿ ಯೋಗಿನಸ್ತ್ವಾಂ ವಿಮುಕ್ತಯೇ ॥೨೩॥

ಅನ್ವಯ. [ಅಭ್ಯಾಸನಿಗೃಹೀತೇನ ಮನಸಾ ಯೋಗಿನಃ ಹೃದಯಾಶ್ರಯಂ ಜ್ಯೋತಿರ್ಮಯಂ ತ್ವಾಂ ವಿಮುಕ್ತಯೇ ವಿಚಿನ್ವನ್ತಿ.]

ಅರ್ಥ. ಅಭ್ಯಾಸನಿಗೃಹೀತೇನ-ಅಭ್ಯಾಸದಿಂದ ಬಿಗಿಹಿಡಿಯಲ್ಪಟ್ಟ ಮನಸಾ - ಮನಸ್ಸಿನಿಂದ ಯೋಗಿನಃ-ಯೋಗಿಗಳು ಹೃದಯಾಶ್ರಯಂ-ಹೃದಯವನ್ನು ಆಶ್ರಯಿಸಿರುವ ಜ್ಯೋತಿರ್ಮಯಂ-ಜ್ಯೋತಿಯ ರೂಪನಾದ ತ್ವಾಂ-ನಿನ್ನನ್ನು ವಿಮುಕ್ತಯೇ - ಮೋಕ್ಷಕ್ಕಾಗಿ ವಿಚಿನ್ವನ್ತಿ-ಹುಡುಕುತ್ತಾರೆ.

ತಾತ್ಪರ್ಯ. ಯೋಗಿಗಳಾದವರು ತಮ್ಮ ಮನಸ್ಸನ್ನು ಬಿಗಿಹಿಡಿದುಕೊಂಡು ಹೃದಯದಲ್ಲಿ ಚೈತನ್ಯರೂಪನಾಗಿರುವ ನಿನ್ನನ್ನು ಕಾಣಬೇಕೆಂದು ಪ್ರಯತ್ನಮಾಡುತ್ತಾರೆ.

ವಿಗ್ರಹವಾಕ್ಯಗಳು. ೧.ಅಭ್ಯಾಸೇನ ನಿಗೃಹೀತಂ-ಅಭ್ಯಾಸನಿಗೃಹೀತಂ (ತೃ.ತ.); ತೇನ-ಅಭ್ಯಾಸನಿಗೃಹೀತೇನ. ೨.ಹೃದಯಂ ಆಶ್ರಯತೇ ಇತಿ-ಹೃದಯಾಶ್ರಯಃ (ಉ.ಸ.); ತಂ-ಹೃದಯಾಶ್ರಯಮ್. ೩. ಜ್ಯೋತಿಃ ಪ್ರಕೃತಂ ಉಚ್ಯತೇಽಸ್ಮಿನ್ನಿತಿ- ಜ್ಯೋತಿರ್ಮಯಃ (ತ.ವೃ.); ತಂ-ಜ್ಯೋತಿರ್ಮಯಮ್. ೪.(ಪ್ರಶಸ್ತಂ) ಯೋಗಃ ಏಷಾಂ ಅಸ್ತೀತಿ-ಯೋಗಿನಃ(ತ.ವೃ).

ವ್ಯಾಕರಣವಿಶೇಷ. ೧.ಜ್ಯೋತಿರ್ಮಯಮ್-ಎಂಬಲ್ಲಿ ಪ್ರಾಚುರ್ಯಾರ್ಥದಲ್ಲಿ ಉಪಯೋಗಿಸಿರುವಂತೆ ವ್ಯಾಕರಣರೀತಿಯಿಂದ ಹೇಳಬೇಕಾದರೂ ನಿಜವಾಗಿ ಪರಮಾತ್ಮನಲ್ಲಿ ಜ್ಯೋತಿಗಿಂತ ಬೇರೆಯೇನೂ ಇರುವದಿಲ್ಲವಾದ್ದರಿಂದ ಜ್ಯೋತಿರೇವ-ಜ್ಯೋತಿರ್ಮಯಃ ಎಂದು ಅತ್ಯಂತ ಸ್ವಾರ್ಥವನ್ನು ಹೇಳುವಂತೆ ವಿಗ್ರಹಬಿಡಿಸುವದು ಉತ್ತಮವಾಗಿರುವದು. ೨.ವಿಚಿನ್ವನ್ತಿ (೫)-ಚಿಞ್ ಚಯನೇ (ಚಿ-ಕೂಡಿಹಾಕು) ಎಂಬ ೫ನೆಯ ಗಣದ ಧಾತುವಿಗೆ ವಿ ಎಂಬ ಉಪಸರ್ಗವು ಸೇರಿ ಹುಡುಕು ಎಂದರ್ಥವಾಗಿದೆ. ಲಟ್, ಪ.ಪ್ರ.ಬ.

ವಿಚಾರ. ೧.ಯೋಗಕ್ಕೆ ಅಭ್ಯಾಸವೆಂದೂ ವೈರಾಗ್ಯವೆಂದೂ ಎರಡು ಅಂಗಗಳಿರುವವು. ಅಭ್ಯಾಸವೆಂದರೆ ಮನಸ್ಸನ್ನು ಪರಮಾತ್ಮನಲ್ಲಿಯೆ ಮತ್ತೆ ಮತ್ತೆ ಇಟ್ಟು ಅತ್ತಿತ್ತ ಹೋಗದಂತೆ ಮಾಡುವ ಪ್ರಯತ್ನವು; ವೈರಾಗ್ಯವೆಂದರೆ ಹೊರಗಿನ ವಿಷಯಗಳಲ್ಲಿ ದೋಷವನ್ನು ಕಂಡು ಅವುಗಳ ಕಡೆಗೆ ಮನಸ್ಸುಹಾಕದೆ ಇರುವದು. ೨.ಪರಮಾತ್ಮನು ಎಲ್ಲೆಲ್ಲಿಯೂ ಇರುವನಾದರೂ ನಮ್ಮ ಹೃದಯದಲ್ಲಿ ಅವನನ್ನು ಧ್ಯಾನಮಾಡಿದರೆ ಬೇಗ ಅವನ ಸ್ವರೂಪವನ್ನು ಗೊತ್ತುಮಾಡಿಕೊಳ್ಳಬಹುದೆಂದು ಶಾಸ್ತ್ರದಲ್ಲಿ ಹೇಳಿದೆ. ೩.ಪರಮಾತ್ಮನು ಜ್ಯೋತಿರ್ಮಯನೆಂದರೆ ದೀಪ, ಸೂರ್ಯ ಪ್ರಕಾಶ - ಮುಂತಾದವುಗಳಂತೆ ಎಂದು ಅರ್ಥವಲ್ಲ. ಬೆಳಕು ಹೊರಗಿನ ಪದಾರ್ಥವನ್ನು ಬೆಳಗುವದಕ್ಕೂ ಸಾಧನವಾಗಿ ತಾನೂ ಬೆಳಗುವಂತೆ ಜ್ಞಾನವು ಎಲ್ಲವನ್ನೂ ತಿಳಿಸುವದು, ತನ್ನನ್ನು ತಿಳಿಸುವದಕ್ಕೆ ಮತ್ತೇನನ್ನೂ ಬಯಸದೆ ತಾನೇ ತೋರಿಕೊಳ್ಳುವದು. ಆದ್ದರಿಂದ ಜ್ಞಾನವನ್ನು ಜ್ಯೋತಿಯೆಂದು ಶಾಸ್ತ್ರದಲ್ಲಿ ಅಲ್ಲಲ್ಲಿ ಕರೆದಿರುತ್ತದೆ.

ಅಜಸ್ಯ ಗೃಹ್ಣತೋ ಜನ್ಮ ನಿರೀಹಸ್ಯ ಹತದ್ವಿಷಃ ।
ಸ್ವಪತೋ ಜಾಗರೂಕಸ್ಯ ಯಾಥಾರ್ಥ್ಯಂ ವೇದ ಕಸ್ತವ ॥೨೪॥

ಅನ್ವಯ. [ಅಜಸ್ಯ ಜನ್ಮ ಗೃಹ್ಣತಃ, ನಿರೀಹಸ್ಯ ಹತದ್ವಿಷಃ, ಸ್ವಪತಃ ಜಾಗರೂಕಸ್ಯ ತವ ಯಾಥಾರ್ಥ್ಯಂ ಕಃ ವೇದ?]

ಅರ್ಥ. ಅಜಸ್ಯ-ಜನ್ಮವಿಲ್ಲದವನೂ ಜನ್ಮ-ಜನ್ಮವನ್ನು ಗೃಹ್ಣತಃ-ತೆಗೆದು ಕೊಳ್ಳುವನೂ; ನಿರೀಹಸ್ಯ- ಕ್ರಿಯೆಯಿಲ್ಲದವನೂ ಹತದ್ವಿಷಃ-(ಹತ-ಕೊಲ್ಲಲ್ಪಟ್ಟ ದ್ವಿಷಃ-ಶತ್ರುಗಳುಳ್ಳ) ಶತ್ರುಗಳನ್ನು ಕೊಂದವನೂ ಸ್ವಪತಃ-ನಿದ್ರಿಸುತ್ತಿರುವವನೂ ಜಾಗರೂಕಸ್ಯ-ಎಚ್ಚರವಾಗಿರುವವನೂ ಆದ ತವ-ನಿನ್ನ ಯಾಥಾರ್ಥ್ಯಂ-ನಿಜವಾದ ಸ್ವರೂಪವನ್ನು ಕಃ-ಯಾವಾತನು ವೇದ-ಬಲ್ಲನು?

ತಾತ್ಪರ್ಯ. ನೀನು ಹುಟ್ಟಿಲ್ಲದವನಾಗಿದ್ದರೂ ಅವತಾರಮಾಡುತ್ತೀಯೆ, ಯಾವ ಕ್ರಿಯೆಯನ್ನೂ ಮಾಡದವನಾದರೂ ಶತ್ರುಗಳನ್ನು ಕೊಂದಿರುತ್ತೀಯೆ, ನಿದ್ರೆಮಾಡುವಾಗಲೂ ಎಚ್ಚರವಾಗಿರುತ್ತೀಯೆ; ಹೀಗಿರುವ ನಿನ್ನ ನಿಜವಾದ ಸ್ವರೂಪವನ್ನು ತಿಳಿದವರು ಯಾರೂ ಇಲ್ಲ.

ವಿಗ್ರಹವಾಕ್ಯಗಳು. ೧.ನ ಜಾಯತೇ ಇತಿ-ಅಜಃ (ಕೃ.ವೃ.); ತಸ್ಯ-ಅಜಸ್ಯ. ೨.ಗೃಹ್ಣಾತಿ ಇತಿ-ಗೃಹ್ಣನ್ (ಕೃ.ವೃ.); ತಸ್ಯ-ಗೃಹ್ಣತಃ. ೩.ನಿರ್ಗತಾ ಈಹಾ ಯಸ್ಮಾತ್ ಸಃ-ನಿರೀಹಃ (ಪ್ರಾ.ಬ.); ತಸ್ಯ-ನಿರೀಹಸ್ಯ .೪.ಹತಾಃ ದ್ವಿಷಃ ಯೇನ

ಸಃ- ಹತದ್ವಿಟ್ (ತೃ.ಬ.); ತಸ್ಯ-ಹತದ್ವಿಷಃ. ೫.ಜಾಗರ್ತೀತಿ-ಜಾಗರೂಕಃ (ಕೃ.ವೃ.). ೬.ಅರ್ಥಮನತಿಕ್ರಮ್ಯ ವರ್ತತ ಇತಿ- ಯಥಾರ್ಥಃ (ಸಾ.ಸ.) ಅವ್ಯಯೀಭಾವಸಮಾಸ; ಯಥಾರ್ಥಸ್ಯ ಭಾವಃ- ಯಾಥಾರ್ಥ್ಯಮ್ (ತ.ವೃ.).

ವ್ಯಾಕರಣವಿಶೇಷ. ೧. ಗೃಹ್ಣತಃ-ತಕಾರಾನ್ತ ಪುಲ್ಲಿಂಗ; (ಗೃಹ್ಣನ್, ಗೃಹ್ಣನ್ತೌ, ಗೃಹ್ಣನ್ತಃ). ಇದು 'ತವ' ಎಂಬುದಕ್ಕೆ ವಿಶೇಷಣವಾದ್ದರಿಂದ ಷಷ್ಠೀವಿಭಕ್ತಿ. ೨.ಜನ್ಮ-ನಕಾರಾನ್ತ ನಪುಂಸಕ. ೩.ಹತದ್ವಿಷಃ-ಷಕಾರಾನ್ತ ಪುಲ್ಲಿಂಗ;(ಹತದ್ವಿಟ್, ಂದ್ವಿಷೌ, ಂದ್ವಿಷಃ). ೩.ಸ್ವಪತಃ - ಷಷ್ಠೀ (ಸ್ವಪನ್, ಸ್ವಪನ್ತೌ, ಸ್ವಪನ್ತಃ). ೪.ಯಾಥಾರ್ಥ್ಯಂ- ಭಾವಾರ್ಥದಲ್ಲಿ (abstract) ಷ್ಯಞ್ (ಯ) ಪ್ರತ್ಯಯ ಬಂದಿದೆ. ೫.ವೇದ-(೪) ವಿದಜ್ಞಾನೇ (ವಿದ್-೩೪) ಎಂಬ ೨ನೆಯ ಗಣದ ಧಾತುವಿನ ಲಿಟ್.ಪ.ಪ್ರ.ಏ.

ವಿಚಾರ. ೧.ಪರಮಾತ್ಮನ ನಿಜವಾದ ಸ್ವರೂಪಕ್ಕೆ 'ನಿರ್ಗುಣ'ವೆಂದು ಹೆಸರು; ವ್ಯವಹಾರದಲ್ಲಿ ಅವನಲ್ಲಿ ಆರೋಪಿಸಿರುವ ರೂಪವನ್ನು 'ಸಗುಣ'ವೆನ್ನು ತ್ತಾರೆ. ನಿರ್ಗುಣರೂಪದಲ್ಲಿ ಪರಮಾತ್ಮನು ಹುಟ್ಟುವದಿಲ್ಲ, ಯಾವ ಕೆಲಸವನ್ನೂ ಮಾಡುವದಿಲ್ಲ, ಅವನಿಗೆ ನಿದ್ರೆ ಮುಂತಾದ ಅವಸ್ಥೆಗಳಿಲ್ಲ. ಆದರೆ ಸಗುಣರೂ ಪದಲ್ಲಿ ಪರಮಾತ್ಮನು ಆಗಾಗ್ಗೆ ಅವತಾರಮಾಡಿ ದೈತ್ಯರನ್ನು ಕೊಲ್ಲುತ್ತಾನೆಂದೂ ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಯೋಗನಿದ್ರೆಯನ್ನು ಅನುಭವಿಸುತ್ತಾ ಮಲ ಗಿರುವನೆಂದೂ ಪುರಾಣಗಳಲ್ಲಿ ವರ್ಣಿಸಿರುತ್ತದೆ. ಕವಿಯು ಇದನ್ನು ವಿರೋಧಾ ಭಾಸವಾಗುವಂತೆ (paradox) ವರ್ಣಿಸಿರುತ್ತಾನೆ.

ಶಬ್ದಾದೀನ್ವಿಷಯಾನ್ಭೋಕ್ತುಂ ಚರಿತುಂ ದುಶ್ಚರಂ ತಪಃ ।
ಪರ್ಯಾಪ್ತೋಽಸಿ ಪ್ರಜಾಃ ಪಾತುಮೌದಾಸೀನ್ಯೇನ ವರ್ತಿತುಮ್ ॥೨೫॥

ಅನ್ವಯ. [ಶಬ್ದಾದೀನ್ ವಿಷಯಾನ್ ಭೋಕ್ತುಂ; ದುಶ್ಚರಂ ತಪಃ ಚರಿತುಂ; ಪ್ರಜಾಃ ಪಾತುಂ; ಔದಾಸೀನ್ಯೇನ ವರ್ತಿತುಂ, ಪರ್ಯಾಪ್ತಃ ಅಸಿ.]

ಅರ್ಥ. ಶಬ್ದಾದೀನ್-ಶಬ್ದವೇ ಮುಂತಾದ ವಿಷಯಾನ್-ವಿಷಯಗಳನ್ನು ಭೋಕ್ತುಂ-ಅನುಭವಿಸುವದಕ್ಕೆ ದುಶ್ಚರಂ-ಮಾಡುವದಕ್ಕೆ ಕಷ್ಟವಾದ ತಪಃ-ತಪಸ್ಸನ್ನು ಚರಿತುಂ-ಮಾಡುವದಕ್ಕೆ ಪ್ರಜಾಃ-ಪ್ರಜೆಗಳನ್ನು ಪಾತುಂ-ಕಾಪಾಡುವದಕ್ಕೆ ಔದಾಸೀ ನ್ಯೇನ-ಉದಾಸೀನತೆಯಿಂದ ವರ್ತಿತುಂ-ಇರುವದಕ್ಕೆ ಪರ್ಯಾಪ್ತಃ-ಸಮರ್ಥನು ಅಸಿ - ಆಗಿದ್ದೀಯೆ.

ತಾತ್ಪರ್ಯ. ನೀನು ಕೃಷ್ಣಾದಿರೂಪಗಳಿಂದ ವಿಷಯಸುಖವನ್ನನುಭವಿ ಸುತ್ತೀಯೆ, ನರನಾರಾಯಣಾದಿರೂಪಗಳಿಂದ ಅತ್ಯಂತ ಕಠಿನವಾದ ತಪಸ್ಸನ್ನು ಮಾಡುತ್ತೀಯೆ; ದೈತ್ಯರನ್ನು ಕೊಂದು ಪ್ರಜೆಗಳನ್ನು ಕಾಪಾಡುತ್ತೀಯೆ, ಏನೂ

ಮಾಡದೆ ಉದಾಸೀನನಾಗಿಯೂ ಇರುತ್ತೀಯೆ. ಇಂಥ ಸಮರ್ಥನು.

ವಿಗ್ರಹವಾಕ್ಯಗಳು. ೧.ಶಬ್ದಃ ಆದಿಃ ಯೇಷಾಂ ತೇ-ಶಬ್ದಾದಯಃ (ಷ.ಬ) ೨.ದುಃಖೇನ ಚರಿತುಂ ಶಕ್ಯಂ-ದುಶ್ಚರಮ್(ಉಪ.ಸ). ೩.ಉದಾಸೀನಸ್ಯ ಭಾವಃ-ಔದಾಸೀನ್ಯಮ್ (ತ.ವ್ಯ.).

ವ್ಯಾಕರಣವಿಶೇಷ. ೧. ದುಶ್ಚರಮ್-ಈಷತ್, ದುಃ, ಸು-ಈ ಶಬ್ದಗಳಿಗೆ ಕಷ್ಟ (difficulty) ಸುಲಭ (ease) ಎಂಬರ್ಥವಿರುವಾಗ ಮುಂದಿರುವ ಧಾತುವಿಗೆ ಖಲ್(=ಅ) ಪ್ರತ್ಯಯವು ಬರುವದು. ೨.ಭೋಕ್ತುಂ ಪರ್ಯಾಪ್ತಃ-ಸಾಕಾಗಿರುವ, ಸಮರ್ಥನಾದ-ಎಂಬರ್ಥದ ಮಾತುಗಳ ಯೋಗವಿರುವ ಧಾತುವಿಗೆ ತುಮುನ್ (=ತುಂ)ಪ್ರತ್ಯಯವು ಬರುತ್ತದೆ. ೩.ಅಸಿ- (೧)- ಅಸ-ಭುವಿ (ಅಸ್ ಇರು) ಎಂಬ ೨ನೆಯ ಗಣದ ಧಾತುವಿನ ಲಟ್, ಪ.ಮ.ಏ.

ವಿಚಾರ. ೧.ಹಿಂದಿನ ಶ್ಲೋಕದಂತೆಯೇ ಇಲ್ಲಿಯೂ ವಿರೋಧಾಭಾಸದಿಂದ ಪರಮಾತ್ಮನನ್ನು ವರ್ಣಿಸಿದೆ. ಕೃಷ್ಣಾದಿರೂಪಗಳಿಂದ ವಿಷಯಭೋಗವನ್ನು ಮಾಡುತ್ತಾನೆಂದೂ ನರನಾರಾಯಣಾದಿರೂಪದಿಂದ ತಪಸ್ಸುಮಾಡುತ್ತಾನೆಂದೂ ತಾತ್ಪರ್ಯದಲ್ಲಿ ಹೇಳಿರುವದರಲ್ಲಿ ಮಲ್ಲಿನಾಥವ್ಯಾಖ್ಯಾನವನ್ನು ಅನುಸರಿಸಿದೆ. ಆದರೆ ಬೇರೆ ಬೇರೆ ಜೀವರ ರೂಪದಿಂದ ವಿಷಯಭೋಗವನ್ನನುಭವಿಸುವದು, ತಪಸ್ಸುಮಾಡುವದು, ರಾಜ್ಯಭಾರವನ್ನು ಮಾಡುವದು- ಮುಂತಾದ ಕೆಲಸಗಳನ್ನು ಮಾಡುತ್ತಿದ್ದರೂ ಪರಮಾರ್ಥದೃಷ್ಟಿಯಿಂದ ಪರಮಾತ್ಮನು ಈ ಯಾವ ಕ್ರಿಯೆಯನ್ನೂ ಮಾಡುವದಿಲ್ಲವೆಂಬ ಅಭಿಪ್ರಾಯವನ್ನು ಕವಿಯು ವರ್ಣಿಸಿರುತ್ತಾನೆಂದು ತೋರುವದು. ೨.ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳಿಗೆ ವಿಷಯಗಳೆಂದು ಹೆಸರು.

ಬಹುಧಾಪ್ಯಾಗಮೈರ್ಭಿನ್ನಾಃ ಪನ್ಥಾನಃ ಸಿದ್ಧಿಹೇತವಃ ।
ತ್ವಯ್ಯೇವ ನಿಪತನ್ತ್ಯೋಘಾ ಜಾಹ್ನವೀಯಾ ಇವಾರ್ಣವೇ ॥೨೬॥

ಅನ್ವಯ. [ಆಗಮೈಃ ಬಹುಧಾ ಭಿನ್ನಾಃ ಅಪಿ ಸಿದ್ಧಿಹೇತವಃ ಪನ್ಥಾನಃ ಜಾಹ್ನವೀಯಾಃ ಓಘಾಃ ಅರ್ಣವೇ ಇವ ತ್ವಯಿ ಏವ ನಿಪತನ್ತಿ.]

ಅರ್ಥ. ಆಗಮೈಃ-ಶಾಸ್ತ್ರಗಳಿಂದ ಬಹುಧಾ-ಬಹು ಬಗೆಯಾಗಿ ಭಿನ್ನಾಃ ಅಪಿ - ಬೇರೆಯಾಗಿರುವವಾದರೂ ಸಿದ್ಧಿಹೇತವಃ- (ಸಿದ್ಧಿ-ಪುರುಷಾರ್ಥಕ್ಕೆ ಹೇತವಃ - ಕಾರಣವಾಗಿರುವ) ಮೋಕ್ಷಕ್ಕೆ ಕಾರಣವಾಗಿರುವ ಪನ್ಥಾನಃ-ದಾರಿಗಳು ಜಾಹ್ನವೀಯಾಃ - ಗಂಗೆಯ ಓಘಾಃ-ಪ್ರವಾಹಗಳು ಅರ್ಣವೇ ಇವ-ಸಮುದ್ರದಲ್ಲಿ ಹೇಗೋ ಹಾಗೆ ತ್ವಯ್ಯೇವ- ನಿನ್ನಲ್ಲಿಯೇ ನಿಪತನ್ತಿ- ಒಂದು ಬೀಳುತ್ತವೆ.

ತಾತ್ಪರ್ಯ. ಗಂಗೆಯ ಕವಲುಗಳು ಬೇರೆ ಬೇರೆ ಕಡೆಯಲ್ಲಿ ಹರಿದರೂ

ಕೊನೆಗೆ ಸಮುದ್ರಕ್ಕೇ ಬಂದು ಬೀಳುವ ಹಾಗೆ ಬೇರೆ ಬೇರೆ ಆಗಮುಗಳಲ್ಲಿ ಹೇಳಿರುವ ಮೋಕ್ಷಮಾರ್ಗಗಳು ಬೇರೆ ಬೇರೆಯಾಗಿದ್ದರೂ ಅವಕ್ಕೆಲ್ಲ ಪರಮಾತ್ಮನಾದ ನಿನ್ನಲ್ಲಿಯೇ ತಾತ್ಪರ್ಯವಿರುವದು.

ವಿಗ್ರಹವಾಕ್ಯಗಳು. ೧.ಬಹವಃ ವಿಧಾಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ-ಬಹುಧಾ (ತ.ವ್ಯ.). ೨.ಸಿದ್ಧೇಃ ಹೇತವಃ-ಸಿದ್ಧಿಹೇತವಃ(ಷ.ತ.). ೩.ಜಾಹ್ನವ್ಯಾ ಇಮೇ-ಜಾಹ್ನವೀಯಾಃ(ತ.ವ್ಯ.).

ವ್ಯಾಕರಣವಿಶೇಷ. ೧.ಬಹುಧಾ-ಇದು ಕ್ರಿಯಾವಿಶೇಷಣಾವ್ಯಯು; ಸಂಖ್ಯಾವಾಚಕಕ್ಕೆ ಕ್ರಿಯಾ ಪ್ರಕಾರಗಳನ್ನು ತೋರಿಸುವದಕ್ಕೆ ಧಾಪ್ರತ್ಯಯವು ಬರುವದು. ಬಹಳ ಪ್ರಕಾರವಾಗಿ ಎಂದರ್ಥ. ೨.ಪನ್ಥಾನಃ-ಪಥಿನ್‌ಶಬ್ದ, ನಕಾರಾನ್ತ ಪುಲ್ಲಿಂಗ (ಪನ್ಥಾಃ, ಪನ್ಥಾನೌ, ಪನ್ಥಾನಃ) ೩.ನಿಪತನ್ತಿ (೨)-ಪತ್ಲ್‌ಗತೌ (ಪತ್ ಬೀಳು) ಎಂಬ ೧ನೆಯ ಗಣದ ಧಾತುವಿಗೆ ನಿ ಎಂಬ ಉಪಸರ್ಗ ಸೇರಿದೆ. ಲಟ್.ಪ.ಪ್ರ.ಬ.

ವಿಚಾರ. ಬೇರೆ ಬೇರೆ ಶಾಸ್ತ್ರಗಳಲ್ಲಿ ಹೇಳಿರುವ ಜ್ಞಾನ, ಭಕ್ತಿ, ಕರ್ಮ, ಯೋಗ-ಎಂಬ ಮೋಕ್ಷಮಾರ್ಗಗಳು ಬೇರೆ ಬೇರೆಯಾಗಿದ್ದರೂ ಇವೆಲ್ಲಕ್ಕೂ ಪರ ಮಾತ್ಮನೊಬ್ಬನೇ ಗುರಿಯೆಂಬುದು ವೈದಿಕಧರ್ಮದಲ್ಲಿ ಮತ್ತೆ ಮತ್ತೆ ಹೇಳಿರುವ ಒಂದು ವಿಶೇಷವಾದ ಉಪದೇಶವು. ಇದನ್ನು ತಿಳಿದುಕೊಂಡವರಿಗೆ ಮತಸಂಬಂಧ ವಾದ ಜಗಳಕ್ಕೆ ಕಾರಣವಿರುವುದಿಲ್ಲ. ಭಾರತದಲ್ಲಿ ಇದೇ ಅರ್ಥದ ಒಂದು ಶ್ಲೋಕ ವಿದೆ. ಸರ್ವೇಷು ಚ ನೃಪಶ್ರೇಷ್ಠ ಜ್ಞಾನೇಷ್ವೇತೇಷು ದೃಶ್ಯತೇ । ಯಥಾಗಮಂ ಯಥಾನ್ಯಾಯಂ ನಿಷ್ಠಾ ನಾರಾಯಣಃ ಪ್ರಭುಃ ॥ ೨.ಬೇರೆ ಬೇರೆ ನದಿಗಳು ಸಮು ದ್ರಕ್ಕೆ ಹೋಗುವಂತೆ ಎಂಬ ಉಪಮಾನವು ಬಹು ಪ್ರಸಿದ್ಧವಾದದ್ದು. ಉದಾಹರಣೆಗೆ ಪುಷ್ಪದಂತಕೃತಮಹಿಮ್ನ ಸ್ತೋತ್ರದಲ್ಲಿರುವ ಈ ಶ್ಲೋಕವನ್ನು ನೋಡಿ: ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ । ಪ್ರಭಿನ್ನೇ ಪ್ರಸ್ಥಾನೇ ಪರಮಿ ದಮದಃ ಪಥ್ಯಮಿತಿ ಚ ॥ ರುಚೀನಾಂ ವೈಚಿತ್ರ್ಯಾದೃಜುಕುಟಿಲ ನಾನಾಪಥಜುಷಾಂ । ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥ ಮೋಕ್ಷಮಾರ್ಗಗಳನ್ನು ಒಂದೇ ನದಿಯ ಕವಲುಗಳಿಗೆ ಹೋಲಿಸಿರುವದು ಕಾಳಿದಾಸನ ಉಪಮಾನದಲ್ಲಿರುವ ವಿಶೇಷವು. ೩.ಆಗಮವೆಂದರೆ ಗುರುಪರಂಪರೆಯಿಂದ ಬಂದಿರುವ ಶಾಸ್ತ್ರದರ್ಶನ. ಇವು ಬಹು ವಿಧವಾಗಿರುವವು.

ತ್ವಯ್ಯಾವೇಶಿತಚಿತ್ತಾನಾಂ ತ್ವತ್ಸಮರ್ಪಿತಕರ್ಮಣಾಮ್ ।
ಗತಿಸ್ತ್ವಂ ವೀತರಾಗಾಣಾಮಭೂಯಃಸನ್ನಿವೃತ್ತಯೇ ॥೨೮॥

ಅನ್ವಯ. [ತ್ವಯಿ ಆವೇಶಿತಚಿತ್ತಾನಾಂ ತ್ವತ್ಸಮರ್ಪಿತಕರ್ಮಣಾಂ ವೀತ ರಾಗಾಣಾಂ ಅಭೂಯಃಸನ್ನಿವೃತ್ತಯೇ ತ್ವಂ ಗತಿಃ]

ಅರ್ಥ. ತ್ವಯಿ- ನಿನ್ನಲ್ಲಿ ಆವೇಶಿತಚಿತ್ತಾನಾಂ-(ಆವೇಶಿತ-ಇಡಲ್ಪಟ್ಟ ಚಿತ್ತಾನಾಂ- ಚಿತ್ತವುಳ್ಳ) ಚಿತ್ತವುಳ್ಳವರಾಗಿಯೂ ತ್ವತ್ಸಮರ್ಪಿತಕರ್ಮಣಾಂ-(ತ್ವತ್- ನಿನಗೆ ಸಮರ್ಪಿತ- ಒಪ್ಪಿಸಲ್ಪಟ್ಟ ಕರ್ಮಣಾಂ-ಕರ್ಮಗುಳುಳ್ಳ) ಕರ್ಮಗಳನ್ನೆಲ್ಲ ನಿನಗೆ ಸಮರ್ಪಣೆ ಮಾಡಿರುವದಾಗಿಯೂ ಇರುವ ವೀತರಾಗಾಣಾಂ- (ವೀ ತ-ಹೋದ ರಾಗಾಣಾಂ- ವಿಷಯಾಸಕ್ತಿಯುಳ್ಳ) ವಿರಕ್ತರಿಗೆ ಅಭೂಯಃಸನ್ನಿವೃ ತ್ತಯೇ- ಮತ್ತೆ ಹಿಂತಿರುಗದಿರುವದಕ್ಕೆ ತ್ವಂ-ನೀನು ಗತಿಃ-ಸಾಧನವು.

ತಾತ್ಪರ್ಯ. ನಿನ್ನಲ್ಲಿಯೆ ಮನಸ್ಸಿಟ್ಟು ಸಕಲ ಕರ್ಮಗಳನ್ನು ನಿನಗೆ ಅರ್ಪಣೆ ಮಾಡುವಂಥ ವಿರಕ್ತರು ಮತ್ತೆ ಸಂಸಾರಕ್ಕೆ ಬೀಳದೆ ಇರುವಂತಾಗುವದಕ್ಕೆ ನೀನೆ ಅವರಿಗೆ ಗತಿ.

ವಿಗ್ರಹವಾಕ್ಯಗಳು. ೧.ಆವೇಶಿತಂ ಚಿತ್ತಂ ಯೈಃ ತೇ-ಆವೇಶಿತಚಿತ್ತಾಃ (ತೃ.ತ.); ತೇಷಾಂ-ಆವೇಶಿತಚಿತ್ತಾನಾಂ. ೨.ತುಭ್ಯಂ ಸಮರ್ಪಿತಾನಿ-ತ್ವತ್ಸಮರ್ಪಿ ತಾನಿ (ಚ.ತ.); ತ್ವತ್ಸಮರ್ಪಿತಾನಿ ಕರ್ಮಾಣಿ ಯೈಃ ತೇ-ತ್ವತ್ಸಮರ್ಪಿತಕರ್ಮಾಣಃ (ತೃ.ಬ) ತೇಷಾಂ-ತ್ವತ್ಸಮರ್ಪಿತಕರ್ಮಣಾಮ್. ೩.ವೀತಃ ರಾಗಃ ಯೇಭ್ಯಃ ತೇ- ವೀತರಾಗಾಃ (ಪಂ.ತ.); ತೇಷಾಂ-ವೀತರಾಗಾಣಾಮ್. ೪.ಭೂಯಃ ಸನ್ನಿವೃತ್ತಿಃ- ಭೂಯಃಸನ್ನಿವೃತ್ತಿಃ (ಸಾ.ಸ.); ನ ಭೂಯಃಸನ್ನಿವೃತ್ತಿಃ-ಅಭೂಯಃಸನ್ನಿವೃತ್ತಿಃ (ನ.ತ); ತಸ್ಯೈ - ಅಭೂಯಃಸನ್ನಿವೃತ್ತಯೇ.

ವ್ಯಾಕರಣವಿಶೇಷ. ೧. ತ್ವತ್ಸಮರ್ಪಿತಕರ್ಮಣಾಮ್-ನಕಾರಾನ್ತ ಪುಲ್ಲಿಂಗ (ಂಕರ್ಮಾ ಂಕರ್ಮಾಣೌ ಂಕರ್ಮಾಣಃ)

ವಿಚಾರ. ೧.ಬ್ರಹ್ಮಲೋಕದವರೆಗೆ ಹೋದರೂ ಮತ್ತೆ ಸಂಸಾರದಲ್ಲಿ ಬೀಳು ವದುಂಟು, ಆದರೆ ಪರಮಾತ್ಮನನ್ನು ಸೇರಿದವರಿಗೆ ಹಿಂತಿರುಗುವದೆಂಬುದಿಲ್ಲ - ಎಂದು ವೇದದಲ್ಲಿದೆ. ಭಗವದ್ಗೀತೆ(೮-೧೬)ಯನ್ನು ನೋಡಿ. ೨.ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ । ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥ ತೇಷಾಮಹಂ ಸಮುದ್ಧರ್ತಾ ಮೃತ್ಯುಸಂ ಸಾರಸಾಗರಾತ್ । ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ (ಯಾರು ಎಲ್ಲ ಕರ್ಮಗಳನ್ನೂ ನನಗೆ ಸಮರ್ಪಣೆಮಾಡಿ ಮತ್ತೊಂದು ಆಶ್ರಯ ವನ್ನು ನಂಬದೆ ನನ್ನನ್ನೇ ಧ್ಯಾನಮಾಡುತ್ತಾ ಸೇವಿಸುವರೋ ಅಂಥ ನನ್ನಲ್ಲಿಯೆ ಮನಸ್ಸಿಟ್ಟಿರುವವರನ್ನು ಮೃತ್ಯುರೂಪವಾದ ಸಂಸಾರದ ಕಡಲಿನಿಂದ ಉದ್ಧಾರ ಮಾಡುವೆನು) - ಎಂಬ ಗೀತೆಯ (೧೨-೬,೭) ಶ್ಲೋಕಗಳ ಅಭಿಪ್ರಾಯವನ್ನು ಕವಿಯು ಇಲ್ಲಿ ವರ್ಣಿಸಿರುತ್ತಾನೆ. ಪರಮಾತ್ಮನನ್ನು ಪಡೆಯುವದಕ್ಕೆ ಪರಮಾತ್ಮನೇ ಸಾಧನನಾಗುತ್ತಾನೆಂಬುದು ಶ್ಲೋಕದ ಭಾವಾರ್ಥವು.

ಪ್ರತ್ಯಕ್ಷೋಽಪ್ಯಪರಿಚ್ಛೇದ್ಯೋ ಮಹ್ಯಾದಿರ್ಮಹಿಮಾ ತವ ।
ಆಪ್ತವಾಗನುಮಾನಾಭ್ಯಾಂ ಸಾಧ್ಯಂ ತ್ವಾಂ ಪ್ರತಿ ಕಾ ಕಥಾ ॥೨೮॥

ಅನ್ವಯ. [ಪ್ರತ್ಯಕ್ಷಃ ಅಪಿ ಮಹ್ಯಾದಿಃ ತವ ಮಹಿಮಾ ಅಪರಿಚ್ಛೇದ್ಯಃ ಆಪ್ತ ವಾಗನುಮಾನಾಭ್ಯಾಂ ಸಾಧ್ಯಂ ತ್ವಾಂ ಪ್ರತಿ ಕಾ ಕಥಾ?]

ಅರ್ಥ. ಪ್ರತ್ಯಕ್ಷೋಽಪಿ- ಪ್ರತ್ಯಕ್ಷವಾಗಿದ್ದರೂ ಮಹ್ಯಾದಿಃ-ಭೂಮಿಯೆ ಮುಂತಾದ ತವ-ನಿನ್ನ ಮಹಿಮಾ-ಐಶ್ವರ್ಯವು ಅಪರಿಚ್ಛೇದ್ಯಃ-ಬಿಡಿಸಿ ನೋಡಲು ಅಗದ್ದು. ಆಪ್ತವಾಗನುಮಾನಾಭ್ಯಾಂ-(ಆಪ್ತವಾಕ್-ವೇದ ಅನುಮಾನಾಭ್ಯಾಂ - ಅನು ಮಾನ ಇವುಗಳಿಂದ) ವೇದಪ್ರಮಾಣ ಮತ್ತು ಅನುಮಾನ ಇವುಗಳಿಂದ ಸಾಧ್ಯಮ್ - ತಿಳಿಯತಕ್ಕ ತ್ವಾಂ ಪ್ರತಿ-ನಿನ್ನನ್ನು ಕುರಿತು ಕಾ ಕಥಾ-(ಏನು ಮಾತು ?=) ಹೇಳತಕ್ಕದ್ದೇನು ?

ತಾತ್ಪರ್ಯ. ಪೃಥ್ವಿಯೇ ಮುಂತಾದ ನಿನ್ನ ಮಹಿಮೆಯು ಪ್ರತ್ಯಕ್ಷಗೋಚರ ವಾಗಿದೆಯಾದರೂ ಅದನ್ನು ಕೂಡ ಇಷ್ಟೇ ಎಂದು ನಿಶ್ಚಯಿಸಿ ಹೇಳುವ ಹಾಗಿಲ್ಲ; ವೇದತರ್ಕಗಳಿಂದ ಮಾತ್ರ ತಿಳಿಯ ಬೇಕಾಗಿರುವ ನಿನ್ನ ವಿಷಯದಲ್ಲಿ ಹೇಳ ತಕ್ಕದ್ದೇನು ?

ವಿಗ್ರಹವಾಕ್ಯಗಳು. ೧. ಪ್ರತಿಗತೋಽಕ್ಷಂ- ಪ್ರತ್ಯಕ್ಷಃ (ಪ್ರಾ.ಸ.). ೨. ಪರಿಚ್ಛೇತ್ತುಂ ಶಕ್ಯಃ- ಪರಿಚ್ಛೇದ್ಯಃ (ತ.ವೃ.); ನ ಪರಿಚ್ಛೇದ್ಯಃ-ಅಪರಿಚ್ಛೇದ್ಯಃ (ನ.ತ.). ೩.ಮಹೀ ಆದಿಃ ಯಸ್ಯ ಸಃ-ಮಹ್ಯಾದಿಃ (ಷ.ಬ.). ೪.ಮಹತೋ ಭಾವಃ-ಮಹಿಮಾ (ತ.ವೃ.). ೫.ಆಪ್ತಸ್ಯ ವಾಕ್-ಆಪ್ತವಾಕ್ (ಷ.ತ.); ಅನು ಮೀಯತೇ- ಅನೇನೇತ್ಯನುಮಾನಮ್ (ಕೃ.ವೃ.); ಆಪ್ತವಾಕ್ ಚ ಅನುಮಾನಂ ಚ-ಆಪ್ತವಾಗನುಮಾನೇ (ದ್ವ.); ತಾಭ್ಯಾಂ-ಆಪ್ತವಾಗನುಮಾನಾಭ್ಯಾಮ್. ೬.ಸಾಧಯಿತುಂ ಯೋಗ್ಯಃ - ಸಾಧ್ಯಃ (ತ.ವೃ.).

ವ್ಯಾಕರಣವಿಶೇಷ. ೧.ಮಹ್ಯಾದಿಃ-ಮಹಿಮಾ ಎಂಬುದಕ್ಕೆ ವಿಶೇಷಣ; ಇದು ತದ್ಗುಣಸಂವಿ ಜ್ಞಾನಬಹುವ್ರೀಹಿ; ಏಕೆಂದರೆ ಭೂಮಿಯೂ ಮಹಿಮೆಯಲ್ಲಿ ಸೇರಿಕೊಂಡಿದೆ. ೨೫ನೆಯ ಶ್ಲೋಕದಲ್ಲಿ 'ಶಬ್ದಾ ದೀನ್' ಎಂಬುದೂ ಹೀಗೆಯೆ; ವಿಶೇಷಣದ ಭಾಗವು ಸಮಾಸಾರ್ಥದಲ್ಲಿ ಸೇರದೆ ಇದ್ದರೆ ಅತದ್ಗುಣಸಂವಿ ಜ್ಞಾನಬಹುವ್ರೀಹಿಯಾಗುವದು. ಉದಾ: 'ಚಿತ್ರಗುಂ ಆನಯ' (ಹಂಡಹಸುವುಳ್ಳವನನ್ನು ಕರೆದು ಕೊಂಡು ಬಾ) ಎಂಬಲ್ಲಿ ಹಂಡಹಸುವನ್ನು ತರಬೇಕಾದ್ದಿಲ್ಲ; ಮನುಷ್ಯನೊಬ್ಬನನ್ನು ಕರೆತಂದರೆ ಸಾಕಾಗಿದೆ. ಆದ್ದರಿಂದ 'ಚಿತ್ರಗುಃ' ಎಂಬುದು ಅತದ್ಗುಣಸಂವಿಜ್ಞಾನಬಹುವ್ರೀಹಿ. ೨.ಮಹಿಮಾ-ಭಾವಾರ್ಥದಲ್ಲಿ (abstract) ಇಮನಿಚ್ (ಇಮನ್) ಪ್ರತ್ಯಯವು ಬರುತ್ತದೆ. ಪೃಥು, ಮೃದು, ಮಹತ್, ಪಟು, ತನು, ಲಘು-ಮುಂ ತಾದ ಶಬ್ದಗಳಿಗೆ ಈ ಪ್ರತ್ಯಯವು ಹತ್ತುವದು.

ವಿಚಾರ. ೧.ಪ್ರತ್ಯಕ್ಷ, ಅನುಮಾನ, ಶಬ್ದ-ಎಂಬ ಮೂರು ಪ್ರಮಾಣಗಳನ್ನು ಇಲ್ಲಿ ಕವಿಯು ತಿಳಿಸಿರುತ್ತಾನೆ. ಪ್ರತ್ಯಕ್ಷವೆಂದರೆ ಇಂದ್ರಿಯಗಳಿಂದ ವಿಷಯವನ್ನು ಅರಿಯುವದು; ಅನುಮಾನವೆಂದರೆ ಪ್ರತ್ಯಕ್ಷದಿಂದ ತಿಳಿದ ಒಂದು ಹೆಗ್ಗುರುತಿನಿಂದ ಅದಕ್ಕೆ ಸಂಬಂಧಪಟ್ಟ ಮತ್ತೊಂದನ್ನು ಊಹಿಸುವದು; ಶಬ್ದವೆಂದರೆ ತಿಳಿದವರು ಹೇಳುವ ಮಾತಿನಿಂದ ಅಥವಾ ವೇದದಿಂದ ತಿಳಿಯುವದು. ೨. ಪರಮಾತ್ಮನು ಸೃಷ್ಟಿಮಾಡಿರುವ ಭೂಮಿಯೇ ಮುಂತಾದದ್ದು ನಮಗೆ ಪ್ರತ್ಯಕ್ಷವಾಗಿ ಕಾಣುತ್ತದೆ ಯಾದರೂ ಅದರ ಸ್ವರೂಪವೆಲ್ಲ ನಮಗೆ ಇಷ್ಟೆಂದು ಗೊತ್ತಾಗಿಲ್ಲ. ಇದಕ್ಕೆ ಕಾರಣನಾಗಿರುವ ಪರಮಾತ್ಮನನ್ನು ವೇದದಿಂದಲೂ ಅದಕ್ಕೆ ಅನುಸಾರವಾದ ಯುಕ್ತಿಯಿಂದಲು ತಿಳಿಯಬೇಕಾಗಿರುವದರಿಂದ ಅವನ ಸ್ವರೂಪವನ್ನು ಇಷ್ಟೆಂದು ಗೊತ್ತುಮಾಡಿ ಹೇಳುವದಕ್ಕೆ ಆಗುವದಿಲ್ಲವೆಂಬುದು ಸ್ಪಷ್ಟವೇ ಆಗಿದೆಯೆಂದು ಭಾವ. ೩. 'ಯಾವದರಿಂದ ಈ ಭೂತಗಳು ಹುಟ್ಟುತ್ತವೆಯೋ ಏತರಿಂದ ಹುಟ್ಟಿ ಇದ್ದುಕೊಂಡಿರುತ್ತವೆಯೋ ಕೊನೆಗೆ ಯಾವದನ್ನು ಸೇರಿ ಅಡಗುತ್ತವೆಯೋ ಅದೇ ಬ್ರಹ್ಮವು' ಎಂಬ ತೈತ್ತಿರೀಯಶ್ರುತಿಯೇ ಮುಂತಾದ ವೇದವಾಕ್ಯ ಪರಮಾತ್ಮನನ್ನು ತಿಳಿಸುತ್ತದೆ. ಭೂಮಿಯೇ ಮುಂತಾದ್ದಕ್ಕೆ ಒಬ್ಬ ಕರ್ತೃವಿರಬೇಕು, ಏಕೆಂದರೆ ಗಡಿಗೆ ಮುಂತಾದ್ದರಂತೆ ಅದೂ ಹೊಸದಾಗಿ ಉಂಟಾದ ಕಾರ್ಯವಾಗಿರುತ್ತದೆ, ಎಂಬುದೇ ಮೊದಲಾದದ್ದು ಪರಮಾತ್ಮನನ್ನು ಊಹಿಸುವದಕ್ಕೆ ಅನುಮಾನಪ್ರಮಾಣವು. ಇವೆರಡರಿಂದ ಪರಮಾತ್ಮನನ್ನು ತಿಳಿದುಕೊಳ್ಳಬೇಕೇ ಹೊರತು ಪ್ರತ್ಯಕ್ಷವಾಗಿ ತಿಳಿಯುವದಕ್ಕೆ ಆಗುವದಿಲ್ಲ, ಏಕೆಂದರೆ ಅವನಲ್ಲಿ ಶಬ್ದ, ಸ್ಪರ್ಶ-ಮುಂತಾದ ಇಂದ್ರಿಯಕ್ಕೆ ಸಿಕ್ಕುವ ಗುಣವಿಲ್ಲ - ಎಂದು ವೇದಾಂತಿಗಳು ಹೇಳುತ್ತಾರೆ.

ಕೇವಲಂ ಸ್ಮರಣೇನೈವ ಪುನಾಸಿ ಪುರುಷಂ ಯತಃ ।
ಅನೇನ ವೃತ್ತಯಃ ಶೇಷಾ ನಿವೇದಿತಫಲಾಸ್ತ್ವಯಿ ॥೨೯॥

ಅನ್ವಯ. [ಯತಃ ಸ್ಮರಣೇನ ಏವ ಕೇವಲಂ ಪುರುಷಂ ಪುನಾಸಿ, ಅನೇನ ತ್ವಯಿ ಶೇಷಾ ವೃತ್ತಯಃ ನಿವೇದಿತಫಲಾಃ. ]

ಅರ್ಥ. ಯತಃ-ಯಾವ ಕಾರಣದಿಂದ ಸ್ಮರಣೇನೈವ-ಸ್ಮರಿಸುವಿಕೆಯಿಂದಲೇ ಕೇವಲಂ-ಪೂರ್ಣನಾದ ಪುರುಷಂ-ಮನುಷ್ಯನನ್ನು ಪುನಾಸಿ-ಕಾಪಾಡುತ್ತಿಯೋ ಅನೇನ - ಇದರಿಂದ ತ್ವಯಿ-ನಿನ್ನಲ್ಲಿ ಶೇಷಾಃ-ಉಳಿದಂಥ ವೃತ್ತಯಃ-ವ್ಯಾಪಾರ ಗಳು ನಿವೇದಿತಫಲಾಃ-(ನಿವೇದಿತ-ತಿಳಿಸಲ್ಪಟ್ಟ ಫಲಾಃ-ಫಲಗಳುಳ್ಳವು) ಎಂಥ ಫಲವುಳ್ಳವೆಂದು ತಿಳಿಸತಕ್ಕವು.

ತಾತ್ಪರ್ಯ. ಸುಮ್ಮನೆ ನಿನ್ನನ್ನು ಸ್ಮರಿಸಿದ ಮಾತ್ರದಿಂದ ಜನರು ಸಂಪೂರ್ಣ ವಾಗಿ ಪವಿತ್ರರಾಗುತ್ತಾರೆಂದಮೇಲೆ ನಿನ್ನ ವಿಷಯದಲ್ಲಿ ಅರ್ಪಿಸಿದ ಮಿಕ್ಕ ಮನೋ ವೃತ್ತಿಗಳಿಂದ ಆಗುವ ಫಲವು ಇಷ್ಟೆಂದು ಅದರಿಂದಲೆ ಗೊತ್ತುಮಾಡಬಹುದಾಗಿರು ತ್ತದೆ.

ವಿಗ್ರಹವಾಕ್ಯಗಳು. ನಿವೇದಿತಾನಿ ಫಲಾನಿ ಯಾಸಾಂ ತಾಃ-ನಿವೇದಿತಫಲಾಃ (ಷ.ಬ.).

ವ್ಯಾಕರಣವಿಶೇಷ. ೧.ನಿವೇದಿತಫಲಾಃ- ವೃತ್ತಯಃ ಎಂಬುದಕ್ಕೆ ವಿಶೇಷಣ; ಆಕಾರಾನ್ತ ಸ್ತ್ರೀಲಿಂಗ. ೨.ಪುನಾಸಿ (೭) ಪೂಞ್‌ಪವನೇ (ಪೂ-ಪವಿತ್ರಗೊಳಿಸು) ಎಂಬ ೯ನೆಯ ಗಣದ ಧಾತುವಿನ ಲಟ್.ಪ.ಮ.ಏ.

ವಿಚಾರ. ಪರಮಾತ್ಮನನ್ನು ಒಂದು ಸಲ ನೆನೆಸಿಕೊಂಡರೇ ಪಾಪಗಳು ಹೋಗಿ ಚಿತ್ತಶುದ್ಧಿಯಾಗುವದು. ಅವನನ್ನು ಧ್ಯಾನಮಾಡಿ ಸಾಕ್ಷಾತ್ಕಾರಮಾಡಿಕೊಂಡರೆ ಅನಂತವಾದ ಮೋಕ್ಷಫಲವೇ ಆದೀತೆಂದು ಇದರಿಂದಲೆ ತಿಳಿಯಬಹುದಾಗಿರುತ್ತದೆ ಎಂದು ಭಾವ.

ಉದಧೇರಿವ ರತ್ನಾನಿ ತೇಜಾಂಸೀವ ವಿವಸ್ವತಃ ।
ಸ್ತುತಿಭ್ಯೋ ವ್ಯತಿರಿಚ್ಯನ್ತೇ ದೂರಾನಿ ಚರಿತಾನಿ ತೇ ॥೩೦॥

ಅನ್ವಯ. [ಉದಧೇಃ ರತ್ನಾನಿ ಇವ, ವಿವಸ್ವತಃ ತೇಜಾಂಸಿ ಇವ, ದೂರಾಣಿ ತೇ ಚರಿತಾನಿ ಸ್ತುತಿಭ್ಯಃ ವ್ಯತಿರಿಚ್ಯನ್ತೇ. ]

ಅರ್ಥ. ಉದಧೇಃ-ಸಮುದ್ರದ ರತ್ನಾನೀವ-ರತ್ನಗಳ ಹಾಗೆ, ವಿವಸ್ವತಃ - ಸೂರ್ಯನ ತೇಜಾಂಸೀವ-ಕಿರಣಗಳ ಹಾಗೆ ದೂರಾಣಿ-ದೂರವಾದ ತೇ-ನಿನ್ನ ಚರಿತಾನಿ-ಕೆಲಸಗಳು ಸ್ತುತಿಭ್ಯಃ-ಸ್ತುತಿಗಳ ದೆಸೆಯಿಂದ ವ್ಯತಿರಿಚ್ಯನ್ತೇ- ಆಚೆಗೆ ಇರುತ್ತವೆ.

ತಾತ್ಪರ್ಯ. ಸಮುದ್ರದಲ್ಲಿರುವ ರತ್ನಗಳಂತೆಯೂ ಸೂರ್ಯನ ಕಿರಣ ಗಳಂತೆಯೂ ಅನಂತವಾಗಿ ಶ್ರೇಷ್ಠವಾಗಿರುವ, ಮಾತಿಗೂ ಮನಸ್ಸಿಗೂ ನಿಲುಕದ, ನಿನ್ನ ಚರಿತೆಗಳನ್ನು ಎಲ್ಲವನ್ನು ಹೊಗಳಿ ಹೇಳುವದು ಆಗದ ಮಾತು.

ವ್ಯಾಕರಣವಿಶೇಷ. ೧.ಸ್ತುತಿಭ್ಯಃ-ಪಂಚಮೀ ಬಹುವಚನ. ೨.ವ್ಯತಿರಿಚ್ಯನ್ತೇ-(೩) ರಿಚ- ವಿಯೋಜನಸಂಪರ್ಚನಯೋಃ (ರಿಚ್-ಬೇರ್ಪಡಿಸು, ಸೇರಿಸು) ಎಂಬ ೧೧ನೆಯ ಗಣದ ಧಾತುವಿಗೆ ವಿ, ಅತಿ-ಎಂಬ ಉಪಸರ್ಗಗಳು ಸೇರಿ ಆಚೆಗಿರು, ಹೆಚ್ಚಾಗಿರು ಎಂಬ ಅರ್ಥವಾಗಿದೆ. ಕರ್ಮಣಿ ಲಟ್, ಆ. ಪ್ರ.ಬ.

ಅನವಾಪ್ತಮವಾಪ್ತವ್ಯಂ ನ ತೇ ಕಿಂಚನ ವಿದ್ಯತೇ ।
ಲೋಕಾನುಗ್ರಹ ಏವೈಕೋ ಹೇತುಸ್ತೇ ಜನ್ಮಕರ್ಮಣೋಃ ॥೩೧॥

ಅನ್ವಯ. [ಅನವಾಪ್ತಂ ಅವಾಪ್ತವ್ಯಂ ತೇ ಕಿಂಚನ ನ ವಿದ್ಯತೇ; ಏಕಃ ಲೋಕಾನುಗ್ರಹ ಏವ ತೇ ಜನ್ಮಕರ್ಮಣೋಃ ಹೇತುಃ. ]

ಅರ್ಥ. ಅನವಾಪ್ತಂ-ಪಡೆಯದೆ ಇರುವ ಅವಾಪ್ತವ್ಯಂ-ಪಡೆಯಬೇಕಾದ ಕಿಂಚನ-ಏನೂ ನ ವಿದ್ಯತೇ-ಇರುವದಿಲ್ಲ; ಏಕಃ-ಕೇವಲ ಲೋಕಾನುಗ್ರಹ ಏವ-ಜನರಿಗೆ ಅನುಗ್ರಹ ಮಾಡುವದೇ ತೇ-ನಿನ್ನ ಜನ್ಮಕರ್ಮಣೋಃ-ಹುಟ್ಟುವಿಕೆ ಮತ್ತು ಕೆಲಸ ಇವುಗಳಿಗೆ ಹೇತುಃ-ಕಾರಣವು.

ತಾತ್ಪರ್ಯ. ನೀನು ಇದುವರೆಗೂ ಪಡೆಯದೆ ಇನ್ನು ಮುಂದೆ ಪಡೆಯಬೇಕಾದದ್ದು ಏನೂ ಇಲ್ಲದಿದ್ದರೂ ಕೇವಲ ಲೋಕಾನುಗ್ರಹಕ್ಕಾಗಿಯೆ ನೀನು ಅವತರಿಸಿ ಆಯಾ ಕರ್ಮಗಳನ್ನು ಮಾಡುತ್ತೀಯೆ.

ವಿಗ್ರಹವಾಕ್ಯಗಳು. ೧.ನ ಅವಾಪ್ತಂ-ಅನವಾಪ್ತಮ್ (ನ.ತ.). ೨. ಅವಾಪ್ತುಂ ಯೋಗ್ಯಂ-ಅವಾಪ್ತವ್ಯಮ್ (ಕೃ.ವ್ಯ.) ೩.ಲೋಕಸ್ಯ ಅನುಗ್ರಹಃ-ಲೋಕಾನುಗ್ರಹಃ (ಷ.ತ.). ೪.ಜನ್ಮ ಚ ಕರ್ಮ ಚ-ಜನ್ಮಕರ್ಮಣೀ (ದ್ವ.); ತಯೋಃ-ಜನ್ಮಕರ್ಮಣೋಃ.

ವ್ಯಾಕರಣವಿಶೇಷ. ೧.ಕಿಂಚನ-ಇದು ಅಸಾಕಲ್ಯವೆಂಬರ್ಥ (indefinite)ವನ್ನು ಹೇಳುವ ಮಾತು; ಈ ಅರ್ಥದಲ್ಲಿ ಚಿತ್, ಚನ, ಅಪಿ-ಎಂಬ ಅವ್ಯಯಗಳು ಸೇರುತ್ತವೆ; (ಕಿಂಚಿತ್, ಕೇಚಿತ್, ಕಾನಿಚಿತ್-ಇತ್ಯಾದಿ.). ೨.ವಿದ್ಯತೇ-(೩) ವಿದ- ಸತ್ತಾಯಾಂ (ವಿದ್ ಇರು) ಎಂಬ ೪ನೆಯ ಗಣದ ಧಾತುವಿನ ಲಟ್.ಆ.ಪ್ರ.ಏ. ೧೯ನೆಯ ಶ್ಲೋಕದ ೩ನೆಯ ಟಿಪ್ಪಣಿಯನ್ನು (ಪು. ೧೨೯) ನೋಡಿ.

ವಿಚಾರ. ಈ ಶ್ಲೋಕದ ಅಭಿಪ್ರಾಯವು ಭಗವದ್ಗೀತೆಯ-ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ (೪-೮); ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ । ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ಎಂಬ ಶ್ಲೋಕಗಳಲ್ಲಿರುವುದರ ಸಾರಾಂಶವಾಗಿದೆ.

ಮಹಿಮಾನಂ ಯದುತ್ಕೀರ್ತ್ಯ ತವ ಸಂಹ್ರಿಯತೇ ವಚಃ ।
ಶ್ರಮೇಣ ತದಶಕ್ತ್ಯಾ ವಾ ನ ಗುಣಾನಾಮಿಯತ್ತಯಾ ॥೩೨॥

ತವ ಮಹಿಮಾನಂ ಉತ್ಕೀರ್ತ್ಯ ವಚಃ ಸಂಹ್ರಿಯತೇ (ಇತಿ) ಯತ್ ತತ್ ಶ್ರಮೇಣ ಅಶಕ್ತ್ಯಾ ವಾ, ಗುಣಾನಾಂ ಇಯತ್ತಯಾ ನ. ಅರ್ಥ. ತವ-ನಿನ್ನ

ಮಹಿಮಾನಂ-ಹೆಚ್ಚುಗೆಯನ್ನು ಉತ್ಕೀರ್ತ್ಯ-ಹೊಗಳಿ ವಚಃ - ಮಾತು ಸಂಹ್ರಿಯತೇ-ನಿಲ್ಲಿಸಲ್ಪಡುತ್ತದೆ ಇತಿ ಯತ್-ಎಂಬುವದು ಯಾವ ದುಂಟೋ ತತ್-ಅದು ಶ್ರಮೇಣ-ಆಯಾಸದಿಂದ ಅಶಕ್ತ್ಯಾ ವಾ- ಅದಿಲ್ಲದಿದ್ದರೆ ಸಾಮರ್ಥ್ಯವಿಲ್ಲದ್ದರಿಂದ ಗುಣಾನಾಂ-ಗುಣಗಳ ಇಯತ್ತಯಾ-ಇಷ್ಟೇ ಇರುವಿಕೆಯಿಂದ ನ-ಅಲ್ಲ.

ವಿಗ್ರಹವಾಕ್ಯಗಳು. ೧.ಮಹತೋ ಭಾವಃ-ಮಹಿಮಾ (ತ.ವೃ.); ತಂ ಮಹಿಮಾನಮ್. ೨.ನ ಶಕ್ತಿಃ-ಅಶಕ್ತಿಃ (ನ.ತ.); ತಯಾ-ಅಶಕ್ತ್ಯಾ. ೩.ಇದಂ ಪರಿಮಾಣಮಸ್ಯ-ಇಯಾನ್(ತ.ವೃ.); ಇಯತೋಭಾವಃ-ಇಯತ್ತಾ (ತ.ವೃ.); ತಯಾ-ಇಯತ್ತಯಾ.

ವ್ಯಾಕರಣವಿಶೇಷ. ೧.ಉತ್ಕೀರ್ತ್ಯ-ಕೃತಸಂಶಬ್ದನೇ (ಕೃತ್-ಕೂಗು) ಎಂಬ ೧೦ನೆಯ ಗಣದ ಧಾತುವಿಗೆ ಕ್ತ್ವಾಪ್ರತ್ಯಯ ಬಂದು ಉತ್ ಎಂಬ ಉಪಸರ್ಗವಿರುವದರಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಪ್ (=ಯ) ಆದೇಶವಾಗಿದೆ. ೨.ಸಂಹ್ರಿಯತೇ (೩)-ಹೃಞ್‌ಹರಣೇ (ಹೃ-ಒಯ್ಯು) ಎಂಬ ೧ನೆಯ ಗಣದ ಧಾತುವಿಗೆ 'ಸಂ' ಎಂಬ ಉಪಸರ್ಗವು ಸೇರಿ ಮುಗಿಸು, ನಿಲ್ಲಿಸು ಎಂಬರ್ಥವಾಗಿದೆ. ಕರ್ಮಣಿ ಲಟ್, ಆ.ಪ್ರ.ಏ.

ವಿಚಾರ. ಪರಮಾತ್ಮನ ಗುಣಗಳು ಲೆಕ್ಕವಿಲ್ಲದಷ್ಟು ಇರುವದರಿಂದ ಅವುಗಳನ್ನು ಪೂರ ಹೊಗಳಿ ಮುಗಿಸುವದು ಯಾರಿಂದಲೂ ಅಗುವದಿಲ್ಲವೆಂದು ಕವಿಯು ವರ್ಣಿಸುತ್ತಾನೆ. ಭಾಗವತದಲ್ಲಿಯೂ ಇಂಥ ವರ್ಣನೆಯೇ ಇದೆ. ವಿಷ್ಣೋರ್ನು ವೀರ್ಯಗಣನಾಂ ಕತಮೋऽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ॥ (ವಿಷ್ಣುವಿನ ವೀರ್ಯದ ಲೆಕ್ಕವನ್ನು ಯಾರು ಮಾಡುವನೆಂದರೆ, ಭೂಮಿಯಲ್ಲಿ ಧೂಳಿನ ಕಣಗಳ ಲೆಕ್ಕವನ್ನು ಮಾಡಬಲ್ಲಂಥ ಜಾಣನು.) ಮಹಿಮ್ನ ಸ್ತೋತ್ರದಲ್ಲಿಯೂ ಒಂದು ಶ್ಲೋಕವಿದೆ; ಅಸಿತಗಿರಿಸಮಂ ಸ್ಯಾತ್ಕಜ್ಜಲಂ ಸಿಂಧು ಪಾತ್ರೇ ಸುರತರುವರಶಾಖಾ ಲೇಖನೀ ಪತ್ರಮುರ್ವೀ । ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ॥ (ಅಂಜನಗಿರಿಯಷ್ಟು ಕಾಡಿಗೆಯು ಸಮುದ್ರವೆಂಬ ಮಷೀಕುಡಿಕೆಯಲ್ಲಿದ್ದರೆ, ಕಲ್ಪವೃಕ್ಷದ ಕೊಂಬೆಯೆ ಲೇಖನಿಯಾದರೆ, ಭೂಮಿಯೇ ಕಾಗದವಾದರೆ, ಶಾರದೆಯೇ ಯಾವಾಗಲೂ ಬರೆಯುತ್ತಿದ್ದರೆ, ಎಲೈ ಈಶ್ವರನೆ, ಆಗಲೂ ನಿನ್ನ ಗುಣಗಳ ಕಡೆಹಾಯುವದಾಗುವದಿಲ್ಲ.)

ಇತಿ ಪ್ರಸಾದಯಾಮಾಸುಸ್ತೇ ಸುರಾಸ್ತಮಧೋಕ್ಷಜಮ್ ।
ಭೂತಾರ್ಥವ್ಯಾಹೃತಿಃ ಸಾ ಹಿ ನ ಸ್ತುತಿಃ ಪರಮೇಷ್ಠಿನಃ ॥೩೩॥

ಅನ್ವಯ. [ಇತಿ ತೇ ಸುರಾಃ ಅಧೋಕ್ಷಜಂ ಪ್ರಸಾದಯಾಮಾಸುಃ, ಪರ

ಮೇಷ್ಠಿನೋ ಹಿ ಸಾ ಭೂತಾರ್ಥವ್ಯಾಹೃತಿಃ, ನ ಸ್ತುತಿಃ. ]

ಅರ್ಥ. ಇತಿ-ಹೀಗೆಂದು ತೇ-ಆ ಸುರಾಃ-ದೇವತೆಗಳು ತಂ-ಆ ಅಧೋಕ್ಷಜಂ-ವಿಷ್ಣುವನ್ನು ಪ್ರಸಾದಯಾಮಾಸುಃ-ಪ್ರಸನ್ನನಾಗಿ ಮಾಡಿದರು. ಹಿ-ಏಕೆಂದರೆ ಪರಮೇಷ್ಠಿನಃ-ಸರ್ವೋತ್ತಮನಾದ ಆತನಿಗೆ ಸಾ-ಅದು ಭೂತಾರ್ಥವ್ಯಾಹೃತಿಃ - (ಭೂತ-ಇರುವ ಅರ್ಥ-ವಿಷಯದ ವ್ಯಾಹೃತಿಃ-ಹೇಳಿಕೆಯು) ಇದ್ದದ್ದನ್ನು ಇದ್ದಂತೆ ಹೇಳಿದ್ದು ನ ಸ್ತುತಿಃ-ಹೊಗಳಿಕೆಯಲ್ಲ.

ತಾತ್ಪರ್ಯ. ಹೀಗೆ ಹೇಳಿ ಆ ಪರಮಾತ್ಮನನ್ನು ದೇವತೆಗಳು ಪ್ರಸನ್ನತೆಗೊಳಿಸಿದರು. ಅವರು ಆತನನ್ನು ಸುಮ್ಮಸುಮ್ಮನೆ ಹೊಗಳಿದರೆಂದು ಹೇಳಲಾಗದು; ಅದೆಲ್ಲ ಅವನ ವಿಷಯದಲ್ಲಿ ನಿಜವಗಿಯೂ ಇದ್ದ ಗುಣಗಳನ್ನೆ ಹೇಳಿದುದು.

ವಿಗ್ರಹವಾಕ್ಯಗಳು. ೧.ಅಕ್ಷಾತ್ ಜಾತಂ-ಅಕ್ಷಜಂ (ಕೃ.ವೃ.); ಅಧೋಭೂತಂ ಅಕ್ಷಜಂ ಯಸ್ಮಿನ್ ಸಃ-ಅಧೋಕ್ಷಜಃ (ಸ.ಬ.). ೨.ಪರಮೇ ತಿಷ್ಠತೀತಿ - ಪರಮೇಷ್ಠೀ (ಉಪ.ಸ.); ತಸ್ಯ-ಪರಮೇಷ್ಠಿನಃ. ೩. ಭೂತಶ್ಚ ಅಸೌ ಅರ್ಥಶ್ಚ - ಭೂತಾರ್ಥಃ (ವಿ.ಪೂ.ಕ.); ತಸ್ಯ-ಭೂತಾರ್ಥಸ್ಯ; ಭೂತಾರ್ಥಸ್ಯ ವ್ಯಾಹೃತಿಃ-ಭೂತಾರ್ಥವ್ಯಾಹೃತಿಃ (ಷ.ತ.).

ವ್ಯಾಕರಣವಿಶೇಷ. ೧.ಪರಮೇಷ್ಠಿನಃ-ಪರಮಶಬ್ದಕ್ಕೆ ಪರವಾಗಿರುವ ಸ್ಥಾಧಾತುವಿಗೆ ಇನಿಪ್ರತ್ಯಯವು ಬಂದಿದೆ; ತತ್ಪುರುಷಸಮಾಸದಲ್ಲಿ ಉತ್ತರವು ಕೃದಂತವಾಗಿದ್ದರೆ ಮತ್ತು ಒಟ್ಟು ಸಮಾಸವು ಸಂಜ್ಞಾನಾಮ (proper name) ವಾದರೆ ಸಪ್ತಮೀ ವಿಭಕ್ತಿಗೆ ಬಹಳವಾಗಿ ಲೋಪವಾಗದೆ ಇರುವದು. ಇಲ್ಲಿ ಪರಮೇಷ್ಠಿ ಎಂಬುದು ಪರಮಾತ್ಮನಿಗೆ ಹೆಸರು; ಆದ್ದರಿಂದ 'ಪರಮೇ' ಎಂಬಲ್ಲಿ ಸಪ್ತಮೀವಿಭಕ್ತಿಗೆ ಲೋಪವಾಗಲಿಲ್ಲ, ಅಲುಕ್ಸಮಾಸ; ಅಮ್ಬ, ಆಮ್ಬ, ಗೋ, ಭೂಮಿ, ಸವ್ಯೇ, ಅಪ, ದ್ವಿ, ತ್ರಿ, ಕುಶೇ, ಕು, ಶಙ್ಕು, ಅಙ್ಗು, ಮಞ್ಜಿ, ಪುಞ್ಜಿ, ಪರಮೇ, ಬರ್ಹಿಸ್, ದಿವಿ, ಅಗ್ನಿ-ಈ ಹದಿನೆಂಟು ಶಬ್ದಗಳ ಮುಂದೆ ಸ್ಥಾ, ಸ್ಥಿನ್, ಸ್ಥು-ಬಂದರೆ ಸಕಾರಕ್ಕೆ ಷ ಕಾರಾದೇಶವು ಆಗುವದು. ಇಲ್ಲಿ ಪರಮೇ ಎಂಬ ಮಾತಿಗೆ ಮುಂದೆ ಸ್ಥಿನ್ ಬಂದಿದೆ. ಆದ್ದರಿಂದ ಷಕಾರಾದೇಶ. ೨.ಪ್ರಸಾದಯಾಮಾಸುಃ-(೧೪) ಪ್ರಸಾದ ಎಂಬುದರಿಂದ ಬಂದಿರುವ ನಾಮಧಾತು (Denominative verb); ಲಿಟ್, ಪ. ಪ್ರ. ಬ. ೩.ಅಧೋಕ್ಷಜ-ಎಂಬ ಮಾತಿಗೆ ನಿಜವಾದ ಅವಯವಾರ್ಥವೇನೆಂಬುದು ಸಂಶಯಗ್ರಸ್ತ-ಒಬ್ಬೊಬ್ಬರು ಒಂದೊಂದು ಬಗೆಯಾಗಿ ಬರೆದಿರುತ್ತಾರೆ. ಮೇಲೆ ವಿಗ್ರಹವಾಕ್ಯದಲ್ಲಿ ತೋರಿಸಿರುವ ವ್ಯುತ್ಪತ್ತಿಯು (derivation) ಮಲ್ಲಿನಾಥವ್ಯಾಖ್ಯಾನುಸಾರವಾದದ್ದು. ಇಂದ್ರಿಯಜ್ಞಾನಕ್ಕೆ ಸಿಕ್ಕುವವನಲ್ಲವೆಂಬುದು ಇದರ ಅರ್ಥ. ಅಧಃ ಕೃತಾನಿ ಅಕ್ಷಾಣಿ ಯೈಃ ತೇ-ಅಧೋಕ್ಷಾಃ (ತೃ.ಬ.); ತೇಭ್ಯಃ ಅಧೋಕ್ಷೇಭ್ಯಃ; ಅಧೋಕ್ಷೇಭ್ಯಃ ಜಾಯತೇ ಇತಿ-ಅಧೋಕ್ಷಜಃ ಎಂದು ಮತ್ತೊಬ್ಬ ವ್ಯಾಖ್ಯಾನಕಾರನು ವಿಗ್ರಹವನ್ನು ಕೊಟ್ಟಿರುತ್ತಾನೆ. ಇಂದ್ರಿಯವನ್ನು ಜಯಿಸಿರುವ ವಸುದೇವಾದಿಗಳ ಹೊಟ್ಟೆಯಲ್ಲಿ ಕೃಷ್ಣಾದಿರೂಪದಿಂದ ಜನಿಸುತ್ತಾನೆಂಬುದು ಆ ವಿವರಣೆಯ ತಾತ್ಪರ್ಯ. ಭಾರತ ಹರಿವಂಶಗಳಲ್ಲಿ ಬೇರೆ ಬಗೆಯ ವ್ಯುತ್ಪತ್ತಿಯನ್ನು ಕೊಟ್ಟಿದೆ.

ತಸ್ಮೈ ಕುಶಲಸಂಪ್ರಶ್ನವ್ಯಞ್ಜಿತಪ್ರೀತಯೇ ಸುರಾಃ ।
ಭಯಮಪ್ರಲಯೋದ್ವೇಲಾದಾಚಖ್ಯುರ್ನೈರ್ಋತೋದಧೇಃ ॥೩೪॥

ಅನ್ವಯ. [ಸುರಾಃ ಕುಶಲಸಂಪ್ರಶ್ನವ್ಯಞ್ಜಿತಪ್ರೀತಯೇ ತಸ್ಮೈ ಅಪ್ರಲಯೋದ್ವೇಲಾತ್ ನೈರ್ಋತೋದಧೇಃ ಭಯಮ್ ಆಚಖ್ಯುಃ.]

ಅರ್ಥ. ಸುರಾಃ-ದೇವತೆಗಳು ಕುಶಲಸಂಪ್ರಶ್ನವ್ಯಞ್ಜಿತಪ್ರೀತಯೇ-(ಕುಶಲ - ಕ್ಷೇಮದ ಸಂಪ್ರಶ್ನ- ಸರಿಯಾದ ಪ್ರಶ್ನೆಯಿಂದ ವ್ಯಞ್ಜಿತ-ತೋರಿಸಲ್ಪಟ್ಟ ಪ್ರೀತಯೇ - ಪ್ರೀತಿಯುಳ್ಳ) ಕುಶಲವೆ ಎಂದು ಪ್ರಶ್ನೆಮಾಡಿ ಪ್ರೇಮವನ್ನು ತೋರ್ಪಡಿಸಿಕೊಂಡ ತಸ್ಮೈ-ಆತನಿಗೆ ಅಪ್ರಲಯೋದ್ವೇಲಾತ್- (ಅಪ್ರಲಯ-ಪ್ರಲಯವಿಲ್ಲದ ಕಾಲದಲ್ಲಿ ಉದ್ವೇಲಾತ್-ದಡವನ್ನು ಮೀರಿರುವ) ಪ್ರಲಯಕಾಲವಲ್ಲದಿದ್ದರೂ ಮೇರೆದಪ್ಪಿ ಬಂದಿರುವ ನೈರ್ಋತೋದಧೇಃ- (ನೈರ್ಋತ-ರಾಕ್ಷಸನೆಂಬ ಉದಧೇಃ-ಸಮುದ್ರದ ದೆಸೆಯಿಂದ) ರಾಕ್ಷಸನೆಂಬ ಕಡಲಿನಿಂದಾಗಿದ್ದ ಭಯಂ-ಹೆದರಿಕೆಯನ್ನು ಆಚಖ್ಯುಃ - ಹೇಳಿದರು.

ವಿಗ್ರಹವಾಕ್ಯಗಳು. ೧.ಪೃಚ್ಛ್ಯತ ಇತಿ-ಪ್ರಶ್ನಃ (ಕೃ.ವೃ.); ಸಮೀಚೀನಃ ಪ್ರಶ್ನಃ-ಸಂಪ್ರಶ್ನಃ; (ಪ್ರಾ.ಸ.); ಕುಶಲಸ್ಯ ಸಂಪ್ರಶ್ನಃ- ಕುಶಲಸಂಪ್ರಶ್ನಃ; ತೇನ-ಕುಶಲಸಂಪ್ರಶ್ನೇನ; ಕುಶಲಸಂಪ್ರಶ್ನೇನ ವ್ಯಞ್ಜಿತಾ-ಕುಶಲಸಂಪ್ರಶ್ನವ್ಯಞ್ಜಿತಾ (ತೃ.ತ.); ಕುಶಲಸಂಪ್ರಶ್ನವ್ಯಞ್ಜಿತಾ ಪ್ರೀತಿಃ ಯೇನ ಸಃ-ಕುಶಲಸಂಪ್ರಶ್ನವ್ಯಞ್ಜಿತಪ್ರೀತಿಃ (ತೃ.ಬ.); ತಸ್ಮೈ-ಕುಶಲಸಂಪ್ರಶ್ನವ್ಯಞ್ಜಿತಪ್ರೀತಯೇ. ೨.ಪ್ರಲೀಯನ್ತೇ ಅಸ್ಮಿನ್ನಿತಿ - ಪ್ರಲಯಃ (ಕೃ.ವೃ.); ನ ಪ್ರಲಯಃ-ಅಪ್ರಲಯಃ (ನ.ತ.); ಉದ್ಗತೋ ವೇಲಾಂ - ಉದ್ವೇಲಃ (ಪ್ರಾ.ಸ.); ಅಪ್ರಲಯೇ ಉದ್ವೇಲಃ-ಅಪ್ರಲಯೋದ್ವೇಲಃ (ಸ.ತ.); ತಸ್ಮಾತ್-ಅಪ್ರಲಯೋದ್ವೇಲಾತ್. ೩. ನಿರ್ಋಚ್ಛತೀತಿ-ನಿರ್ಋತಿಃ (ತ.ವೃ.); ನಿರ್ಋತಿರೇವ-ನೈರ್ಋತಿಃ (ತ.ವೃ.); ನೈರ್ಋತೇಃ ಅಪತ್ಯಂ ಪುಮಾನ್ - ನೈರ್ಋತಃ (ತ.ವೃ.); ನೈರ್ಋತ ಏವ ಉದಧಿಃ-ನೈರ್ಋತೋದಧಿಃ (ಅ.ಪೂ.ಕ.); ತಸ್ಯ-ನೈರ್ಋತೋದಧೇಃ.

ವ್ಯಾಕರಣವಿಶೇಷ. ೧.ಕುಶಲಸಂಪ್ರಶ್ನವ್ಯಞ್ಜಿತಪ್ರೀತಯೇ-ಇದು ತಸ್ಮೈ ಎಂಬುದಕ್ಕೆ ವಿಶೇಷಣ; ಇಕಾರಾಂತಪುಲ್ಲಿಂಗ. ೨.ನೈರ್ಋತೋದಧೇಃ-ಪಂಚಮೀ; ಹೆದರಿಕೆಯೆಂಬ ಅರ್ಥದ ಮಾತುಗಳ ಯೋಗವಿದ್ದರೆ ಯಾವದಕ್ಕೆ ಹೆದರುತ್ತಾರೋ ಅದರ ಹೆಸರಿಗೆ ಪಂಚಮೀವಿಭಕ್ತಿಯು ಬರುವದು. ೩. ಅಪ್ರಲಯಃ-ಪ್ರಲಯದ ಅಭಾವವೆಂದರ್ಥ. ನಞ್‌ಗೆ ಸಾದೃಶ್ಯ, ಅಭಾವ, ಅನ್ಯತ್ವ, ಅಲ್ಪತಾ, ಅಪ್ರಾಶಸ್ತ್ಯ, ವಿರೋಧ-ಎಂಬ ಆರು ಅರ್ಥಗಳುಂಟು. ೪.ಆಚಖ್ಯುಃ (೨೩)-ಚಕ್ಷಿಙ್‌ವ್ಯಕ್ತಾಯಾಂ ವಾಚಿ (ಚಕ್ಷ್-ಹೇಳು) ಎಂಬ ೨ನೆಯ ಗಣದ ಧಾತುವಿಗೆ ಆ ಎಂಬ ಉಪಸರ್ಗ ಸೇರಿದೆ; ಇದಕ್ಕೆ ಆರ್ಧಧಾತುಕದಲ್ಲಿ

(Non-conjugational) ಖ್ಯಾ ಅಥವಾ ಖಾ ಎಂಬಾದೇಶಗಳು ಬರುವವು. ಲಿಟ್,ಪ.ಪ್ರ.ಬ.)

ವಿಚಾರ. ಸಮುದ್ರವು ಪ್ರಳಯಕಾಲದಲ್ಲಿ ಮೇರೆದಪ್ಪಿ ಭೂಮಿಯನ್ನೆಲ್ಲ ಮುಳುಗಿಸಿಬಿಡುವದೆಂದು ಪುರಾಣಗಳಲ್ಲಿ ವರ್ಣನೆಯಿದೆ. ಸಮುದ್ರವು ಕೂಡ ಗೊತ್ತಾದ ಕಾಲದಲ್ಲಿ ಮೇರೆದಪ್ಪುವದು; ಆದರೆ ರಾವಣನು ಯಾವ ಕಾಲವನ್ನೂ ಲಕ್ಷ್ಯಕ್ಕೆ ತರದೆ ಜನರಿಗೆ ಹಿಂಸೆಯನ್ನು ಕೊಡುತ್ತಿರುವನೆಂಬ ಭಾವವನ್ನು 'ಅಪ್ರಲಯೋದ್ವೇಲಾತ್' ಎಂಬ ವಿಶೇಷಣದಿಂದ ತಿಳಿಸಿರುತ್ತದೆ.

ಅಥ ವೇಲಾಸಮಾಸನ್ನಶೈಲರನ್ಧ್ರಾನುನಾದಿನಾ ।
ಸ್ವರೇಣೋವಾಚ ಭಗವಾನ್ಪರಿಭೂತಾರ್ಣವಧ್ವನಿಃ ॥೩೫॥

ಅನ್ವಯ. [ಅಥ ವೇಲಾಸಮಾಸನ್ನಶೈಲರನ್ಧ್ರಾನುನಾದಿನಾ ಸ್ವರೇಣ ಪರಿಭೂತಾರ್ಣವಧ್ವನಿಃ ಭಗವಾನ್ ಉವಾಚ.]

ಅರ್ಥ. ಅಥ-ಅನಂತರದಲ್ಲಿ ವೇಲಾಸಮಾಸನ್ನ.... ನಾದಿನಾ-(ವೇಲಾ-ದಡದಲ್ಲಿ ಸಮಾಸನ್ನ-ಹತ್ತಿರವಾಗಿರುವ ಶೈಲ-ಪರ್ವತಗಳ ರನ್ಧ್ರ-ಗುಹೆಗಳಲ್ಲಿ ಅನುನಾದಿನಾ-ಪ್ರತಿಧ್ವನಿಯುನ್ನುಳ್ಳ) ಸಮುದ್ರದ ದಡಗಳಲ್ಲಿರುವ ಪರ್ವತಗಳಲ್ಲಿ ಪ್ರತಿಧ್ವನಿಯಾಗುವಂಥ ಸ್ವರೇಣ-ಧ್ವನಿಯಿಂದ ಪರಿಭೂತಾರ್ಣವಧ್ವನಿಃ-(ಪರಿಭೂತ-ತಿರಸ್ಕರಿಸಲ್ಪಟ್ಟ ಅರ್ಣವಧ್ವನಿಃ-ಸಮುದ್ರದ ಶಬ್ದವುಳ್ಳ) ಸಮುದ್ರದ ಶಬ್ದವನ್ನೂ ತಗ್ಗಿಸುತ್ತಾ ಭಗವಾನ್-ಪರಮಾತ್ಮನು ಉವಾಚ-ಹೇಳಿದನು.

ವಿಗ್ರಹವಾಕ್ಯಗಳು. ವೇಲಾಯಾಂ ಸಮಾಸನ್ನಾಃ-ವೇಲಾಸಮಾಸನ್ನಾಃ (ಸ. ತ.); ವೇಲಾಸಮಾಸನ್ನಾಶ್ಚ ತೇ ಶೈಲಾಶ್ಚ-ವೇಲಾಸಮಾಸನ್ನಶೈಲಾಃ (ವಿ.ಪೂ.ಕ.); ತೇಷಾಂ-ವೇಲಾಸಮಾಸನ್ನಶೈಲಾನಾಂ; ವೇಲಾಸಮಾಸನ್ನಶೈಲಾನಾಂ ರನ್ಧ್ರಾಃ - ವೇಲಾಸಮಾಸನ್ನಶೈಲರನ್ಧ್ರಾಃ (ಷ.ತ.); ತೇಷು- ವೇಲಾಸಮಾಸನ್ನಶೈಲರನ್ಧ್ರೇಷು; ಅನುನಾದಃ ಅಸ್ಯಾಸ್ತೀತಿ-ಅನುನಾದೀ (ತ.ವೃ); ವೇಲಾಸಮಾಸನ್ನಶೈಲರನ್ಧ್ರೇಷು ಅನುನಾದೀ-ವೇಲಾಸಮಾಸನ್ನಶೈಲರನ್ಧ್ರಾನುನಾದೀ (ಸ.ತ.); ತೇನ-ವೇಲಾಸಮಾಸನ್ನಶೈಲರನ್ಧ್ರಾನುನಾದಿನಾ. ೨. ಭಗಾಃ ಅಸ್ಯ ಸನ್ತೀತಿ- ಭಗವಾನ್ (ತ.ವೃ.); ೩. ಅರ್ಣವಸ್ಯ ಧ್ವನಿಃ-ಅರ್ಣವಧ್ವನಿಃ (ಷ.ತ.); ಪರಿಭೂತಃ ಅರ್ಣವಧ್ವನಿಃ ಯೇನ ಸಃ-ಪರಿಭೂತಾರ್ಣವಧ್ವನಿಃ (ತೃ.ತ.).

ವ್ಯಾಕರಣವಿಶೇಷ. ಉವಾಚ-ವಚಪರಿಭಾಷಣೇ (ವಚ್-ಮಾತಾಡು) ಎಂಬ ೨ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಏ.

ವಿಚಾರ. ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।

ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥ ಪೂರ್ಣವಾದ ಒಡೆತನ, ವೀರ್ಯ, ಕೀರ್ತಿ, ಸಂಪತ್ತು, ಜ್ಞಾನ, ವೈರಾಗ್ಯ-ಇವು ಆರಕ್ಕೆ ಭಗವೆಂದು ಹೆಸರು; ಈ ಆರು ಗುಣಗಳುಳ್ಳವನಿಗೆ ಭಗವಂತನೆಂದು ಹೆಸರು.

ಪುರಾಣಸ್ಯ ಕವೇಸ್ತಸ್ಯ ವರ್ಣಸ್ಥಾನಸಮೀರಿತಾ ।
ಬಭೂವ ಕೃತಸಂಸ್ಕಾರಾ ಚರಿತಾರ್ಥೈವ ಭಾರತೀ ॥೩೬॥

ಅನ್ವಯ. [ಪುರಾಣಸ್ಯ ಕವೇಃ ತಸ್ಯ ವರ್ಣಸ್ಥಾನಸಮೀರಿತಾ ಕೃತಸಂಸ್ಕಾರಾ ಭಾರತೀ ಚರಿತಾರ್ಥಾ ಬಭೂವ ಏವ.]

ಅರ್ಥ. ಪುರಾಣಸ್ಯ-ಬಲುಹಿಂದಿನ ಕವೇಃ-ಕವಿಯಾದ ತಸ್ಯ-ಆತನ ವರ್ಣ ಸ್ಥಾನಸಮೀರಿತಾ- (ವರ್ಣಸ್ಥಾನ- ವರ್ಣಗಳ ಸ್ಥಾನದಲ್ಲಿ ಸಮೀರಿತಾ- ಚೆನ್ನಾಗಿ ಉಚ್ಚರಿಸಿದ) ಆಯಾ ವರ್ಣಸ್ಥಾನಗಳಲ್ಲಿ ಚೆನ್ನಾಗಿ ಉಚ್ಚರಿಸಿದ ಕೃತಸಂಸ್ಕಾರಾ- (ಕೃತ-ಮಾಡಲ್ಪಟ್ಟ ಸಂಸ್ಕಾರಾ-ಸಂಸ್ಕಾರವುಳ್ಳ) ಸರಿಯಾದ ಸಂಸ್ಕಾರವನ್ನು ಹೊಂದಿದ ಭಾರತೀ-ಮಾತು ಚರಿತಾರ್ಥಾ-ಕೃತಾರ್ಥವಾಗಿ ಬಭೂವ ಏವ- ಆಗಿಯೇ ಆಯಿತು.

ವಿಗ್ರಹವಾಕ್ಯಗಳು. ೧.ವರ್ಣಾನಾಂ ಸ್ಥಾನಾನಿ- ವರ್ಣಸ್ಥಾನಾನಿ (ಷ.ತ.); ತೇಷು-ವರ್ಣಸ್ಥಾನೇಷು; ವರ್ಣಸ್ಥಾನೇಷು ಸಮೀರಿತಾ- ವರ್ಣಸ್ಥಾನಸಮೀರಿತಾ (ಸ.ತ.). ೨.ಕೃತಃ ಸಂಸ್ಕಾರಃ ಯಸ್ಯಾಃ ಸಾ-ಕೃತಸಂಸ್ಕಾರಾ (ಷ.ಬ.). ೩.ಚರಿತಃ ಅರ್ಥಃ ಯಯಾ ಸಾ-ಚರಿತಾರ್ಥಾ (ತೃ.ತ.)

ವ್ಯಾಕರಣವಿಶೇಷ. ಬಭೂವ-ಭೂ ಸತ್ತಾಯಾಂ (ಭೂ-ಇರು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಏ.

ವಿಚಾರ. ೧. ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಣ್ಠಃ ಶಿರಸ್ತಥಾ । ಜಿಹ್ವಾಮೂಲಂ ಚ ದನ್ತಾಶ್ಚ ನಾಸಿಕೋಷ್ಠೌ ಚ ತಾಲು ಚ ॥ ಎಂಬಂತೆ ಎದೆ, ಕಂಠ, ತಲೆ, ನಾಲಗೆಯ ಬುಡ, ಹಲ್ಲು, ಮೂಗು, ತುಟಿ, ದವಡೆ-ಇವು ಎಂಟು ವರ್ಣಗಳು ಹುಟ್ಟುವ ಸ್ಥಾನಗಳು. ಇಂಥಿಂಥ ಸ್ಥಾನಗಳಲ್ಲಿ ವರ್ಣಗಳನ್ನು ಉಚ್ಚರಿಸಬೇಕೆಂದೂ ಹೀಗೆ ಹೀಗೆಯೆ ಉಚ್ಚರಿಸಬೇಕೆಂದೂ ನಿಯಮವುಂಟು. ವೇದವನ್ನು ಮೊದಲು ಉಚ್ಚರಿಸಿದ್ದ ವಿಷ್ಣುವು ಈಗ ಆಡಿದ್ದರಿಂದ ಮಾತಿಗೆ ಹೆಚ್ಚಿನ ಸಾಫಲ್ಯವು ಬಂತು ಎಂದು ಭಾವ. ೨.ಪರಾ, ಮಧ್ಯಮಾ, ಪಶ್ಯನ್ತೀ, ವೈಖರೀ-ಎಂದು ನಾಲ್ಕು ಸ್ಥಿತಿಯಲ್ಲಿ ಮಾತು ಇರುವದೆಂದೂ ಅದು ಕ್ರಮವಾಗಿ ಮೂಲಾಧಾರ, ನಾಭಿ, ಹೃದಯ, ಮುಖ- ಎಂಬ ನಾಲ್ಕು ಸ್ಥಾನಗಳಲ್ಲಿ ತೋರಿಕೊಳ್ಳುವದೆಂದೂ

ಆಗಮಿಕರು ಹೇಳುತ್ತಾರೆ. ಪರಮಾತ್ಮನು ಆಡಿದ ಮಾತು ಕ್ರಮವಾಗಿ ಈ ನಾಲ್ಕು ಸ್ಥಿತಿಗಳನ್ನು ಪಡೆದು ಕೊನೆಗೆ ದೇವತೆಗಳಿಗೆ ಕೇಳಬಂತು ಎಂದೂ ಅರ್ಥಮಾಡಿಕೊಳ್ಳಬಹುದಾಗಿದೆ. ಈ ಶ್ಲೋಕಕ್ಕೆ ಸಮಾನವಾಗಿ ಅರ್ಥವಿರುವ "ಪುರಾಣಸ್ಯ ಕವೇಸ್ತಸ್ಯ ಚತುರ್ಮುಖಸಮೀರಿತಾ । ಪ್ರವೃತ್ತಿರಾಸೀಚ್ಛಬ್ದಾನಾಂ ಚರಿತಾರ್ಥಾ ಚತುಷ್ಟಯೀ ॥ " (೨-೧೭) ಎಂಬ ಕುಮಾರಸಂಭವಶ್ಲೋಕವನ್ನು ಇದಕ್ಕೆ ಹೋಲಿಸಿ ನೋಡಬಹುದಾಗಿದೆ. ೩.ಪರಮಾತ್ಮನನ್ನು 'ಪುರಾಣಕವಿ'ಎಂದು ವರ್ಣಿಸಿರುವದರಿಂದ ವೇದವು ಈಶ್ವರವಾಕ್ಯವೆಂದು ಹೇಳುವ ನೈಯಾಯಿಕರ ಮತವನ್ನು ಕಾಳಿದಾಸನು ಒಪ್ಪಿದ್ದರೂ ಒಪ್ಪಿರಬಹುದೆಂದು ತೋರುತ್ತದೆ; ಅಥವಾ 'ಆದಿಯಲ್ಲಿ ವೇದವನ್ನು ಉಚ್ಚರಿಸಿದವನು' ಎಂಬುದಿಷ್ಟೇ ತಾತ್ಪರ್ಯವಿದ್ದರೂ ಇರಬಹುದು. ಏಕೆಂದರೆ ತನ್ನ ಸ್ತುತಿಯಲ್ಲಿ ವೇದಾಂತಿಗಳ ಮತವನ್ನೇ ಹೆಚ್ಚಾಗಿ ಅನುಸರಿಸಿರುವ ಕವಿಯು ವೇದವು ಅಪೌರುಷೇಯವೆಂಬ ಮತವನ್ನೆ ಒಪ್ಪಿರುವನೆಂದು ಇಟ್ಟುಕೊಳ್ಳುವದು ಹೆಚ್ಚುಯುಕ್ತವಾಗಿದೆ.

ಬಭೌ ಸದಶನಜ್ಯೋತ್ಸ್ನಾ ಸಾ ವಿಭೋರ್ವದನೋದ್ಗತಾ ।
ನಿರ್ಯಾತಶೇಷಾ ಚರಣಾದ್ಗಙ್ಗೇವೋರ್ಧ್ವಪ್ರವರ್ತಿನೀ ॥೩೭॥

ಅನ್ವಯ. [ವಿಭೋಃ ವದನೋದ್ಗತಾ ಸದಶನಜ್ಯೋತ್ಸ್ನಾ ಸಾ ಚರಣಾತ್ ನಿರ್ಯಾತಶೇಷಾ ಊರ್ಧ್ವಪ್ರವರ್ತಿನೀ ಗಙ್ಗಾ ಇವ ಬಭೌ.]

ಅರ್ಥ. ವಿಭೋಃ-ಸರ್ವಶಕ್ತನಾದ (ಆತನ) ವದನೋದ್ಗತಾ- ಮುಖದಿಂದ ಹೊರಟ ಸದಶನಜ್ಯೋತ್ಸ್ನಾ-ಹಲ್ಲುಗಳ ಕಾಂತಿಯಿಂದ ಕೂಡಿದ ಸಾ-ಆ (ಮಾತು) ಚರಣಾತ್- ಕಾಲಿನಿಂದ ನಿರ್ಯಾತಶೇಷಾ- (ನಿರ್ಯಾತ-ಹೊರಟ ಶೇಷಾ-ಉಳಿದ) ಹೊರಬಂದು ಉಳಿದಿರುವ ಊರ್ಧ್ವಪ್ರವರ್ತಿನೀ- ಮೇಲಕ್ಕೆ ಹರಿಯುತ್ತಿರುವ ಗಙ್ಗೇವ- ಗಂಗೆಯೋ ಎಂಬಂತೆ ಬಭೌ- ಬೆಳಗುತ್ತಲಿತ್ತು.

ತಾತ್ಪರ್ಯ. ಪರಮಾತ್ಮನು ಮಾತಾಡುತ್ತಿರುವಾಗ ಅವನ ಹಲ್ಲುಗಳ ಶುಭ್ರ ಕಾಂತಿಯೂ ಸೇರಿಕೊಂಡದ್ದರಿಂದ ಪಾದದಿಂದ ಹೊರಕ್ಕೆ ಬರದೆ ಇನ್ನೂ ಉಳಿದಿರುವ ಗಂಗೆಯು ಮೇಲುಗಡೆಗೆ ಹರಿದು ಬಂದಿತೋ ಎಂಬಂತೆ ಒಪ್ಪುತ್ತಲಿತ್ತು.

ವಿಗ್ರಹವಾಕ್ಯಗಳು. ೧.ದಶನಾನಾಂ ಜ್ಯೋತ್ಸ್ನಾ-ದಶನಜ್ಯೋತ್ಸ್ನಾ (ಷ.ತ.); ತಯಾ-ದಶನಜ್ಯೋತ್ಸ್ನಯಾ; ದಶನಜ್ಯೋತ್ಸ್ನಯಾ ಸಹ ವರ್ತತ ಇತಿ-ಸದಶನ ಜ್ಯೋತ್ಸ್ನಾ (ಸಹ.ಬ.). ೨.ವದನಾತ್ ಉದ್ಗತಾ-ವದನೋದ್ಗತಾ (ಪಂ.ತ.) ೩.ನಿರ್ಯಾತಾ ಚಾಸೌ ಶೇಷಾ ಚ-ನಿರ್ಯಾತಶೇಷಾ (ವಿ.ಪೂ.ಕ.). ೪.ಊರ್ಧ್ವಂ

ಪ್ರವರ್ತತ ಇತಿ-ಊರ್ಧ್ವಪ್ರವರ್ತಿನೀ (ಕೃ.ವೃ.).

ವ್ಯಾಕರಣವಿಶೇಷ. ೧.ನಿರ್ಯಾತಶೇಷಾ-ಇದು ಕರ್ಮಧಾರಯವಾದ್ದರಿಂದ ಸ್ತ್ರೀಲಿಂಗವಾಗಿರುವ ನಿರ್ಯಾತಶಬ್ದಕ್ಕೆ ಪುಲ್ಲಿಂಗದಂತೆ ರೂಪವು ಬಂದಿರುತ್ತದೆ. ಇದನ್ನು ನಿರ್ಯಾತಾಯಾಃ ಶೇಷಾ-ಎಂದು ವಿಗ್ರಹಬಿಡಿಸಿದರೆ ನಿರ್ಯಾತಾಶೇಷಾ ಎಂದಾಗಬೇಕಾಗುವದು. ೨.ಬಭೌ (೨೧)-ಭಾ ದೀಪ್ತೌ (ಭಾ-ಬೆಳಗು) ಎಂಬ ೨ನೆಯ ಗಣದ ಧಾತುವಿನ ಲಿಟ್, ಪ.ಪ್ರ. ಏ.

ವಿಚಾರ. ೧.ಶಿವನ ಗಾನವನ್ನು ಕೇಳಿದ ವಿಷ್ಣುವಿನ ಶರೀರವು ಕರಗಿ ಗಂಗೆಯು ಹುಟ್ಟಿದಳೆಂದೂ ಗಂಗೆಯನ್ನು ಕಂಡು ವಿಷ್ಣುವು ಮೋಹಿತನಾಗಲು ಲಕ್ಷ್ಮಿಯು ಅಸೂಯಾಗ್ರಸ್ತಳಾದಳೆಂದೂ ಆಗ ಗಂಗೆಯು ವಿಷ್ಣುವಿನ ಪಾದದಲ್ಲಿ ಅಡಗಿಕೊಂಡಳೆಂದೂ ದೇವತೆಗಳು ವಿಷ್ಣುವನ್ನೂ ಲಕ್ಷ್ಮಿಯನ್ನೂ ಪ್ರಾರ್ಥಿಸಲು ವಿಷ್ಣುವಿನ ಎಡಹೆಬ್ಬೆಟ್ಟಿನಿಂದ ಮತ್ತೆ ಉದ್ಭವಿಸಿದಳೆಂದೂ ಪುರಾಣದ ಕಥೆ. ೨.ಗಂಗೆಗೆ ಕಣ್ಣಿಗೆ ಕಾಣಿಸುವ ರೂಪವುಂಟು. ಕಣ್ಣಿಗೆ ಕಾಣಿಸುವ ರೂಪವಿಲ್ಲದ ವಿಷ್ಣುವಿನ ವಾಕ್ಕು ಇದರ ಹಾಗೆ ಶುಭ್ರವಾಗಿತ್ತೆಂದು ವರ್ಣಿಸಿರುವದು ಒಂದು ವಿಶೇಷವಾದ ಉತ್ಪ್ರೇಕ್ಷೆ.

ಜಾನೇ ವೋ ರಕ್ಷಸಾಕ್ರಾನ್ತಾವನುಭಾವಪರಾಕ್ರಮೌ ।
ಅಙ್ಗಿನಾಂ ತಮಸೇವೋಭೌ ಗುಣೌ ಪ್ರಥಮಮಧ್ಯಮೌ ॥೩೮॥

ಅನ್ವಯ. [-ವಃ ಅನುಭಾವಪರಾಕ್ರಮೌ ರಕ್ಷಸಾ ಅಙ್ಗಿನಾಂ ಪ್ರಥಮಮಧ್ಯಮೌ ಗುಣೌ ತಮಸಾ ಇವ ಆಕ್ರಾನ್ತೌ ಜಾನೇ.]

ಅರ್ಥ. ವಃ-ನಿಮ್ಮಗಳ ಅನುಭಾವಪರಾಕ್ರಮೌ-ಪ್ರಭಾವ ಮತ್ತು ಪರಾಕ್ರಮ ಇವುಗಳು ರಕ್ಷಸಾ-ರಾಕ್ಷಸನಾದ ರಾವಣನಿಂದ ಅಙ್ಗಿನಾಂ-ಶರೀರವುಳ್ಳ(ಜೀ)ವರ ಪ್ರಥಮಮಧ್ಯಮೌ- ಮೊದಲನೆಯ ಮತ್ತು ಎರಡನೆಯ ಗುಣೌ-ಗುಣಗಳು ತಮಸಾ ಇವ-ತಮೋ ಗುಣದಿಂದ ಹೇಗೋ ಹಾಗೆ ಆಕ್ರಾನ್ತೌ-ಆಕ್ರಮಿಸಲ್ಪಟ್ಟಿವೆ (ಎಂಬುದನ್ನು) ಜಾನೇ-ಬಲ್ಲೆನು.

ವಿಗ್ರಹವಾಕ್ಯಗಳು. ೧.ಅನುಭಾವಶ್ಚ ಪರಾಕ್ರಮಶ್ಚ-ಅನುಭಾವಪರಾಕ್ರಮೌ (ದ್ವ.). ೨.ಅಙ್ಗಾನಿ ಸನ್ತಿ ಏಷಾಂ ಇತಿ-ಅಙ್ಗಿನಃ (ತ.ವೃ.); ತೇಷಾಂ-ಅಙ್ಗಿನಾಮ್. ೩.ಪ್ರಥಮಶ್ಚ ಮಧ್ಯವಶ್ಚ- ಪ್ರಥಮ ಮಧ್ಯಮೌ (ದ್ವ.).

ವ್ಯಾಕರಣವಿಶೇಷ. ೧.ಪ್ರಥಮ-ವಿಶೇಷಶಬ್ದ (ಪ್ರಥಮಃ, ಪ್ರಥಮೌ, ಪ್ರಥಮೇ, ಪ್ರಥಮಾಃ । ಹೇ ಪ್ರಥಮ, ಹೇ ಪ್ರಥಮೌ, ಹೇ ಪ್ರಥಮೇ-ಹೇ ಪ್ರಥಮಾಃ । ಉಳಿದದ್ದು ರಾಮಶಬ್ದದಂತೆ) . ೨.ಉಭೌ-ನಿತ್ಯದ್ವಿವಚನಾಂತಶಬ್ದ. ೩.ಜಾನೇ-(೮)ಜ್ಞಾ ಅವಬೋಧನೇ (ಜ್ಞಾ-ತಿಳಿ) ಎಂಬ ೯ನೆಯ ಗಣದ

ಧಾತುವಿನ ಲಿಟ್, ಆ. ಉ. ಏ. ಈ ಕ್ರಿಯಾಪದಕ್ಕೆ ಹಿಂದಿನ ನಾಮವಾಕ್ಯದರ್ಥವೇ (noun clause) ಕರ್ಮ.

ವಿಚಾರ. ೧.ಪ್ರಾಣಿಗಳಲ್ಲಿ ಸತ್ತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳಿರುವವೆಂದೂ ಇವುಗಳಲ್ಲಿ ಒಂದೊಂದು ಹೆಚ್ಚಿದಾಗ ಮಿಕ್ಕ ಎರಡೂ ಅದಕ್ಕೆ ವಶವಾಗಿರುವವೆಂದೂ ಸಾಂಖ್ಯಶಾಸ್ತ್ರದಲ್ಲಿ ವರ್ಣಿಸಿದೆ; ತಮೋಗುಣವು ಹೆಚ್ಚಿದಾಗ ಅದಕ್ಕೆ ಸತ್ತ್ವಗುಣವೂ ರಜೋಗುಣವೂ ವಶವಾಗಿಬಿಡುವಂತೆ ರಾವಣನಿಗೆ ನಿಮ್ಮ ಮನಸ್ಸಿನ ಪ್ರಭಾವವೂ ಶರೀರದ ಪರಾಕ್ರಮವೂ ವಶವಾಗಿರುವವೆಂಬುದನ್ನು ನಾನು ಬಲ್ಲೆನು ಎಂದು ಭಗವಂತನು ಹೇಳಿದ್ದಾನೆ. ೨.ಅನುಭಾವವು ಸತ್ತ್ವದ ಫಲವಾದ ಮನಸ್ಸಿನ ಗುಣವು; ಪರಾಕ್ರಮವು ರಜಸ್ಸಿನ ಫಲವಾದ ಶರೀರದ ಗುಣವು; ಆದ್ದರಿಂದ ರಾವಣನನ್ನು ತಮಸ್ಸಿಗೆ ಹೋಲಿಸಿರುವದು ಇಲ್ಲಿ ಬಹು ಚೆನ್ನಾಗಿ ಒಪ್ಪುತ್ತದೆ.

ವಿದಿತಂ ತಪ್ಯಮಾನಂ ಚ ತೇನ ಮೇ ಭುವನತ್ರಯಮ್ ।
ಅಕಾಮೋಪನತೇನೇವ ಸಾಧೋರ್ಹೃದಯಮೇನಸಾ ॥೩೯॥

ಅನ್ವಯ. [ಅಕಾಮೋಪನತೇನ ಏನಸಾ ಸಾಧೋಃ ಹೃದಯಂ ಇವ ತೇನ ತಪ್ಯಮಾನಂ ಭುವನತ್ರಯಂ ಚ ಮೇ ವಿದಿತಮ್ ]

ಅರ್ಥ. ಅಕಾಮೋಪನತೇನ-(ಅಕಾಮ-ಇಚ್ಛೆಯಿಲ್ಲದೆ ಇರುವಿಕೆಯಿಂದ ಉಪನತೇನ-ಬಂದಿರುವ)ತನಗೆ ಬೇಕಿಲ್ಲದಿದ್ದರೂ ಗಂಟುಬಿದ್ದಿರುವ ಏನಸಾ - ಪಾಪದಿಂದ ಸಾಧೋಃ-ಸತ್ಪುರುಷನ ಹೃದಯಂ ಇವ-ಹೃದಯದಂತೆ ತೇನ-ಆ (ರಾಕ್ಷಸನಿಂದ) ತಪ್ಯಮಾನಂ-ಸಂತಾಪಗೊಳಿಸಲ್ಪಡುತ್ತಿರುವ ಭುವನತ್ರಯಂ ಚ- ಮೂರು ಲೋಕವೂ ಮೇ-ನನಗೆ ವಿದಿತಂ-ತಿಳಿದಿರುವದಾಗಿದೆ.

ತಾತ್ಪರ್ಯ. ಸಜ್ಜನನಾದವನ ಹೃದಯದಲ್ಲಿ ಹೇಗೋ ಬಂದೊದಗಿ ಕಾಡುವ ಪಾಪದಂತೆ ಮೂರು ಲೋಕವನ್ನೂ ಆ ರಾಕ್ಷಸನು ಸಂಕಟಗೊಳಿಸುತ್ತಿರುವವೆಂಬುದು ನನಗೆ ಗೊತ್ತಿದೆ.

ವಿಗ್ರಹವಾಕ್ಯಗಳು. ೧.ತ್ರಯೋ ಅವಯವಾ ಅಸ್ಯೇತಿ-ತ್ರಯಮ್ (ತ.ವ್ಯ.); ಭುವನಾನಾಂ ತ್ರಯಂ-ಭುವನತ್ರಯಮ್-(ಷ.ತ.). ೨.ನ ಕಾಮಃ-ಅಕಾಮಃ (ನ.ತ.) ತೇನ-ಅಕಾಮೇನ; ಅಕಾಮೇನ ಉಪನತಂ-ಅಕಾಮೋಪನತಂ (ತೃ.ತ.) ತೇನ - ಅಕಾಮೋಪನತೇನ.

ವ್ಯಾಕರಣವಿಶೇಷ. ೧.ಏನಸಾ-ಸಕಾರಾನ್ತ ನಪುಂಸಕ. ೨.ಮೇ ವಿದಿತಂ-ವಿದಿತ ಎಂಬಲ್ಲಿ ವರ್ತಮಾನಾರ್ಥದಲ್ಲಿ ಕ್ತಪ್ರತ್ಯಯವು ಬಂದಿದೆ; ಇಚ್ಛೆ, ಬುದ್ಧಿ, ಪೂಜಾ-ಮುಂತಾದ ಕೆಲವು ಅರ್ಥದ

ಧಾತುಗಳಿಗೆ ಹೀಗೆ ಪ್ರತ್ಯಯವು ಬರುವದು; ವರ್ತಮಾನಾರ್ಥದಲ್ಲಿ ಕ್ತಪ್ರತ್ಯಯವು ಬಂದಿದ್ದರೆ ಅದರ ಯೋಗವಿರುವ ಶಬ್ದಕ್ಕೆ ಷಷ್ಠೀ ಬರುವದು; 'ಮೇ ವಿದಿತಂ=ಮಯಾ ಜ್ಞಾಯತೇ'.

ವಿಚಾರ. ರಾವಣನು ಅಧರ್ಮಕ್ಕೆ ಹೆದರದೆ ಕಂಡವರ ಹೆಂಡಿರನ್ನು ಹಿಡಿದು ಭೋಗಿಸುತ್ತಿದ್ದನು; ದೇವತೆಗಳನ್ನು ಸೋಲಿಸಿ ಅವರ ವನವನ್ನು ಹಾಳುಮಾಡಿ ಅವರ ಹೆಂಡತಿಯರನ್ನು ಸೆರೆಹಿಡಿದಿದ್ದನು; ಋಷಿಗಳ ಕರ್ಮಕ್ಕೆ ಕಂಟಕನಾಗಿ ಅವರನ್ನು ಹಿಂಸಿಸುತ್ತಿದ್ದನು; ಸೂರ್ಯಾದಿಗಳು ಕೂಡ ಅವನಿಗೆ ಹೆದರುತ್ತಿದ್ದರು.

ಕಾರ್ಯೇಷು ಚೈಕಕಾರ್ಯತ್ವಾದಭ್ಯರ್ಥ್ಯೋಽಸ್ಮಿ ನ ವಜ್ರಿಣಾ ।
ಸ್ವಯಮೇವ ಹಿ ವಾತೋಽಗ್ನೇಃ ಸಾರಥ್ಯಂ ಪ್ರತಿಪದ್ಯತೇ ॥೪೦॥

ಅನ್ವಯ. [ಏಕಕಾರ್ಯತ್ವಾತ್ ಚ ಕಾರ್ಯೇಷು ವಜ್ರಿಣಾ ಅಭ್ಯರ್ಥ್ಯಃ ನ ಅಸ್ಮಿ ವಾತಃ ಸ್ವಯಂ ಏವ ಅಗ್ನೇಃ ಸಾರಥ್ಯಂ ಪ್ರತಿಪದ್ಯತೇ ಹಿ ]

ಅರ್ಥ. ಚ- ಮತ್ತು ಏಕಕಾರ್ಯತ್ವಾತ್-(ನಾವಿಬ್ಬರೂ ಒಂದೇ ಕಾರ್ಯವುಳ್ಳವರಾಗಿರುವದರ ದೆಸೆಯಿಂದ ಕಾರ್ಯೇಷು-ಮಾಡಬೇಕಾದ ಕೆಲಸಗಳಲ್ಲಿ ವಜ್ರಿಣಾ-ಇಂದ್ರನಿಂದ ಅಭ್ಯರ್ಥ್ಯಃ- ಪ್ರಾರ್ಥಿಸಲ್ಪಡತಕ್ಕವನು ನಾಸ್ಮಿ-ಆಗಿರುವದಿಲ್ಲ. ವಾತಃ - ಗಾಳಿಯು ಸ್ವಯಮೇವ-ತಾನೇ ಅಗ್ನೇಃ- ಬೆಂಕಿಗೆ ಸಾರಥ್ಯಂ-ಸಹಾಯಮಾಡುವದನ್ನು ಪ್ರತಿಪದ್ಯತೇ ಹಿ-ಪಡೆಯುತ್ತದೆಯಲ್ಲವೆ?

ತಾತ್ಪರ್ಯ. ನಮ್ಮಿಬ್ಬರಿಗೂ ಇದೇ ಕಾರ್ಯವು ಆಗಬೇಕಾಗಿರುವದರಿಂದ ಇಂದ್ರನು ನನ್ನನ್ನು ಈ ವಿಷಯದಲ್ಲಿ ಕೇಳಿಕೊಳ್ಳಬೇಕಾದದ್ದು ಏನೂ ಇಲ್ಲ; ಗಾಳಿಯು ಬೆಂಕಿಗೆ ತಾನೇ ಸಹಾಯವಾಗುವದೇ ಹೊರತು ಅದನ್ನು ಬೆಂಕಿಯೇನೂ ಪ್ರಾರ್ಥಿಸಿಕೊಳ್ಳಬೇಕಾದದ್ದು ಇರುವದಿಲ್ಲ.

ವಿಗ್ರಹವಾಕ್ಯಗಳು. ೧.ಏಕಂ ಕಾರ್ಯಂ ಯಯೋಃ ತೌ-ಏಕಕಾರ್ಯೌ(ಷ.ಬ.); ತಯೋಃ-ಏಕಕಾರ್ಯಯೋಃ; ಏಕಕಾರ್ಯಯೋಃ ಭಾವಃ-ಏಕಕಾರ್ಯತ್ವಂ (ತ.ವೃ.); ೩. ವಜ್ರಂ ಅಸ್ಯ ಅಸ್ತೀತಿ-ವಜ್ರೀ (ತ.ವೃ); ತೇನ-ವಜ್ರಿಣಾ. ೪.ಸಾರಥೇಃ ಭಾವಃ - ಸಾರಥ್ಯಮ್ (ತ.ವೃ.)

ವ್ಯಾಕರಣವಿಶೇಷ. ೧.ಸ್ವಯಂ-ಅವ್ಯಯ. ೨.ಕಾರ್ಯೇಷು ಚ-ವಾಕ್ಯಪ್ರಾರಂಭದಲ್ಲಿ ಚ ಎಂಬ ಅವ್ಯಯವು ಬರುವದಿಲ್ಲ. ೩.ಅಸ್ಮಿ (೧)-ಅಸ ಭುವಿ (ಅಸ್ ಇರು) ಎಂಬ ೨ನೆಯ ಗಣದ ಧಾತುವಿನ ಲಟ್, ಪ.ಉ.ಏ. ೪.ಪ್ರತಿಪದ್ಯತೇ (೩)-ಪದ ಗತೌ (ಪದ್-ಹೋಗು) ಎಂಬ ೪ನೆಯ ಗಣದ ಧಾತುವಿಗೆ 'ಪ್ರತಿ' ಎಂಬ ಉಪಸರ್ಗವು ಸೇರಿ ಹೊಂದು ಎಂಬ ಅರ್ಥವಾಗಿದೆ. ಲಟ್, ಆ. ಪ್ರ. ಏ.

ವಿಚಾರ. ತಿಳಿದವರು ತಮ್ಮ ಕೆಲಸಕ್ಕೆ ಮತ್ತೊಬ್ಬರಿಂದ ಹೇಳಿಸಿಕೊಳ್ಳುವ

ದಿಲ್ಲ. ತಾವೇ ಪ್ರವೇಶಿಸುತ್ತಾರೆ- ಎಂಬ ಅಭಿಪ್ರಾಯವನ್ನು ಚೆನ್ನಾಗಿ ತೋರಿಸುವದಕ್ಕೆ ವಾಯುವಿನ ದೃಷ್ಟಾಂತವನ್ನು ಕೊಟ್ಟಿರುತ್ತದೆ. ಪರಮಾತ್ಮನಿಗೆ ನಿಜವಾಗಿ ಆಗಬೇಕಾದ ಸ್ವಕಾರ್ಯವೇನೂ ಇಲ್ಲದಿದ್ದರೂ ಅಧರ್ಮವನ್ನು ನಾಶಗೊಳಿಸಿ ಧರ್ಮವನ್ನು ಸ್ಥಾಪನೆ ಮಾಡುವದು ಅವನಿಗೆ ಸ್ವಭಾವವು. ೨೪, ೩೧ನೆಯ ಶ್ಲೋಕಗಳನ್ನು ನೋಡಿ. ಇಂದ್ರನು ಬಯಸುವ ರಾವಣನ ವಧೆಯು ಧರ್ಮಕಾರ್ಯವಾದ್ದರಿಂದ 'ನಮ್ಮಿಬ್ಬರಿಗೂ ಒಂದೇ ಕಾರ್ಯವಿದೆ' ಎಂದಿದ್ದಾನೆ.

ಸ್ವಾಸಿಧಾರಾಪರಿಹೃತಃ ಕಾಮಂ ಚಕ್ರಸ್ಯ ತೇನ ಮೇ ।
ಸ್ಥಾಪಿತೋ ದಶಮೋ ಮೂರ್ಧಾ ಲಭ್ಯಾಂಶ ಇವ ರಕ್ಷಸಾ ॥೪೧॥

ಅನ್ವಯ. [ಸ್ವಾಸಿಧಾರಾಪರಿಹೃತಃ (ಲಭ್ಯಾಂಶ) ದಶಮೋ ಮೂರ್ಧಾ ಮೇ ಚಕ್ರಸ್ಯ ಕಾಮಂ ಲಭ್ಯಾಂಶಃ ಇವ ತೇನ ರಕ್ಷಸಾ ಸ್ಥಾಪಿತಃ.]

ಅರ್ಥ. ಸ್ವಾಸಿಧಾರಾಪರಿಹೃತಃ-(ಸ್ವ-ತನ್ನ ಅಸಿ-ಕತ್ತಿಯ ಧಾರಾ-ಅಲುಗಿನಿಂದ ಪರಿಹೃತಃ-ಬಿಡಲ್ಪಟ್ಟ) ತನ್ನ ಕತ್ತಿಯ ಅಲುಗಿನಿಂದ ಕತ್ತರಿಸದೆ ಉಳಿಸಿರುವ ದಶಮಃ- ಹತ್ತನೆಯ ಮೂರ್ಧಾ-ತಲೆಯು ಮೇ-ನನ್ನ ಚಕ್ರಸ್ಯ-ಚಕ್ರಕ್ಕೆ ಕಾಮಂ-ತಕ್ಕ ಲಭ್ಯಾಂಶ ಇವ-ಪಡೆಯತಕ್ಕ ಭಾಗದಂತೆ ತೇನ-ಆ ರಕ್ಷಸಾ-ರಾಕ್ಷಸನಿಂದ ಸ್ಥಾಪಿತಃ-ಇಡಲ್ಪಟ್ಟಿತು.

ವಿಗ್ರಹವಾಕ್ಯಗಳು. ೧.ಸ್ವಸ್ಯ ಅಸಿಃ-ಸ್ವಾಸಿಃ (ಷ.ತ.); ತಸ್ಯ-ಸ್ವಾಸೇಃ ಸ್ವಾಸೇಃ ಧಾರಾ-ಸ್ವಾಸಿಧಾರಾ (ಷ.ತ.); ತಯಾ- ಸ್ವಾಸಿಧಾರಯಾ; ಸ್ವಾಸಿಧಾರಯಾ ಪರಿಹೃತಃ-ಸ್ವಾಸಿಧಾರಾಪರಿಹೃತಃ (ತೃ.ತ.) ೨.ದಶಾನಾಂ ಪೂರಣಃ-ದಶಮಃ (ತ.ವೃ.); ೩.ಲಭ್ಯಶ್ಚ ಅಸೌ ಅಂಶಶ್ಚ; ಲಭ್ಯಾಂಶಃ (ವಿ.ಪೂ.ಕ.).

ವ್ಯಾಕರಣವಿಶೇಷ. ೧.ಸ್ವಾಸಿಃ ಇದನ್ನು 'ಸ್ವಸ್ಯ ಅಸಿಃ ಎಂದಾಗಲಿ 'ಸ್ವಶ್ಚ ಅಸೌ ಅಸಿಶ್ಚ' (ವಿ.ಪೂ.ಕ.) ಎಂದಾಗಲಿ ವಿಗ್ರಹಬಿಡಿಸಬಹುದು; ಸ್ವಶಬ್ದವು ಇಲ್ಲಿ ಪೂರ್ವಶಬ್ದದಂತೆ ನಡೆಯುವದು. ಸ್ವ ಎಂಬ ಮಾತಿಗೆ ತಾನು, ತನ್ನದು, ಜ್ಞಾತಿ, ಧನ-ಎಂಬ ನಾಲ್ಕು ಅರ್ಥಗಳಿರುವವು. ಜ್ಞಾತಿ, ತಾನು-ಎಂಬರ್ಥದಲ್ಲಿ ಇದು ಪುಲ್ಲಿಂಗ; ತನ್ನ ಎಂಬ ಅರ್ಥದಲ್ಲಿ ಇದು ವಿಶೇಷಣವಾದ್ದರಿಂದ ಮೂರು ಲಿಂಗವೂ ಆಗುವದು; ಹಣವೆಂಬ ಅರ್ಥದಲ್ಲಿ ಪುನ್ನಪುಂಸಕಲಿಂಗ. ೨.ಕಾಮಂ-ಅವ್ಯಯ. ೩.ಮೇ-ಅಸ್ಮದ್‌ಶಬ್ದ, ಷಷ್ಠೀವಿಭಕ್ತಿ. ೪.ಮೂರ್ಧಾ-ನಕಾರಾಂತ ಪುಲ್ಲಿಂಗ. ೫.ರಕ್ಷಸಾ ಸಕಾರಾಂತ ನಪುಂಸಕ.

ವಿಚಾರ. ೧.ರಾವಣನು ಗೋಕರ್ಣದಲ್ಲಿ ಹತ್ತು ಸಾವಿರ ವರ್ಷಗಳು ಪಂಚಾಗ್ನಿಗಳ ನಡುವೆ ಇದ್ದುಕೊಂಡು ಉಗ್ರತಪಸ್ಸನ್ನು ಮಾಡಿ ತನ್ನ ತಲೆಯನ್ನು

ಸಾವಿರ ವರ್ಷಕ್ಕೊಂದೊಂದಾಗಿ ಹೋಮ ಮಾಡುತ್ತಬಂದನು. ಹತ್ತನೆಯ ತಲೆಯನ್ನು ಹೋಮಕ್ಕೆಂದು ಕತ್ತರಿಸಲು ಯತ್ನಿಸುವದಕ್ಕೆ ಹೋಗುವ ಹೊತ್ತಿಗೆ ಬ್ರಹ್ಮನು ಪ್ರಸನ್ನನಾಗಿ ಅವನಿಗೆ ಕೇಳಿದ ವರವನ್ನು ಕೊಟ್ಟನು- ಎಂದು ರಾಮಾಯಣದ ಉತ್ತರ ಕಾಂಡದಲ್ಲಿದೆ. ಈಶ್ವರನನ್ನು ಕುರಿತು ತಪಸ್ಸುಮಾಡಿದನೆಂದು ಮಲ್ಲಿನಾಥವ್ಯಾಖ್ಯಾನದಲ್ಲಿದೆ. ಇದೂ ಬೇರೆ ಪುರಾಣದಲ್ಲಿರಬಹುದು; ಅದರೆ ಮುಂದೆ ೪೨, ೪೩ರಲ್ಲಿ ಬ್ರಹ್ಮನ ವಿಷಯವನ್ನೇ ತಿಳಿಸಿದೆ. ೨.ರಾವಣನು ತನ್ನ ತಲೆಯನ್ನು ತಾನೇ ಕಡಿದುಕೊಳ್ಳದೆ ನನ್ನ ಚಕ್ರಕ್ಕಾಗಿ ಅದನ್ನು ಮೀಸಲು ಕಟ್ಟಿರುತ್ತಾನೆಂದು ಇಲ್ಲಿ ವಿಷ್ಣುವು ಹೇಳಿರುವನು. ಇದರಿಂದ 'ನಾನು ಅವನನ್ನು ನಿಶ್ಚಯವಾಗಿ ಕೊಂದೇ ಕೊಲ್ಲುವೆನು'- ಎಂದು ಹೇಳಿದಂತೆ ಆಯಿತು.

ಸ್ರಷ್ಟುರ್ವರಾತಿಸರ್ಗಾತ್ತು ಮಯಾ ತಸ್ಯ ದುರಾತ್ಮನಃ ।
ಅತ್ಯಾರೂಢಂ ರಿಪೋಃ ಸೋಢಂ ಚನ್ದನೇನೇವ ಭೋಗಿನಃ ॥೪೨॥

ಅನ್ವಯ. [ಸ್ರಷ್ಟುಃ ವರಾತಿಸರ್ಗಾತ್ ತು ಮಯಾ ತಸ್ಯ ದುರಾತ್ಮನಃ ರಿಪೋಃ ಅತ್ಯಾರೂಢಂ ಭೋಗಿನಃ(ಅತ್ಯಾರೂಢಂ) ಚನ್ದನೇನ ಇವ ಸೋಢಮ್.]

ಅರ್ಥ. ತು-ಆದರೆ ಸ್ರಷ್ಟುಃ-ಬ್ರಹ್ಮನ ವರಾತಿಸರ್ಗಾತ್-ವರದಾನ(ಕಾರಣ) ದಿಂದ ಮಯಾ-ನನ್ನಿಂದ ತಸ್ಯ-ಆ ದುರಾತ್ಮನಃ-ದುಷ್ಟಸ್ವಭಾವದವನಾದ ರಿಪೋಃ-ಶತ್ರುವಿನ ಅತ್ಯಾರೂಢಂ-ಮಿಗಿಲಾದ ಏರಿಕೆಯು ಭೋಗಿನಃ - ಸರ್ಪದ (ಅತ್ಯಾರೂಢಂ-ಹೆಚ್ಚಿನ ಏರಿಕೆಯು) ಚಂದನೇನ ಇವ- ಗಂಧದಮರದಿಂದ ಹೇಗೋ ಹಾಗೆ ಸೋಢಂ-ಸಹಿಸಿಕೊಳ್ಳಲ್ಪಟ್ಟಿತು.

ತಾತ್ಪರ್ಯ. ಬ್ರಹ್ಮನ ಸೃಷ್ಟಿಯ ಕಟ್ಟಲೆಯನ್ನು ಅನುಸರಿಸಿಕೊಂಡು ಚಂದನ ಮರವು ತನ್ನ ಮೇಲೆ ಹತ್ತಿದ ಹಾವಿನ ಹಾವಳಿಯನ್ನು ತಡೆದುಕೊಳ್ಳುವಂತೆ ನಾನು ಆ ದುರಾತ್ಮನಾದ ರಾವಣನ ಹಾವಳಿಯನ್ನೆಲ್ಲ ಬ್ರಹ್ಮನು ಅವನಿಗೆ ವರವನ್ನು ಕೊಟ್ಟಿದ್ದಾನೆಂಬುದರ ಮೇಲೆ ತಡೆದುಕೊಂಡೆನು.

ವಿಗ್ರಹವಾಕ್ಯಗಳು. ೧.ಸೃಜತೀತಿ-ಸ್ರಷ್ಟಾ (ಕೃ.ವೃ); ತಸ್ಯ-ಸ್ರಷ್ಟುಃ. ೨.ಅತಿಸೃಜ್ಯತ ಇತಿ-ಅತಿಸರ್ಗಃ (ಕೃ.ವೃ.); ವರಸ್ಯ ಅತಿಸರ್ಗಃ-ವರಾತಿಸರ್ಗಃ (ಷ.ತ.); ತಸ್ಮಾತ್-ವರಾತಿಸರ್ಗಾತ್ ೩.ಅತ್ಯಾರುಹ್ಯತೇ ಇತಿ-ಅತ್ಯಾರೂಢಮ್ (ಕೃ.ವೃ.) ೩. ದುಷ್ಟಃ ಆತ್ಮಾ ಯಸ್ಯ ಸಃ-ದುರಾತ್ಮಾ (ಷ.ಬ.); ತಸ್ಯ-ದುರಾತ್ಮನಃ.

ವ್ಯಾಕರಣವಿಶೇಷ. ೧.ಸ್ರಷ್ಟುಃ-ಋಕಾರಾಂತ ಪುಲ್ಲಿಂಗ, ಷಷ್ಠೀವಿಭಕ್ತಿ ೨.ಅತ್ಯಾರೂಢಂ-ರುಹ್

ಧಾತುವಿಗೆ ಭಾವಾರ್ಥದಲ್ಲಿ ಕ್ತಪ್ರತ್ಯಯ ಬಂದಿದೆ; ಅಕಾರಾಂತ ನಪುಂಸಕ. ೩.ಸೋಢಂ-ಸಹ್ ಧಾತುವಿನ ಭೂತಕೃದಂತ. ಸಂಸ್ಕೃತದಲ್ಲಿ ಭೂತಕೃದಂತವನ್ನು ಪೂರ್ಣಕ್ರಿಯಾಪದದ ಅರ್ಥದಲ್ಲಿ ಉಪಯೋಗಿಸುವ ರೂಢಿಯುಂಟು; ಸೋಢಂ=ಸೋಢಂ ಆಸೀತ್ (ಸಹಿಸಲ್ಪಟ್ಟದ್ದಾಯಿತು). ೪. ವರಾತಿಸರ್ಗಾತ್ತು- 'ತು' ಎಂಬ ಅವ್ಯಯವನ್ನು ವಾಕ್ಯದ ಆರಂಭದಲ್ಲಿ ಉಪಯೋಗಿಸಕೂಡದು.

ಧಾತಾರಂ ತಪಸಾ ಪ್ರೀತಂ ಯಯಾಚೇ ಸ ಹಿ ರಾಕ್ಷಸಃ ।
ದೈವಾತ್ಸರ್ಗಾದವಧ್ಯತ್ವಂ ಮರ್ತ್ಯೇಷ್ವಾಸ್ಥಾಪರಾಙ್ಮುಖಃ ॥೪೩॥

ಅನ್ವಯ. [ಸಃ ರಾಕ್ಷಸಃ ತಪಸಾ ಪ್ರೀತಂ ಧಾತಾರಂ ಮರ್ತ್ಯೇಷು ಆಸ್ಥಾ ಪರಾಙ್ಮುಖಃ ದೈವಾತ್ ಸರ್ಗಾತ್ ಅವಧ್ಯತ್ವಂ ಯಯಾಚೇ ಹಿ.]

ಅರ್ಥ. ಸಃ-ಆ ರಾಕ್ಷಸಃ-ರಾಕ್ಷಸನು ತಪಸಾ- ತಪಸ್ಸಿನಿಂದ ಪ್ರೀತಂ-ಸಂತುಷ್ಟ ನಾದ ಧಾತಾರಂ- ಬ್ರಹ್ಮನನ್ನು ಮರ್ತ್ಯೇಷು-ಮನುಷ್ಯರಲ್ಲಿ ಆಸ್ಥಾಪರಾಙ್ಮುಖಃ - (ಆಸ್ಥಾ-ಆದರದ ದೆಸೆಯಿಂದ ಪರಾಙ್ಮುಖಃ-ಹಿಂತಿರುಗಿದವನಾಗಿ) ಆದರವಿಲ್ಲದೆ ದೈವಾತ್-ದೇವಸಂಬಂಧವಾದ ಸರ್ಗಾತ್-ಸೃಷ್ಟಿಯಿಂದ ಅವಧ್ಯತ್ವಂ-ಕೊಲ್ಲಲ್ಪಡ ದವನಾಗೋಣವನ್ನು ಯಯಾಚೇ ಹಿ-ಕೇಳಿಕೊಂಡನಷ್ಟೆ?

ವ್ಯಾಕರಣವಿಶೇಷ. ೧.ದೇವಾನಾಂ ಅಯಂ-ದೈವಃ (ತ.ವೃ.). ೨.ಹನ್ತುಂ ಯೋಗ್ಯಃ-ವಧ್ಯಃ (ಕೃ.ವೃ.); ನ ವಧ್ಯಃ-ಅವಧ್ಯಃ (ನ.ತ.) ಅವಧ್ಯಸ್ಯ ಭಾವಃ-ಅವಧ್ಯತ್ವಂ (ತ.ವೃ.). ೩.ಪರಾ ಅಞ್ಚತೀತಿ-ಪರಾಙ್ (ಕೃ.ವೃ); ಪರಾಙ್ ಮುಖಂ ಯಸ್ಯ ಸಃ-ಪರಾಙ್ಮುಖಃ (ಷ.ಬ.); ಆಸ್ಥಾಯಾಂ ಪರಾಙ್ಮುಖಃ-ಅಸ್ಥಾಪರಾಙ್ಮುಖಃ (ಸ.ತ.).

ವ್ಯಾಕರಣವಿಶೇಷ. ೧.ಯಯಾಚೇ (೨೪) ಟುಯಾಚೃ ಯಾಚ್ಞಾಯಾಂ (ಯಾಚ್-ಬೇಡು) ಎಂಬ ೧ನೆಯ ಗಣದ ಧಾತುವಿನ ಲಿಟ್, ಆ.ಪ್ರ.ಏ. ೨.ಧಾತಾರಂ ಅವಧ್ಯತ್ವಂ ಯಯಾಚೇ-ಎಂದು ಯಾಚ್ ಧಾತುವಿಗೆ ಎರಡು ಕರ್ಮಗಳು ಬಂದಿವೆ. 'ಧಾತಾರಂ' ಇದು ಗೌಣಕರ್ಮ (indirect object); 'ಅವಧ್ಯತ್ವಂ' ಎಂಬುದು ಮುಖ್ಯಕರ್ಮ (direct object). ಈ ಶ್ಲೋಕದಲ್ಲಿರುವವುಗಳ ಅರ್ಥವುಳ್ಳ ಧಾತುಗಳಿಗೆ ಎರಡೆರಡು ಕರ್ಮಗಳು ಬರುತ್ತವೆ:- ದುಹ್ ಯಾಚ್ ಪಚ್ ದಣ್ಡ್ ರುಧಿ ಪ್ರಚ್ಛಿ ಚಿ ಬ್ರೂ ಶಾಸು ಜಿ ಮಥ್ ಮುಷಾಮ್ । ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀ ಹೃ ಕೃಷ್ ವಹಾಮ್ ॥ ಇವುಗಳನ್ನು ಕರ್ಮಣಿಪ್ರಯೋಗದಲ್ಲಿ (passive) ಬರೆಯುವಾಗ ತಥಾ ಎಂಬ ಮಾತಿನ ಹಿಂದೆ ಬಂದಿರುವ ಧಾತುಗಳ ಗೌಣಕರ್ಮವನ್ನೂ ಮಿಕ್ಕ ನಾಲ್ಕು ಧಾತುಗಳ ಮುಖ್ಯಕರ್ಮವನ್ನೂ ಪ್ರಥಮಾವಿಭಕ್ತಿಯಲ್ಲಿಡಬೇಕು. ಉದಾಹರಣೆ:" ಧಾತಾರಂ ಅವಧ್ಯತ್ವಂ ಯಯಾಚೇ-ಕರ್ತರಿ; 'ಧಾತಾ ಅವಧ್ಯತ್ವಂ ಯಯಾಚೇ'- ಕರ್ಮಣಿ. 'ಗ್ರಾಮಂ ಅಜಾಂ ನಯತಿ' ಕರ್ತರಿ; 'ಅಜಾ ಗ್ರಾಮಂ ನೀಯತೇ' ಕರ್ಮಣಿ.

ವಿಚಾರ. ರಾವಣನು ಮನುಷ್ಯರಿಂದ ತನಗೆ ಯಾವ ಅಪಾಯವೂ ಆಗ

ಲಾರದೆಂಬ ಒಣನಂಬಿಕೆಯಿಂದ ಅವರನ್ನು ಅನಾದರಮಾಡಿ ದೇವಸೃಷ್ಟಿಯಲ್ಲಿ ಹುಟ್ಟಿರುವವರಿಂದ ತನಗೆ ಮರಣವಾಗದ ಹಾಗೆ ಬ್ರಹ್ಮನಿಂದ ವರವನ್ನು ಪಡೆದು ಕೊಂಡಿದ್ದನು. ಆದ್ದರಿಂದ ಅವನಿಗೆ ಮನುಷ್ಯರಿಂದಲೆ ಮರಣವಾಗಬೇಕಾ ಯಿತು. ೨.ದೈವಸೃಷ್ಟಿಯಿಂದ ಹುಟ್ಟಿರುವವರು ಎಂಟು ಬಗೆ:-(೧) ವಿಬುಧರು ಎಂದರೆ ದೇವತೆಗಳು (೨) ಪಿತೃಗಳು (೩) ಅಸುರರು (೪) ಗಂಧರ್ವರು, ಅಪ್ಸರರು (೫) ಯಕ್ಷರು, ರಾಕ್ಷಸರು (೬) ಭೂತಪ್ರೇತಪಿಶಾಚಾದಿಗಳು (೭) ಸಿದ್ಧಚಾರಣವಿದ್ಯಾಧರರು (೮)ಕಿನ್ನರರೇ-ಮುಂತಾದವರು. ಹೀಗೆಂದು ಭಾಗ ವತದಲ್ಲಿದೆ.

ಸೋಽಹಂ ದಾಶರಥಿರ್ಭೂತ್ವಾ ರಣಭೂಮೇರ್ಬಲಿಕ್ಷಮಮ್ ।
ಕರಿಷ್ಯಾಮಿ ಶರೈಸ್ತೀಕ್ಷ್ಣೈಸ್ತಚ್ಛಿರಃಕಮಲೋಚ್ಚಯಮ್ ॥೪೪॥

ಅನ್ವಯ. [ಸಃ ಅಹಂ ದಾಶರಥಿಃ ಭೂತ್ವಾ ತೀಕ್ಷ್ಣೈಃ ಶರೈಃ ತಚ್ಛಿರಃಕಮ ಲೋಚ್ಚಯಂ ರಣಭೂಮೇಃ ಬಲಿಕ್ಷಮಂ ಕರಿಷ್ಯಾಮಿ. ]

ಅರ್ಥ. ಸೋಽಹಂ-ಆ ನಾನು ದಾಶರಥಿಃ-ದಶರಥನ ಮಗನು ಭೂತ್ವಾ-ಆಗಿ ತೀಕ್ಷ್ಣೈಃ-ಹರಿತವಾದ ಶರೈಃ-ಬಾಣಗಳಿಂದ ತಚ್ಛಿರಃಕಮಲೋಚ್ಚಯಂ-(ತತ್ - ಅವನ ಶಿರಃ-ತಲೆಗಳೆಂಬ ಕಮಲ-ತಾವರೆಗಳ ಉಚ್ಚಯಂ-ರಾಶಿಯನ್ನು) ಆ ರಾವಣನ ತಲೆಗಳೆಂಬ ತಾವರೆಹೂಗಳ ರಾಶಿಯನ್ನು ರಣಭೂಮೇಃ-ಯುದ್ಧಭೂ ಮಿಯ ಬಲಿಕ್ಷಮಂ-ಪೂಜೆಗೆ ಯೋಗ್ಯವಾದದ್ದನ್ನಾಗಿ ಕರಿಷ್ಯಾಮಿ-ಮಾಡುವೆನು.

ವಿಗ್ರಹವಾಕ್ಯಗಳು. ೧.ದಶರಥಸ್ಯ ಅಪತ್ಯಂ ಪುಮಾನ್-ದಾಶರಥಿಃ (ತ.ವೃ.). ೨.ರಣಸ್ಯ ಭೂಮಿಃ-ರಣಭೂಮಿಃ (ಷ.ತ.); ತಸ್ಯಾಃ-ರಣಭೂಮೇಃ. ೩.ಬಲಿಂ ಕ್ಷಮತ ಇತಿ-ಬಲಿಕ್ಷಮಃ (ಉಪ.ಸ.); ತಂ-ಬಲಿಕ್ಷಮಮ್. ೪.ತಸ್ಯ ಶಿರಾಂಸಿ-ತಚ್ಛಿರಾಂಸಿ (ಷ.ತ.); ತಚ್ಛಿರಾಂಸಿ ಏವ ಕಮಲಾನಿ-ತಚ್ಛಿರಃಕಮಲಾನಿ (ಅ.ಪೂ.ಕ.); ತೇಷಾಂ-ತಚ್ಛಿರಃಕಮಲಾನಾಂ; ತಚ್ಛಿರಃಕಮಲಾನಾಂ ಉಚ್ಚಯಃ - ತಚ್ಛಿರಃಕಮಲೋಚ್ಚಯಃ (ಷ.ತ); ತಂ-ತಚ್ಛಿರಃಕಮಲೋಚ್ಚಯಮ್.

ವ್ಯಾಕರಣವಿಶೇಷ. ೧.ತಚ್ಛಿರಃಕಮಲೋಚ್ಚಯಂ ಬಲಿಕ್ಷಮಂ ಕರಿಷ್ಯಾಮಿ-ಮಾಡು, ಹೆಸರಿಡು, ಕರೆ, ಯೋಚಿಸು, ಮುಂತಾದ ಅರ್ಥದ ಧಾತುಗಳಿಗೆ ಕರ್ಮವೇ ಅಲ್ಲದೆ, ಕ್ರಿಯೆಯರ್ಥವನ್ನು ಪೂರಣಮಾಡುವ ಮತ್ತೊಂದು ಕರ್ಮವಿರುತ್ತದೆ. (objective complement). ಇಲ್ಲಿ 'ಬಲಿಕ್ಷಮಂ' ಎಂಬುದು ಹೀಗೆ ಉಪಯೋಗಿಸಿದ ಮಾತು. ಕನ್ನಡ, ಇಂಗ್ಲೀಷು ಮುಂತಾದ ಭಾಷೆಗಳಂತೆಯೆ ಕರ್ತೃವಿಗೆ ಸಂಬಂಧಪಟ್ಟ ಪೂರಣವೂ (subjective complement) ಸಂಸ್ಕೃತದಲ್ಲಿ ಉಂಟು. ಉದಾ: 'ಅಹಂ

ದಾಶರಥಿರ್ಭವಿಷ್ಯಾಮಿ'- ಇಲ್ಲಿ ದಾಶರಥಿಃ ಎಂದರ್ಥವು 'ಅಹಂ' ಎಂಬ ಕರ್ತೃವಿಗೆ ಸಂಬಂಧಪಟ್ಟು ಕ್ರಿಯಾಪದದ ಅರ್ಥವನ್ನು ಪೂರಣಮಾಡುತ್ತದೆ. ೨. 'ಸೋಽಹಂ-' ಎಂದರೆ 'ಅಂಥ ನಾನು', ಇದೆಲ್ಲವನ್ನೂ ಬಲ್ಲ ನಾನು ಎಂದರ್ಥ. ಹೀಗೆಯೆ 'ಸ ತ್ವಂ' ಎಂದು ಮುಂತಾಗಿ ಸಂಸ್ಕೃತದಲ್ಲಿ ಪ್ರಯೋಗಮಾಡುವರು. ೩.ಕರಿಷ್ಯಾಮಿ - (೨೯) ಡುಕೃಞ್ ಕರಣೇ (ಕೃ-ಮಾಡು) ಎಂಬ ಎಂಟನೆಯ ಗಣದ ಧಾತುವಿನ ಲೃಟ್ ಪ. ಉ. ಏ.

ವಿಚಾರ. ಪೂಜೆಗೆ ಹೂಗಳು ಬೇಕಾಗಿರುವದರಿಂದ ರಾವಣನ ತಲೆಗಳನ್ನು ಹೂಗಳೆಂದು ವರ್ಣಿಸಿರುತ್ತದೆ.

ಅಚಿರಾದ್ಯಜ್ವಭಿರ್ಭಾಗಂ ಕಲ್ಪಿತಂ ವಿಧಿವತ್ಪುನಃ ।
ಮಾಯಾವಿಭಿರನಾಲೀಢಮಾದಾಸ್ಯಧ್ವೇ ನಿಶಾಚರೈಃ ॥೪೫॥

ಅನ್ವಯ. [ಯಜ್ವಭಿಃ ವಿಧಿವತ್ ಕಲ್ಪಿತಂ ಭಾಗಂ ಮಾಯಾವಿಭಿಃ ನಿಶಾಚರೈಃ ಅನಾಲೀಢಂ ಅಚಿರಾತ್ ಪುನಃ ಆದಾಸ್ಯಧ್ವೇ]

ಅರ್ಥ. ಯಜ್ವಭಿಃ-ಯಾಗಮಾಡುವವರಿಂದ ವಿಧಿವತ್-ಶಾಸ್ತ್ರದಲ್ಲಿ ಹೇಳಿರುವಂತೆ ಕಲ್ಪಿತಂ-ಏರ್ಪಡಿಸಲ್ಪಟ್ಟ ಭಾಗಂ-ಅಂಶವನ್ನು ಮಾಯಾವಿಭಿಃ-ಮಾಯಾವಿಗಳಾದ ನಿಶಾಚರೈಃ-ರಾಕ್ಷಸರಿಂದ ಅನಾಲೀಢಂ-ನೆಕ್ಕಲ್ಪಡದೆ ಇರುವಂತೆ ಅಚಿರಾತ್ - ಬೇಗ ಪುನಃ-ಮತ್ತೆ ಆದಾಸ್ಯಧ್ವೇ-ತೆಗೆದುಕೊಳ್ಳುವಿರಿ.

ತಾತ್ಪರ್ಯ. ಶಾಸ್ತ್ರೋಕ್ತವಾಗಿ ಜನರು ಯಾಗಮಾಡಿ ನಿಮಗೆ ಕೊಟ್ಟ ಹವಿರ್ಭಾಗವನ್ನು ಮಾಯಾವಿಗಳಾದ ರಾಕ್ಷಸರು ಈಗಿನಂತೆ ಸವಿಯದೆ ಇರುವ ಹಾಗೂ ಮತ್ತೆ ನಿಮನಿಮಗೇ ದೊರೆಯುವ ಹಾಗೂ ಬೇಗ ಮಾಡಿಕೊಡುವೆನು.

ವಿಗ್ರಹವಾಕ್ಯಗಳು. ೧. ಇಷ್ಟವನ್ತೋ-ಯಜ್ವಾನಃ (ಕೃ. ವೃ.); ತೈಃ-ಯಜ್ವಭಿಃ ೨. ವಿಧಿಂ ಅರ್ಹತಿ-ವಿಧಿವತ್ (ತ.ವೃ.). ೩. ಮಾಯಾ ಏಷಾಂ ಅಸ್ತೀತಿ- ಮಾಯಾವಿನಃ (ತ. ವೃ.); ತೈಃ-ಮಾಯಾವಿಭಿಃ. ೪. ನಿಶಾಯಾಂ ಚರನ್ತೀತಿ- ನಿಶಾಚರಾಃ (ಉಪ. ಸ.); ತೈಃ-ನಿಶಾಚರೈಃ.

ವ್ಯಾಕರಣವಿಶೇಷ. ೧.ಯಜ್ವಭಿಃ- ನಕಾರಾನ್ತ ಪುಲ್ಲಿಂಗ-ಶಾಸ್ತ್ರದಲ್ಲಿ ಹೇಳಿರುವಂತೆ ಯಜ್ಞ ಮಾಡಿದವನು ಎಂದು ಭೂತಾರ್ಥದಲ್ಲಿ ಙ್ವನಿಪ್ (ವನ್) ಪ್ರತ್ಯಯವು ಬಂದಿದೆ. ೨.ವಿಧಿವತ್-ಅವ್ಯಯ. ೩.ಮಾಯಾವಿಭಿಃ-ಅಸ್-ಎಂಬುದು ಕೊನೆಯಲ್ಲಿರುವ ಸಕಾರಾನ್ತ ಶಬ್ದಗಳಿಗೂ ಮಾಯಾ ಮೇಧಾ ಸ್ರಜ್-ಈ ಶಬ್ದಗಳಿಗೂ ಉಳ್ಳ ಎಂಬರ್ಥದಲ್ಲಿ ವಿನಿ(ವಿನ್) ಪ್ರತ್ಯಯವು ಬರುವದು. ೪.ಆದಾಸ್ಯಧ್ವೇ (೩೦)-ಡುದಾಞ್ ದಾನೇ (ದಾ-ಕೊಡು) ಎಂಬ ೩ನೆಯ ಗಣದ ಧಾತುವಿನ ಲೃಟ್, ಆ. ಮ. ಬ.

ವೈಮಾನಿಕಾಃ ಪುಣ್ಯಕೃತಸ್ತ್ಯಜನ್ತು ಮರುತಾಂ ಪಥಿ ।
ಪುಷ್ಪಕಾಲೋಕಸಂಕ್ಷೋಭಂ ಮೇಘಾವರಣತತ್ಪರಾಃ ॥೪೬॥

ಅನ್ವಯ. [ಮರುತಾಂ ಪಥಿ ವೈಮಾನಿಕಾಃ ಮೇಘಾವರಣತತ್ಪರಾಃ ಪುಣ್ಯಕೃತಃ ಪುಷ್ಪಕಾಲೋಕಸಂಕ್ಷೋಭಂ ತ್ಯಜನ್ತು. ]

ಅರ್ಥ. ಮರುತಾಂ-ದೇವತೆಗಳ ಪಥಿ-ದಾರಿಯಲ್ಲಿ ವೈಮಾನಿಕಾಃ-ವಿಮಾನದಲ್ಲಿ ಸಂಚಾರಮಾಡುವವರಾದ ಮೇಘಾವರಣತತ್ಪರಾಃ-(ಮೇಘ-ಮೋಡಗಳಲ್ಲಿ ಆವರಣ-ಮುಚ್ಚಿಕೊಳ್ಳುವಿಕೆಯಲ್ಲಿ ತತ್ಪರಾಃ-ಆಸಕ್ತಿಯುಳ್ಳ) ಮೋಡಗಳಲ್ಲಿ ಅವಿತುಕೊಳ್ಳುತ್ತಿರುವವರಾದ ಪುಣ್ಯಕೃತಃ-ಪುಣ್ಯವಂತರು ಪುಷ್ಪಕಾಲೋಕಸಂಕ್ಷೋಭಂ - (ಪುಷ್ಪಕ-ಪುಷ್ಪಕವಿಮಾನದ ಆಲೋಕ-ನೋಡುವಿಕೆಯಿಂದಾದ ಸಂಕ್ಷೋಭಂ-ಬೆದರಿ ಬೀಳುವಿಕೆಯನ್ನು) ಪುಷ್ಪಕವನ್ನು ನೋಡಿ ಬೆಚ್ಚಿ ಬೀಳುವದನ್ನು ತ್ಯಜನ್ತು-ಬಿಡಲಿ.

ತಾತ್ಪರ್ಯ. ಪುಣ್ಯವನ್ನು ಮಾಡಿದ್ದರ ಫಲವಾಗಿ ವಿಮಾನಸಂಚಾರವನ್ನು ಪಡೆದ ದೇವತಾವಿಶೇಷಗಳು ಆಕಾಶದಲ್ಲಿ ಸಂಚರಿಸುತ್ತಿರುವಾಗ ದಾರಿಯಲ್ಲಿ ರಾವಣನ ವಿಮಾನವಾದ ಪುಷ್ಪಕವನ್ನು ಕಂಡರೆ ಬೆಚ್ಚಿ ಮೋಡಗಳಲ್ಲಿ ಅವಿತುಕೊಳ್ಳುತ್ತಿರುವರು. ನಾನು ಅವತರಿಸಿ ರಾವಣನನ್ನು ಕೊಂದ ಮೇಲೆ ಅಂಥ ಭಯವೇನೂ ಇರುವದಿಲ್ಲ.

ವಿಗ್ರಹವಾಕ್ಯಗಳು. ೧.ವಿಮಾನೇಷು ಚರನ್ತೀತಿ-ವೈಮಾನಿಕಾಃ (ತ.ವೃ.). ೨. ಪುಣ್ಯಂ ಕೃತವನ್ತಃ-ಪುಣ್ಯಕೃತಃ (ಕೃ.ವೃ.). ೩.ಪುಷ್ಪಕಸ್ಯ ಆಲೋಕಃ-ಪುಷ್ಪಕಾಲೋಕಃ (ಷ.ತ.); ತೇನ-ಪುಷ್ಪಕಾಲೋಕೇನ; ಪುಷ್ಪಕಾಲೋಕೇನ ಸಂಕ್ಷೋಭಃ - ಪುಷ್ಪಕಾಲೋಕಸಂಕ್ಷೋಭಃ (ತೃ.ತ.); ತಂ-ಪುಷ್ಪಕಾಲೋಕಸಂಕ್ಷೋಭಮ್. ೪.ಮೇಘೇಷು ಆವರಣಂ-ಮೇಘಾವರಣಂ (ಸ.ತ.); ತಸ್ಮಿನ್-ಮೇಘಾವರಣೇ; ತತ್ ಪರಂ ಯೇಷಾಂ ತೇ-ತತ್ಪರಾಃ (ಷ.ಬ.); ಮೇಘಾವರಣೇ ತತ್ಪರಾಃ-ಮೇಘಾವರಣತತ್ಪರಾಃ (ಸ.ತ.).

ವ್ಯಾಕರಣವಿಶೇಷ. ೧.ವೈಮಾನಿಕಾಃ- ಇದರಲ್ಲಿ ಕುಳಿತು ಸಂಚಾರಮಾಡುವವ ಎಂಬರ್ಥದಲ್ಲಿ ಠಕ್ (ಇಕ) ಪ್ರತ್ಯಯವು ಬಂದಿದೆ. ೨.ಪುಣ್ಯಕೃತಃ-ಪುಣ್ಯವನ್ನು ಮಾಡಿದವರು ಎಂಬರ್ಥದಲ್ಲಿ ಕ್ವಿಪ್‌ಪ್ರತ್ಯಯವು ಬಂದಿದೆ. ಸು, ಕರ್ಮ, ಪಾಪ, ಮಂತ್ರ, ಪುಣ್ಯ - ಈ ಮಾತುಗಳಿಗೆ ಇದನ್ನು ಮಾಡಿದವನು ಎಂಬ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯವು ಬರುತ್ತದೆ. ವರ್ತಮಾನ ಅಥವಾ ಭವಿಷ್ಯತ್ಕಾಲವನ್ನು ತಿಳಿಸುವದಕ್ಕೆ ಈ ಪ್ರತ್ಯಯವು ಬರುವದಿಲ್ಲವಾದ್ದರಿಂದ 'ಪುಣ್ಯಂ ಕುರ್ವನ್ತೀತಿ' ಎಂದಾಗಲಿ 'ಪುಣ್ಯಂ ಕರಿಷ್ಯನ್ತೀತಿ' ಎಂದಾಗಲಿ ವಿಗ್ರಹವನ್ನು ಬಿಡಿಸಕೂಡದು ೩.ಮರುತಾಂ-ತಕಾರಾನ್ತ

ಪುಲ್ಲಿಂಗ ೪. ಪಥಿ-ಪಥಿನ್‌ಶಬ್ದ. ನ. ಪು. ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ; ಮರುತಾಂ ಪಥಿ-ಎಂಬ ಮಾತಿಗೆ ದೇವತೆಗಳ ಮಾರ್ಗದಲ್ಲಿ ಎಂದು ಅಕ್ಷರಾರ್ಥ: ಆಕಾಶದಲ್ಲಿ ಎಂಬುದು ತಾತ್ಪರ್ಯ.

ಮೋಕ್ಷ್ಯಧ್ವೇ ಸ್ವರ್ಗಬನ್ದೀನಾಂ ವೇಣೀಬನ್ಧಾನದೂಷಿತಾನ್ ।
ಶಾಪಯನ್ತ್ರಿತಪೌಲಸ್ತ್ಯಬಲಾತ್ಕಾರಕಚಗ್ರಹೈಃ ॥೪೭॥

ಅನ್ವಯ. [ಶಾಪಯನ್ತ್ರಿತಪೌಲಸ್ತ್ಯಬಲಾತ್ಕಾರಕಚಗ್ರಹೈಃ ಅದೂಷಿತಾನ್ ಸ್ವರ್ಗಬನ್ದೀನಾಂ ವೇಣೀಬನ್ಧಾನ್ ಮೋಕ್ಷ್ಯಧ್ವೇ. ]

ಅರ್ಥ. ಶಾಪಯನ್ತ್ರಿತಪೌಲಸ್ತ್ಯಬಲಾತ್ಕಾರಕಚಗ್ರಹೈಃ-(ಶಾಪ-ಶಾಪದಿಂದ ಯನ್ತ್ರಿತ-ತಡೆಯಲ್ಪಟ್ಟ ಪೌಲಸ್ತ್ಯ-ಪುಲಸ್ತ್ಯ ವಂಶದಲ್ಲಿ ಹುಟ್ಟಿದ ರಾವಣನ ಬಲಾತ್ಕಾರ-ಬಲಾತ್ಕಾರದಿಂದ ಕಚಗ್ರಹೈಃ-ಕೂದಲುಗಳ ಹಿಡಿತಗಳಿಂದ) ಶಾಪಕ್ಕೆ ಕಟ್ಟುಬಿದ್ದಿರುವ ರಾವಣನು ಕೂದಲುಹಿಡಿದು ಎಳೆಯುವದರಿಂದ ಅದೂಷಿತಾನ್ - ಮೈಲಿಗೆಯಾಗದೆ ಇರುವ ಸ್ವರ್ಗಬನ್ದೀನಾಂ-ಸ್ವರ್ಗದ ಸೆರೆಯಾಳುಗಳಾದ ಸ್ತ್ರೀಯರ ವೇಣೀಬನ್ಧಾನ್-ಜಡೆಯ ಗಂಟುಗಳನ್ನು ಮೋಕ್ಷ್ಯಧ್ವೇ- ಬಿಡಿಸುವಿರಿ.

ತಾತ್ಪರ್ಯ. ರಾವಣನು ಸ್ವರ್ಗಸ್ತ್ರೀಯರನ್ನು ಸೆರೆಹಿಡಿದುಕೊಂಡು ಹೋಗಿರುವನಾದರೂ ನಲಕೂಬರನ ಶಾಪದ ಭಯದಿಂದ ಅವರನ್ನು ಕಲಂಕಗೊಳಿಸದೆ ಇರುತ್ತಾನಷ್ಟೆ; ಈಗ ಅವರು ದುಃಖದಿಂದ ತಲೆಯನ್ನು ಬಾಚಿಕೊಳ್ಳದೆ ಗಂಟುಹಾಕಿಕೊಂಡಿರುವ ಜಡೆಯನ್ನು ನೀವು ಬಿಚ್ಚಿಹಾಕುವಂತೆ ಅನುಕೂಲಪಡಿಸಿಕೊಡುವೆನು.

ವಿಗ್ರಹವಾಕ್ಯಗಳು. ೧.ಸ್ವರ್ಗಸ್ಯ ಬನ್ದ್ಯಃ-ಸ್ವರ್ಗಬನ್ದ್ಯಃ (ಷ.ತ.); ತಾಸಾಂ - ಸ್ವರ್ಗಬನ್ದೀನಾಮ್ . ೨. ವೇಣೀನಾಂ ಬನ್ಧಾಃ-(ಷ.ತ.); ತಾನ್-ವೇಣೀಬನ್ಧಾನ್ ೩.ನ ದೂಷಿತಾಃ-ಅದೂಷಿತಾಃ (ನ.ತ.); ತಾನ್-ಅದೂಷಿತಾನ್. ೪.ಶಾಪೇನ ಯನ್ತ್ರಿತಾಃ-ಶಾಪಯನ್ತ್ರಿತಾಃ (ತೃ.ತ.); ಪುಲಸ್ತ್ಯಸ್ಯ ಗೋತ್ರಾಪತ್ಯಂ ಪುಮಾನ್ - ಪೌಲಸ್ತ್ಯಃ (ತ.ವೃ.); ತಸ್ಯ-ಪೌಲಸ್ತ್ಯಸ್ಯ; ಕಚಾನಾಂ ಗ್ರಹಾಃ-ಕಚಗ್ರಹಾಃ (ಷ.ತ.); ಬಲಾತ್ಕಾರೇಣ ಕಚಗ್ರಹಾಃ- ಬಲಾತ್ಕಾರಕಚಗ್ರಹಾಃ (ತೃ.ತ.); ಪೌಲಸ್ತ್ಯಸ್ಯ ಬಲಾತ್ಕಾರಕಚಗ್ರಹಾಃ-ಪೌಲಸ್ತ್ಯಬಲಾತ್ಕಾರಕಚಗ್ರಹಾಃ (ಷ.ತ.); ಶಾಪಯನ್ತ್ರಿತಾಶ್ಚ ತೇ ಪೌಲಸ್ತ್ಯಬಲಾತ್ಕಾರಕಚಗ್ರಹಾಶ್ಚ- ಶಾಪಯನ್ತ್ರಿತಪೌಲಸ್ತ್ಯಬಲಆತ್ಕಾರಕಚಗ್ರಹಾಃ (ವಿ.ಪೂ.ಕ); ತೈಃ- ಶಾಪಯನ್ತ್ರಿತಪೌಲಸ್ತ್ಯಬಲಾತ್ಕಾರಕಚಗ್ರಹೈಃ.

ವಿಚಾರ. ೧. ಪೂರ್ವದಲ್ಲಿ ರಂಭೆಯು ಕುಬೇರನ ಮಗನಾದ ನಲಕೂಬರನಲ್ಲಿಗೆ ಸಂಕೇತದಂತೆ ಹೋಗುತ್ತಿರುವಲ್ಲಿ ಕೈಲಾಸಪರ್ವತದಲ್ಲಿ ತನ್ನ

ಶಿಬಿರವನ್ನು ಬಿಟ್ಟಿದ್ದ ರಾವಣನು ಅವಳನ್ನು ಕಂಡು ಮೋಹಗೊಂಡು ಅವಳು ವಿಷಯವನ್ನು ತಿಳಿಸಿದರೂ ಕೇಳದೆ ಅವಳ ಮೇಲೆ ಅತ್ಯಾಚಾರವನ್ನು ನಡೆಸಿದನು. ಇದನ್ನು ಕೇಳಿ ನಲಕೂಬರನು 'ಇನ್ನು ಮೇಲೆ ಬಲಾತ್ಕಾರದಿಂದ ಸ್ತ್ರೀಯರ ಮೇಲೆ ಬಿದ್ದರೆ ರಾವಣನ ತಲೆ ನೂರು ಹೋಳಾಗಲಿ' ಎಂದು ಶಾಪವನ್ನು ಕೊಟ್ಟನಂತೆ. ಈ ಕಥೆಯು ಭಾರತದಲ್ಲಿದೆ. ೨.ಪತಿವ್ರತಾಸ್ತ್ರೀಯರು ತಮ್ಮ ಪತಿಗಳನ್ನು ಅಗಲಿರುವಾಗ ಜಡೆಯನ್ನು ನೀಳವಾಗಿ ಬಿಡದೆ ತಲೆಯ ಕೂದಲನ್ನು ಗಂಟು ಹಾಕಿಕೊಂಡಿರುತ್ತಿದ್ದರು. ಈ ಪದ್ಧತಿಯನ್ನು ಕವಿಯು ಇಲ್ಲಿ ಸೂಚಿಸಿರುತ್ತಾನೆ.

ರಾವಣಾವಗ್ರಹಕ್ಲಾನ್ತಮಿತಿ ವಾಗಮೃತೇನ ಸಃ ।
ಅಭಿವೃಷ್ಯ ಮರುತ್ಸಸ್ಯಂ ಕೃಷ್ಣಮೇಘಸ್ತಿರೋದಧೇ ॥೪೮॥

ಅನ್ವಯ. [ಸಃ ಕೃಷ್ಣಮೇಘಃ ರಾವಣಾವಗ್ರಹಕ್ಲಾನ್ತಂ ಮರುತ್ಸಸ್ಯಂ ಇತಿ ವಾಗಮೃತೇನ ಅಭಿವೃಷ್ಯ ತಿರೋದಧೇ. ]

ಅರ್ಥ. ಸಃ-ಆ ಕೃಷ್ಣಮೇಘಃ-ವಿಷ್ಣುವೆಂಬ ಮೋಡವು ರಾವಣಾವಗ್ರಹ ಕ್ಲಾನ್ತಂ-(ರಾವಣ-ರಾವಣನೆಂಬ ಅವಗ್ರಹ- ಮಳೆಯ ತಡೆಯಿಂದ ಕ್ಲಾನ್ತಂ-ಬಾಡಿದ್ದ) ರಾವಣನೆಂಬ ಬೇಗೆಯಿಂದ ಕಾದಿದ್ದ ಮರುತ್ಸಸ್ಯಂ-ದೇವತೆಗಳೆಂಬ ಪೈರನ್ನು ಇತಿ - ಈ ಪ್ರಕಾರವಾದ ವಾಗಮೃತೇನ- ಮಾತೆಂಬ ನೀರಿನಿಂದ ಅಭಿವೃಷ್ಯ-ಮಳೇಕರೆದು ತಿರೋದಧೇ-ಅಡಗಿಹೋಯಿತು.

ತಾತ್ಪರ್ಯ. ಬಲುಬೇಗೆಯಿಂದ ಬಳಲಿದ್ದ ಪೈರಿನ ಮೇಲೆ ಕರಿಯ ಮೋಡವು ಮಳೆಯನ್ನು ಕರೆದು ಮಾಯವಾಗುವಂತೆ ಆ ವಿಷ್ಣುವು ರಾವಣ ನಿಂದ ಬಾಧೆಪಡುತ್ತಿದ್ದ ಆ ದೇವತೆಗಳಿಗೆ ಪ್ರಿಯವಾದ ಮಾತುಗಳನ್ನು ಆಡಿ ಅದೃಶ್ಯನಾದನು.

ವಿಗ್ರಹವಾಕ್ಯಗಳು. ೧. ವಿಶ್ರವಸಃ ಅಪತ್ಯಂ ಪುಮಾನ್-ರಾವಣಃ (ತ.ವೃ.); ರಾವಣ ಏವ ಅವಗ್ರಹಃ-ರಾವಣಾವಗ್ರಹಃ (ಅ.ಪೂ.ಕ.); ತೇನ-ರಾವಣಾವ ಗ್ರಹೇಣ; ರಾವಣಾವಗ್ರಹೇಣ ಕ್ಲಾನ್ತಂ-ರಾವಣಾವಗ್ರಹಕ್ಲಾನ್ತಮ್ (ತೃ.ತ.). ೨. ಅಭಿತೋ ವರ್ಷಿತ್ವಾ-ಅಭಿವೃಷ್ಯ (ಗತಿ.ಸ.). ೩. ಮರುತ ಏವ ಸಸ್ಯಂ - ಮರು ತ್ಸಸ್ಯಮ್ (ಅ.ಪೂ.ಕ.) ೪.ವಾಗೇವ ಅಮೃತಂ-ವಾಗಮೃತಮ್ (ಅ. ಪೂ. ಕ.); ತೇನ-ವಾಗಮೃತೇನ. ೪.ಕೃಷ್ಣ ಏವ ಮೇಘಃ-ಕೃಷ್ಣಮೇಘಃ (ಅ.ಪೂ.ಕ.).

ವ್ಯಾಕರಣವಿಶೇಷ. ೧.ರಾವಣಃ-ವಿಶ್ರವಸ್‌ಶಬ್ದಕ್ಕೆ ರವಣ ಎಂಬ ಆದೇಶವಾಗಿ ಅವನ ಮಗನು ಎಂಬರ್ಥದಲ್ಲಿ ಅಣ್(ಅ) ಪ್ರತ್ಯಯವು ಬಂದಿದೆ. ಇದನ್ನು 'ರಾವಯತೀತಿ- ರಾವಣಃ' ಶತ್ರುಗಳನ್ನು

ಹೆದರಿಕೆಯಿಂದ ಕೂಗುವಂತೆ ಮಾಡುವವನು ಎಂದೂ ಕೆಲವರು ವಿಗ್ರಹಬಿಡಿಸುವರು. ೨.ಅವಗ್ರಹ-ಇದಕ್ಕೆ ಅವಗ್ರಾಹ ಎಂಬ ರೂಪವೂ ಉಂಟು. ೩.ಕೃಷ್ಣಮೇಘಃ - ಈ ಮಾತು ವಿಷ್ಣುವಿಗೇ ಅಲ್ಲದೆ ಕರಿಯ ಮೋಡಕ್ಕೂ ಅನ್ವಯಿಸುತ್ತದೆ; 'ಅಗ ಕೃಷ್ಣಶ್ಚಾಸೌ ಮೇಘಶ್ಚ' ಎಂದು ವಿಗ್ರಹಬಿಡಿಸಬೇಕು. ೪.ಅಭಿವೃಷ್ಯ-ವರ್ಷಿತ್ವಾ ಎಂಬ ಕ್ತ್ವಾಪ್ರತ್ಯಯವು ವೃಷ್‌ಧಾತುವಿಗೆ ಸೇರುವಾಗ ಅಭಿ ಎಂಬ ಅವ್ಯಯದ ಯೋಗವಿರುವದರಿಂದ ಲ್ಯಪ್ (ಯ) ಎಂಬ ಆದೇಶವಾಗಿದೆ; ಸಮಾಸದಲ್ಲಿ ನಞ್ ಹೊರತು ಮಿಕ್ಕ ಅವ್ಯಯವು ಪೂರ್ವದಲ್ಲಿರುವಾಗ ಕ್ತ್ವಾಪ್ರತ್ಯಯಕ್ಕೆ ಲ್ಯಪ್ ಆದೇಶವಾಗುವದು. ಇಲ್ಲಿ ಗತಿಸಮಾಸವಾದ್ದರಿಂದ ಯಾದೇಶವು ಬಂದಿದೆ. ೫.ತಿರೋದಧೇ (೨೪)- ತಿರಃ ಎಂಬುದು ಅವ್ಯಯವು; ಡುಧಾಞ್ ಧಾರಣಪೋಷಣಯೋಃ (ಧಾ-ಧರಿಸು ಕಾಪಾಡು) ಎಂಬ ೩ನೆಯ ಗಣದ ಧಾತುವಿಗೆ ಸೇರಿ ಮರೆಯಾಗು ಎಂಬ ಅರ್ಥವಾಗಿದೆ. ಲಿಟ್. ಆ. ಪ್ರ. ಏ.

ಪುರುಹೂತಪ್ರಭೃತಯಃ ಸುರಕಾರ್ಯೋದ್ಯತಂ ಸುರಾಃ ।
ಅಂಶೈರನುಯಯುರ್ವಿಷ್ಣುಂ ಪುಷ್ಪೈರ್ವಾಯುಮಿವ ದ್ರುಮಾಃ ॥೪೯॥

ಅನ್ವಯ. [ಪುರುಹೂತಪ್ರಭೃತಯಃ ಸುರಾಃ ಸುರಕಾರ್ಯೇಣ ಉದ್ಯತಂ ವಿಷ್ಣುಂ ಅಂಶೈಃ ದ್ರುಮಾಃ ಪುಷ್ಪೈಃ ವಾಯುಮಿವ ಅನುಯಯುಃ ]

ಅರ್ಥ. ಪುರುಹೂತಪ್ರಭೃತಯಃ-(ಪುರುಹೂತ-ಇಂದ್ರನೇ ಪ್ರಭೃತಯಃ - ಮೊದಲಾಗುಳ್ಳ) ಇಂದ್ರನೇ ಮೊದಲಾದ ಸುರಾಃ- ದೇವತೆಗಳು ಸುರಕಾರ್ಯೋದ್ಯತಂ (ಸುರ-ದೇವತೆಗಳ ಕಾರ್ಯ-ಕೆಲಸದಲ್ಲಿ ಉದ್ಯತಂ-ಉದ್ಯುಕ್ತನಾಗಿರುವ) ದೇವತೆಗಳ ಕೆಲಸವನ್ನು ಮಾಡಿಕೊಳ್ಳಲು ಹೊರಟಿರುವ ವಿಷ್ಣುಂ-ವಿಷ್ಣುವನ್ನು ಅಂಶೈಃ - ಭಾಗಗಳಿಂದ ದ್ರುಮಾಃ-ಮರಗಳು ಪುಷ್ಪೈಃ-ಹೂಗಳಿಂದ ವಾಯುಂ ಇವ-ಗಾಳಿಯನ್ನು ಹೇಗೋ ಹಾಗೆ ಅನುಯಯುಃ-ಅನುಸರಿಸಿ ಹೋದರು.

ವಿಗ್ರಹವಾಕ್ಯಗಳು. ೧.ಪುರು ಹುತಂ ಯಸ್ಯ ಸಃ-ಪುರುಹೂತಃ (ಷ.ಬ.) ಪುರುಹೂತಃ ಪ್ರಭೃತಿಃ ಯೇಷಾಂ ತೇ-ಪುರುಹೂತಪ್ರಭೃತಯಃ (ಷ.ಬ.). ೨.ಸುರಾಣಾಂ ಕಾರ್ಯಂ-ಸುರಕಾರ್ಯಮ್ (ಷ.ತ.); ತಸ್ಮಿನ್-ಸುರಕಾರ್ಯೇ; ಸುರಕಾರ್ಯೇ ಉದ್ಯತಃ-ಸುರಕಾರ್ಯೋದ್ಯತಃ(ಸ.ತ.); ತಂ-ಸುರಕಾರ್ಯೋದ್ಯತಮ್.

ವ್ಯಾಕರಣವಿಶೇಷ. ಅನುಯಯುಃ-ಯಾಪ್ರಾಪಣೇ (ಯಾ ಹೋಗು) ಎಂಬ ೨ನೆಯ ಗಣದ ಧಾತುವಿಗೆ ಅನು ಎಂಬ ಉಪಸರ್ಗವು ಸೇರಿ ಹಿಂಬಾಲಿಸು ಎಂಬರ್ಥವಾಗಿದೆ; ಲಿಟ್, ಪ. ಪ್ರ. ಬ.

ವಿಚಾರ. ಇಂದ್ರ, ಸೂರ್ಯ-ಮುಂತಾದ ದೇವತೆಗಳು ತಮ್ಮ ಒಂದೊಂದಂಶದಿಂದ ವಾಲಿ, ಸುಗ್ರೀವ-ಮುಂತಾದ ರೂಪದಿಂದ ಹುಟ್ಟಿದರು. ಯಾರು

ಯಾರು ಯಾವ ಅಂಶದಿಂದ ಹುಟ್ಟಿದರೆಂಬುದನ್ನು ರಾಮಾಯಣದಲ್ಲಿ ವಿಸ್ತಾರವಾಗಿ ತಿಳಿಸಿದೆ.

ಅಥ ತಸ್ಯ ವಿಶಾಂ ಪತ್ಯುರನ್ತೇ ಕಾಮ್ಯಸ್ಯ ಕರ್ಮಣಃ ।
ಪುರುಷಃ ಪ್ರಬಭೂವಾಗ್ನೇರ್ವಿಸ್ಮಯೇನ ಸಹರ್ತ್ವಿಜಾಮ್ ॥೫೦॥

ಅನ್ವಯ. [ಅಥ ತಸ್ಯ ವಿಶಾಂ ಪತ್ಯುಃ ಕಾಮ್ಯಸ್ಯ ಕರ್ಮಣಃ ಅನ್ತೇ ಅಗ್ನೇಃ ಪುರುಷಃ ಋತ್ವಿಜಾಂ ವಿಸ್ಮಯೇನ ಸಹ ಪ್ರಬಭೂವ. ]

ಅರ್ಥ. ಅಥ-ಆಮೇಲೆ ತಸ್ಯ-ಆ ವಿಶಾಂ-ಜನರ ಪತ್ಯುಃ-ಒಡೆಯನ ಕಾಮ್ಯಸ್ಯ - ಕಾಮ್ಯವಾದ ಕರ್ಮಣಃ-ಕರ್ಮದ ಅನ್ತೇ-ಕೊನೆಯಲ್ಲಿ ಅಗ್ನೇಃ-ಅಗ್ನಿಯ ದೆಸೆಯಿಂದ ಪುರುಷಃ-ಪುರುಷನು ಋತ್ವಿಜಾಂ-ಋತ್ವಿಕ್ಕರುಗಳ ವಿಸ್ಮಯೇನ ಸಹ - ಆಶ್ಚರ್ಯದೊಡನೆ ಪ್ರಬಭೂವ-ಹುಟ್ಟಿದನು.

ತಾತ್ಪರ್ಯ. ಇತ್ತ ದಶರಥನ ಪುತ್ರಕಾಮೇಷ್ಟಿಯು ಮುಗಿಯುತ್ತಲೂ ಅಗ್ನಿಕುಂಡದಿಂದ ಒಬ್ಬ ದಿವ್ಯಪುರುಷನು ಎದ್ದು ಬಂದನು. ಅವನನ್ನು ನೋಡಿ ಋತ್ವಿಕ್ಕರಿಗೆಲ್ಲ ಆಶ್ಚರ್ಯವಾಯಿತು.

ವಿಗ್ರಹವಾಕ್ಯಗಳು. ೧.ಕಾಮಯಿತುಂ ಯೋಗ್ಯಂ-ಕಾಮ್ಯಮ್ (ಕೃ. ವೃ.); ತಸ್ಯ-ಕಾಮ್ಯಸ್ಯ.

ವ್ಯಾಕರಣವಿಶೇಷ. ವಿಶಾಂ ಪತ್ಯುಃ-ಇದು ಎರಡು ಪದ, ಸಮಾಸವಲ್ಲ; ಸಮಾಸವಾದರೆ 'ವಿಶಾಂಪತೇಃ' ಎಂದಾಗಬೇಕಾಗುವದು. ೨.ಕರ್ಮಣಃ- ನಕಾರಾಂತ ನಪುಂಸಕ; (ಕರ್ಮ, ಕರ್ಮಣೀ, ಕರ್ಮಾಣಿ). ೩.ಅಗ್ನೇಃ-ಪಂಚಮೀವಿಭಕ್ತಿ; ಹುಟ್ಟು, ಹೊರತೋರು ಎಂಬರ್ಥವು ತೋರುವ ಧಾತುಗಳ ಸಂಬಂಧವಿರುವಾಗ ಯಾವುದರಿಂದ ಹುಟ್ಟುವದೋ ಅದರ ಹೆಸರಿಗೆ ಪಂಚಮಿಯು ಬರುವದು. ೩.ವಿಸ್ಮಯೇನ ಸಹ-ಒಡನೆ ಎಂಬರ್ಥದ ಮಾತುಗಳ ಯೋಗವಿದ್ದರೆ ತೃತೀಯಾವಿಭಕ್ತಿಯು ಬರುವದು. ೪.ಋತ್ವಿಜಾಂ-ಜಕಾರಾಂತ ಪುಲ್ಲಿಂಗ; (ಋತ್ವಿಕ್, ಋತ್ವಿಜೌ, ಋತ್ವಿಜಃ)-೫.ಪ್ರಬಭೂವ(೧೩)-ಭೂಸತ್ತಾಯಾಂ (ಭೂ- ಆಗು, ಇರು) ಎಂಬ ೧ನೆಯ ಗಣದ ಧಾತುವಿಗೆ 'ಪ್ರ' ಎಂಬ ಉಪಸರ್ಗವು ಸೇರಿದೆ; ಲಿಟ್, ಪ. ಪ್ರ. ಏ.

ವಿಚಾರ. ೧.ಕರ್ಮಗಳು- ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ -ಎಂದು ನಾಲ್ಕು ಬಗೆ. (ಅ) ನಿತ್ಯವೆಂದರೆ ದಿನದಿನವೂ ಅವಶ್ಯವಾಗಿ ಮಾಡಬೇಕಾದ ಸಂಧ್ಯಾವಂದನೆಯೇ ಮುಂತಾದವು. (ಆ) ನೈಮಿತ್ತಿಕವೆಂದರೆ ಗ್ರಹಣವೇ ಮುಂತಾದ ನಿಮಿತ್ತಗಳಿಂದ ಮಾಡಬೇಕಾದ ಕರ್ಮಗಳು. (ಇ) ಕಾಮ್ಯವೆಂದರೆ ಏನಾದರೊಂದು ಫಲವನ್ನು ಉದ್ದೇಶಿಸಿ ಮಾಡುವ ಕರ್ಮಗಳು (ಈ) ಪ್ರಾಯಶ್ಚಿತ್ತವೆಂದರೆ ದೋಷಪರಿಹಾರಕ್ಕಾಗಿ ಮಾಡಿಕೊಳ್ಳುವ ಕರ್ಮಗಳು.

ಪುತ್ರಕಾಮೇಷ್ಟಿಯು ಮಕ್ಕಳ ಬಯಕೆಯಿಂದ ಮಾಡುವ ಕರ್ಮವಾದ್ದರಿಂದ ಕಾಮ್ಯ ಕರ್ಮವು. ೨. ಋತ್ವಿಜರೆಂದರೆ ಯಾಗವನ್ನು ಮಾಡುವ ಯಜಮಾನನಿಗೆ ಸಹಾಯಮಾಡುವದಕ್ಕಾಗಿ ಅವನು ಆರಿಸಿಕೊಂಡಿರುವ ಬ್ರಾಹ್ಮಣರು.

ಹೇಮಪಾತ್ರಗತಂ ದೋರ್ಭ್ಯಾಮಾದಧಾನಃ ಪಯಶ್ಚರುಮ್ ।
ಅನುಪ್ರವೇಶಾದಾದ್ಯಸ್ಯ ಪುಂಸಸ್ತೇನಾಪಿ ದುರ್ವಹಮ್ ॥೫೧॥

ಅನ್ವಯ. [ಆದ್ಯಸ್ಯ ಪುಂಸಃ ಅನುಪ್ರವೇಶಾತ್ ತೇನ ಅಪಿ ದುರ್ವಹಂ ಹೇಮಪಾತ್ರಗತಂ ಪಯಶ್ಚರುಂ ದೋರ್ಭ್ಯಾಂ ಆದಧಾನಃ (ಪ್ರಬಭೂವ)]

ಅರ್ಥ. ಆದ್ಯಸ್ಯ-ಮೊದಲನೆಯ ಪುಂಸಃ-ಪುರುಷನ ಅನುಪ್ರವೇಶಾತ್-ಒಳಹೊಗುವಿಕೆಯಿಂದ ತೇನಾಪಿ- ಅವನಿಂದಲೂ ದುರ್ವಹಂ-ಹೊರಲು ಕಷ್ಟವಾದ ಹೇಮಪಾತ್ರಗತಂ-(ಹೇಮ-ಚಿನ್ನದ ಪಾತ್ರ- ಪಾತ್ರೆಯನ್ನು ಗತಂ-ಸೇರಿರುವ) ಚಿನ್ನದ ಪಾತ್ರೆಯಲ್ಲಿರುವ ಪಯಶ್ಚರುಂ- ಹಾಲಿನ ಚರುವನ್ನು ಆದಧಾನಃ-ಹಿಡಿದುಕೊಂಡು(ಪ್ರಬಭೂವ-ಹೊರತೋರಿದನು)

ವಿಗ್ರಹವಾಕ್ಯಗಳು. ಹೇಮ್ನಃ ಪಾತ್ರಂ-ಹೇಮಪಾತ್ರಮ್ (ಷ.ತ.); (ಅಥವಾ) ಹೇಮಮಯಂ ಚ ತತ್ ಪಾತ್ರಂ ಚ- ಹೇಮಪಾತ್ರಂ (ಮ.ಲೋ.ಕ.) ಹೇಮಪಾತ್ರಂ ಗತಂ - ಹೇಮಪಾತ್ರಗತಂ - (ದ್ವಿ.ತ.). ೨.ಆಧತ್ತೇ ಇತಿ-ಆದಧಾನಃ (ಕೃ.ವೃ.). ೩.ಪಯಸಿ ಪಕ್ವಃ-ಪಯಃಪಕ್ವಃ (ಸ.ತ.); ಪಯಃಪಕ್ವಶ್ಚಾಸೌ ಚರುಶ್ಚ - ಪಯಶ್ಚರುಃ; (ಮ.ಲೋ.ಕ.) ೪.ಅನುಗತಃ ಪ್ರವೇಶಃ- ಅನುಪ್ರವೇಶಃ (ಪ್ರಾ.ಸ.); ತಸ್ಮಾತ್ - ಅನುಪ್ರವೇಶಾತ್. ೫.ದುಃಖೇನ ವೋಢುಂ ಶಕ್ಯಂ-ದುರ್ವಹಮ್ (ಗತಿ.ಸ.).

ವ್ಯಾಕರಣವಿಶೇಷ. ೧.ಹೇಮಪಾತ್ರಗತಮ್-ಹೇಮನ್‌ಶಬ್ದ. ನಕಾರಾಂತ ನಪುಂಸಕ. ೨.ದೋರ್ಭ್ಯಾಮ್-ಷಕಾರಾನ್ತ ಪುಲ್ಲಿಂಗ; (ದೋಃ, ದೋಷೌ, ದೋಷಃ) ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ. ೩.ಪುಂಸಃ-ಸಕಾರಾನ್ತ ಪುಲ್ಲಿಂಗ; ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ. ೪.ದುರ್ವಹಮ್-ಸುಲಭ, ಕಷ್ಟ- ಎಂಬ ಅರ್ಥವಿರುವ ಈಷತ್, ದುಸ್, ಸು-ಈ ಮಾತುಗಳಿಗೆ ಸೇರಿದ ಧಾತುವಿಗೆ ಖಲ್ (ಅ) ಪ್ರತ್ಯಯವು ಬರುವದು. ಇಲ್ಲಿ 'ದುರ್ವಹಂ' ಎಂದರೆ ಹೊರುವದು ಕಷ್ಟವಾಗಿರುವ ಎಂದರ್ಥ. ೫.ಹಿಂದಿನ ಶ್ಲೋಕದಲ್ಲಿ ಹೇಳಿರುವ 'ಪುರುಷಃ' ಎಂಬುದಕ್ಕೆ ಇಲ್ಲಿರುವ ದಧಾನಃ ಎಂಬುದು ವಿಶೇಷಣ; ಈ ಎರಡೂ ಶ್ಲೋಕಗಳು ಸೇರಿ ಒಂದು ಯುಗ್ಮ.

ವಿಚಾರ. ವಿಷ್ಣುವು ಆದಿಪುರುಷನೆಂಬ ವಿಷಯಕ್ಕೆ ೬ನೆಯ ಶ್ಲೋಕದ ವಿಚಾರವನ್ನು ನೋಡಿ (ಪು. ೧೧೪). ೨. ವಿಷ್ಣುವಿನ ಹೊಟ್ಟೆಯಲ್ಲಿ

ಹದಿನಾಲ್ಕು ಲೋಕಗಳೂ ಇರುವದರಿಂದ ಅವನು ಹೊಕ್ಕಿರುವ ಪಾಯಸವು ಅಷ್ಟು ಭಾರವಾಗಿತ್ತೆಂದು ಭಾವ. ೩.ಬಸಿಯದೆ ಇರುವದಾಗಿಯೂ ಆವಿಯಿಂದ ಬೇಯಿಸಲ್ಪಟ್ಟದ್ದಾಗಿಯೂ ಇರುವ ಅನ್ನಕ್ಕೆ 'ಚರು'ವೆಂಬ ಹೆಸರನ್ನು ಯಾಜ್ಞಿಕರು ಕೊಟ್ಟಿರುತ್ತಾರೆ. ಚರು ಎಂಬುದು ಬೇಯಿಸುವ ತಪ್ಪಲೆಗೆ ಹೆಸರೆಂದೂ ಅದರಲ್ಲಿರುವದರಿಂದ ಗೌಣವಾಗಿ ಅನ್ನಕ್ಕೂ ಈ ಹೆಸರು ಬಂದಿದೆಯೆಂದೂ ಕೆಲವರ ಮತ.

ಪ್ರಾಜಾಪತ್ಯೋಪನೀತಂ ತದನ್ನಂ ಪ್ರತ್ಯಗ್ರಹೀನ್ನೃಪಃ ।
ವೃಷೇವ ಪಯಸಾಂ ಸಾರಮಾವಿಷ್ಕೃತಮುದನ್ವತಾ ॥೫೨॥

ಅನ್ವಯ. [ನೃಪಃ ಪ್ರಾಜಾಪತ್ಯೋಪನೀತಂ ತತ್ ಅನ್ನಂ ಉದನ್ವತಾ ಆವಿಷ್ಕೃತಂ ಪಯಸಾಂ ಸಾರಂ ವೃಷಾ ಇವ ಪ್ರತ್ಯಗ್ರಹೀತ್]

ಅರ್ಥ. ನೃಪಃ-ರಾಜನು ಪ್ರಾಜಾಪತ್ಯೋಪನೀತಂ - (ಪ್ರಾಜಾಪತ್ಯ-ಪ್ರಜಾಪತಿಯ ಸಂಬಂಧಿಯಾದ ಪುರುಷನಿಂದ ಉಪನೀತಂ-ತರಲ್ಪಟ್ಟ) ಪ್ರಜಾಪತಿಬ್ರಹ್ಮನ ಕಡೆಯ ಪುರುಷನು ತಂದುಕೊಟ್ಟ ತತ್-ಆ ಅನ್ನಂ-ಪಾಯಸಾನ್ನವನ್ನು ಉದನ್ವತಾ - ಸಮುದ್ರದಿಂದ ಆವಿಷ್ಕೃತಂ-ಹೊರತೋರಿಸಲ್ಪಟ್ಟ ಪಯಸಾಂ-ನೀರುಗಳ ಸಾರಂ - ಸಾರವಾದ (ಅಮೃತವನ್ನು) ವೃಷಾ ಇವ-ಇಂದ್ರನು ಹೇಗೋ ಹಾಗೆ ಪ್ರತ್ಯಗ್ರಹೀತ್-ತೆಗೆದುಕೊಂಡನು.

ತಾತ್ಪರ್ಯ. ಅಗ್ನಿಕುಂಡದಿಂದ ಎದ್ದು ಬಂದ ಆ ಪುರುಷನು ಪ್ರಜಾಪತಿ ಬ್ರಹ್ಮನ ಕಡೆಯವನು. ಆತನು ತಂದುಕೊಟ್ಟ ಪಾಯಸವನ್ನು ಸಮುದ್ರದಲ್ಲಿ ಹುಟ್ಟಿದ ಅಮೃತವನ್ನು ಇಂದ್ರನು ತೆಗೆದುಕೊಂಡ ಹಾಗೆ ದಶರಥನು ತೆಗೆದುಕೊಂಡನು.

ವಿಗ್ರಹವಾಕ್ಯಗಳು. ೧.ನೄನ್ ಪಾತೀತಿ-ನೃಪಃ(ಉಪ.ಸ.). ೨.ಪ್ರಜಾಪತೇಃ ಅಯಂ-ಪ್ರಾಜಾಪತ್ಯಃ (ತ.ವೃ.); ತೇನ-ಪ್ರಾಜಾಪತ್ಯೇನ; ಪ್ರಾಜಾಪತ್ಯೇನ ಉಪನೀತಂ- ಪ್ರಾಜಾಪತ್ಯೋಪನೀತಂ (ತೃ.ತ.).

ವ್ಯಾಕರಣವಿಶೇಷ. ೧.ನೃಪಃ-ನೃಶಬ್ದವು ಪಿತೃಶಬ್ದದಂತೆ; (ನಾ, ನರೌ, ನರಃ); ಆದರೆ ಷಷ್ಠಿವಿಭಕ್ತಿಯಲ್ಲಿ 'ನುಃ, ನೋಃ, ನೃಣಾಂ-ನೄಣಾಮ್' ಎಂಬ ರೂಪಗಳಾಗುವವು. ೨.ವೃಷಾ-ನಕಾರಾಂತ ಪುಲ್ಲಿಂಗ. ೩.ಉದನ್ವತಾ-ತಕಾರಾಂತ ಪುಲ್ಲಿಂಗ; (ಉದನ್ವಾನ್, ಉದನ್ವನ್ತೌ, ಉದನ್ವನ್ತಃ). ೪.ಪಯಸಾಂ-ಸಕಾರಾಂತ ನಪುಂಸಕ. ೫. ಪ್ರತ್ಯಗ್ರಹೀತ್ (೨೭)- ಗ್ರಹ ಉಪಾದಾನೇ (ಗೃಹ್-ತೆಗೆದುಕೊ) ಎಂಬ ೯ನೆಯ ಗಣದ ಧಾತುವಿಗೆ ಪ್ರತಿ ಎಂಬ ಉಪಸರ್ಗವು ಸೇರಿದೆ; ಲುಙ್.ಪ.ಪ್ರ.ಏ.

ವಿಚಾರ. ೧. ಸಮುದ್ರವನ್ನು ದೇವತೆಗಳು ಕಡೆದಾಗ ಕೊನೆಗೆ ಹುಟ್ಟಿದ ಅಮೃತವನ್ನು ಒಂದು ಪಾತ್ರೆಯಲ್ಲಿಟ್ಟುಕೊಂಡು ಧನ್ವಂತರಿಯೆಂಬ ಒಬ್ಬ ದಿವ್ಯ

ಪುರುಷನು ತಂದನೆಂದು ಪುರಾಣದ ಕಥೆ. ಅಮೃತವನ್ನು ನೇರವಾಗಿ ಅವನ ಕೈಯಿಂದ ಇಂದ್ರನು ತೆಗೆದುಕೊಂಡನೆಂದು ಭಾರತದಲ್ಲಿಯಾಗಲಿ ವಿಷ್ಣುಪುರಾಣ ದಲ್ಲಿಯಾಗಲಿ ಇರುವದಿಲ್ಲ. ಕಾಳಿದಾಸನು ಮತ್ತೆ ಯಾವದೋ ಬೇರೆ ಪುರಾಣ ವನ್ನು ಅನುಸರಿಸಿ ಹೀಗೆಂದು ಬರೆದಿರಬೇಕು. ಅಥವಾ ದೇವತೆಗಳಿಗೆ ಅಮೃತವು ಸೇರಿದ್ದರಿಂದ ದೇವತೆಗಳ ಒಡೆಯನಾದ ಇಂದ್ರನು ತೆಗೆದುಕೊಂಡನೆಂದು ಹೇಳಿ ದ್ದರೂ ಹೇಳಿರಬಹುದು. ೨.ಪ್ರಾಜಾಪತ್ಯನೆಂದರೆ ಬ್ರಹ್ಮನ ಮಗನಾದ ವಸಿಷ್ಠನೆಂದು ಕೆಲವು ವ್ಯಾಖ್ಯಾನಕಾರರು ಬರೆದಿರುತ್ತಾರೆ; ಆದರೆ ಇದು ರಾಮಾಯಣಕ್ಕೆ ವಿರೋಧ ವಾಗಿರುತ್ತದೆ.

ಅನೇನ ಕಥಿತಾ ರಾಜ್ಞೋ ಗುಣಾಸ್ತಸ್ಯಾನ್ಯದುರ್ಲಭಾಃ ।
ಪ್ರಸೂತಿಂ ಚಕಮೇ ತಸ್ಮಿಂಸ್ತ್ರೈಲೋಕ್ಯಪ್ರಭವೋಽಪಿ ಯತ್ ॥೫೩॥

ಅನ್ವಯ. [ತಸ್ಯ ರಾಜ್ಞಃ ಅನ್ಯದುರ್ಲಭಾಃ ಗುಣಾಃ ಅನೇನ ಕಥಿತಾಃ ಯತ್ ತ್ರೈಲೋಕ್ಯಪ್ರಭವಃ ಅಪಿ ತಸ್ಮಿನ್ ಪ್ರಸೂತಿಂ ಚಕಮೇ.]

ಅರ್ಥ. ತಸ್ಯ-ಆ ರಾಜ್ಞಃ-ದೊರೆಯ ಅನ್ಯದುರ್ಲಭಾಃ-(ಅನ್ಯ-ಮತ್ತೊಬ್ಬರಿಗೆ ದುರ್ಲಭಾಃ-ಸಿಕ್ಕುವದು ಕಷ್ಟವಾದ) ಮತ್ತೊಬ್ಬರಿಗೆ ಸಿಗಲರಿಯದ ಗುಣಾಃ- ಗುಣ ಗಳು ಅನೇನ- ಇದರಿಂದ ಕಥಿತಾಃ-ಹೇಳಲ್ಪಟ್ಟವು. ಯತ್-ಏಕೆಂದರೆ ತ್ರೈಲೋಕ್ಯ ಪ್ರಭವೋಽಪಿ-(ತ್ರೈಲೋಕ್ಯ-ಮೂರು ಲೋಕಗಳ ಪ್ರಭವೋಽಪಿ-ಕಾರಣನಾದರೂ) ಮೂರು ಲೋಕಗಳನ್ನೂ ಸೃಷ್ಟಿಮಾಡಿದ ವಿಷ್ಣುವೂ ಕೂಡ ತಸ್ಮಿನ್ - ಅವನಲ್ಲಿ ಪ್ರಸೂತಿಂ-ಹುಟ್ಟುವಿಕೆಯನ್ನು ಚಕಮೇ-ಬಯಸಿದನು.

ತಾತ್ಪರ್ಯ. ಮೂರು ಲೋಕವನ್ನು ಹಡೆದ ವಿಷ್ಣುವೂ ದಶರಥನಲ್ಲಿ ಹುಟ್ಟಬೇಕೆಂದು ಬಯಸಿದನೆಂಬುದೇ ಅವನಲ್ಲಿ ಮತ್ತೆ ಯಾರಲ್ಲಿಯೂ ಇಲ್ಲದಂಥ ಸುಗುಣಗಳಿದ್ದವೆಂಬುದಕ್ಕೆ ಗುರುತೆಂದು ನಾವು ತಿಳಿಯಬಹುದಾಗಿದೆ.

ವಿಗ್ರಹವಾಕ್ಯಗಳು. ೧.ದುಃಖೇನ ಲಬ್ಧುಂ ಶಕ್ಯಾಃ-ದುರ್ಲಭಾಃ (ಉಪ. ಸ.); ಅನ್ಯೇಷಾಂ ದುರ್ಲಭಾಃ-ಅನ್ಯದುರ್ಲಭಾಃ (ಷ.ತ.). ೨.ತ್ರಯೋ ಲೋಕಾಃ - ತ್ರೈಲೋಕ್ಯಮ್ (ದ್ವಿಗು.); ತಸ್ಯ-ತ್ರೈಲೋಕ್ಯಸ್ಯ; ಪ್ರಭವತ್ಯಸ್ಮಾದಿತಿ ಪ್ರಭವಃ (ಕೃ.ವೃ.); ತ್ರೈಲೋಕ್ಯಸ್ಯ ಪ್ರಭವಃ-ತ್ರೈಲೋಕ್ಯಪ್ರಭವಃ (ಷ.ತ.).

ವ್ಯಾಕರಣವಿಶೇಷ. ೧.ದುರ್ಲಭಾಃ-ಲಭ್‌ಧಾತುವಿಗೆ ಖಲ್‌ಪ್ರತ್ಯಯ ಬಂದಿದೆ; ೨೫ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೧೩೭) ನೋಡಿ. ೨.ತ್ರೈಲೋಕ್ಯಪ್ರಭವಃ-ತ್ರೈಲೋಕ್ಯ ಇಲ್ಲಿ ಷ್ಯಞ್ (ಯ) ಎಂಬ ತದ್ಧಿತಪ್ರತ್ಯಯವು ಸೇರುವದಕ್ಕೆ ಮುಂಚೆ ದ್ವಿಗುಸಮಾಸವಾಗಿದೆ; ೨೧ನೆಯ ಶ್ಲೋಕದ

೧ನೆಯ ಟಿಪ್ಪಣಿಯನ್ನು (ಪು. ೧೩೨) ನೋಡಿ. ೩.ಯತ್-ಅವ್ಯಯ. ೪.ಚಕಮೇ (೨೬)- ಕಮು ಕಾನ್ತೌ (ಕಮ್-ಇಚ್ಛಿಸು) ಎಂಬ ೧ನೆಯ ಗಣದ ಧಾತುವಿನ ಲಿಟ್, ಆ. ಪ್ರ. ಏ.

ಸ ತೇಜೋ ವೈಷ್ಣವಂ ಪತ್ನ್ಯೋರ್ವಿಭೇಜೇ ಚರುಸಂಜ್ಞಿತಮ್ ।
ದ್ಯಾವಾಪೃಥಿವ್ಯೋಃ ಪ್ರತ್ಯಗ್ರಮಹರ್ಪತಿರಿವಾತಪಮ್ ॥೫೪॥

ಅನ್ವಯ. [ಸಃ ಚರುಸಂಜ್ಞಿತಂ ವೈಷ್ಣವಂ ತೇಜಃ ಪತ್ನ್ಯೋಃ ದ್ಯಾವಾಪೃಥಿವ್ಯೋಃ ಅಹರ್ಪತಿಃ ಪ್ರತ್ಯಗ್ರಂ ಆತಪಂ ಇವ ವಿಭೇಜೇ.]

ಅರ್ಥ. ಸಃ-ಆತನು ಚರುಸಂಜ್ಞಿತಂ-ಚರುವೆಂಬ ಹೆಸರಿನ ವೈಷ್ಣವಂ-ವಿಷ್ಣು ಸಂಬಂಧಿಯಾದ ತೇಜಃ-ತೇಜಸ್ಸನ್ನು ಪತ್ನ್ಯೋಃ- ಇಬ್ಬರು ಹೆಂಡತಿಯರಿಗೆ ದ್ಯಾವಾಪೃಥಿವ್ಯೋಃ-ಅಂತರಿಕ್ಷ ಭೂಮಿ ಇವೆರಡಕ್ಕೆ ಅಹರ್ಪತಿಃ - ಸೂರ್ಯನು ಪ್ರತ್ಯಗ್ರಂ-ಹೊಸದಾದ ಆತಪಂ ಇವ-ಬಿಸಲನ್ನು ಹೇಗೋ ಹಾಗೆ ವಿಭೇಜೇ-ಹಂಚಿದನು.

ತಾತ್ಪರ್ಯ. ಸೂರ್ಯನು ತನ್ನ ಪ್ರಕಾಶವನ್ನು ಭೂಮಿಗೆ ಅರ್ಧ, ಅಂತರಿಕ್ಷಕ್ಕೆ ಅರ್ಧ-ಹೀಗೆ ಸಮವಾಗಿ ಹಂಚುವಂತೆ ದಶರಥನು ಆ ಪಾಯಸವನ್ನು ತನ್ನ ಇಬ್ಬರು ಪತ್ನಿಯರಿಗೂ ಸಮವಾಗಿ ಹಂಚಿಕೊಟ್ಟನು.

ವಿಗ್ರಹವಾಕ್ಯಗಳು. ೧.ವಿಷ್ಣೋಃ ಇದಂ-ವೈಷ್ಣವಮ್ (ತ.ವೃ.). ೨.ಚರುಃ ಇತಿ ಸಂಜ್ಞಾ-ಚರುಸಂಜ್ಞಾ (ಸಂ.ಪೂ.ಕ.); ಚರುಸಂಜ್ಞಾ ಅಸ್ಯ ಸಂಜಾತಾ ಇತಿ - ಚರುಸಂಜ್ಞಿತಮ್(ತ.ವೃ.). ೩.ದ್ಯೌಶ್ಚ ಪೃಥಿವೀ ಚ-ದ್ಯಾವಾಪೃಥಿವ್ಯೌ (ದ್ವ.ಸ.); ತಯೋಃ-ದ್ಯಾವಾಪೃಥಿವ್ಯೋಃ. ೪. ಅಹ್ನಃ ಪತಿಃ-ಅಹರ್ಪತಿಃ (ಷ.ತ.).

ವ್ಯಾಕರಣವಿಶೇಷ. ೧.ಅಹರ್ಪತಿಃ-ಇದಕ್ಕೆ 'ಅಹಃಪತಿಃ' ಎಂಬ ರೂಪವೂ ಉಂಟು. ಅಹನ್‌ಶಬ್ದ. ೨.ದ್ಯಾವಾಪೃಥಿವ್ಯೋಃ-ದಿವ್‌ಶಬ್ದಕ್ಕೆ ಪೃಥಿವೀಶಬ್ದವೂ ಸೇರಿದಾಗ ದ್ವಂದ್ವಸಮಾಸದಲ್ಲಿ 'ದಿವಸ್' 'ದ್ಯಾವ್' ಎಂಬ ಆದೇಶಗಳು ಬಂದು 'ದಿವಸ್ಪೃಥಿವ್ಯೌ'. 'ದ್ಯಾವಾಪೃಥಿವ್ಯೌ' ಎಂಬ ರೂಪಗಳು ಆಗುತ್ತವೆ. ೩.ತೇಜಃ-ಸಕಾರಾನ್ತ ನಪುಂಸಕ. ೪.ವಿಭೇಜೇ (೨೪)-ಭಜಸೇವಾಯಾಂ (ಭಜ್-ಸೇವಿಸು) ಎಂಬ ೧ನೆಯ ಗಣದ ಅಥವಾ ಭಜವಿಶ್ರಾಣನೇ ಪಾಕೇ ಚ (ಭಜ್-ಕೊಡು, ಅಡಿಗೆಮಾಡು) ಎಂಬ ೧೦ನೆಯ ಗಣದ ಧಾತುವಿನ ಲಿಟ್, ಆ.ಪ್ರ.ಏ.

ಅರ್ಚಿತಾ ತಸ್ಯ ಕೌಸಲ್ಯಾ ಪ್ರಿಯಾ ಕೇಕಯವಂಶಜಾ ।
ಅತಃ ಸಂಭಾವಿತಾಂ ತಾಭ್ಯಾಂ ಸುಮಿತ್ರಾಮೈಚ್ಛದೀಶ್ವರಃ ॥೫೫॥

ಅನ್ವಯ. [ತಸ್ಯ ಕೌಸಲ್ಯಾ-ಅರ್ಚಿತಾ, ಕೇಕಯವಂಶಜಾ ಪ್ರಿಯಾ; ಅತಃ

ಈಶ್ವರಃ ಸುಮಿತ್ರಾಂ ತಾಭ್ಯಾಂ ಸಂಭಾವಿತಾಂ ಐಚ್ಛತ್.]

ಅರ್ಥ. ತಸ್ಯ-ಆತನಿಗೆ ಕೌಸಲ್ಯಾ-ಕೌಸಲ್ಯೆಯು ಅರ್ಚಿತಾ-ಮಾನ್ಯಳು ಕೇಕಯ ವಂಶಜಾ-ಕೇಕಯವಂಶದಲ್ಲಿ ಹುಟ್ಟಿದ (ರಾಣಿಯು) ಪ್ರಿಯಾ-ಪ್ರೀತಿಗೆ ಅರ್ಹಳಾದವಳು; ಅತಃ-ಆದ್ದರಿಂದ ಈಶ್ವರಃ-ರಾಜನು ಸುಮಿತ್ರಾಂ-ಸುಮಿತ್ರೆಯನ್ನು ತಾಭ್ಯಂ-ಅವರಿಬ್ಬರಿಂದ ಸಂಭಾವಿತಾಂ-ಗೌರವಿಸಲ್ಪಟ್ಟವಳನ್ನಾಗಿ ಐಚ್ಛತ್-ಇಚ್ಛಿಸಿದನು.

ತಾತ್ಪರ್ಯ. ಆತನಿಗೆ ಕೌಸಲ್ಯೆಯು ಹಿರಿಯ ಹೆಂಡತಿಯಾದ್ದರಿಂದ ಗೌರವಿಸ ತಕ್ಕವಳಾಗಿದ್ದಳು, ಕೈಕೇಯಿಯು ಕಿರಿಯ ಹೆಂಡತಿಯಾದ್ದರಿಂದ ಮೆಚ್ಚಿನವಳಾಗಿದ್ದಳು; ಆದ್ದರಿಂದ ಅವರಿಗೆ ಪಾಯಸವನ್ನು ಸಮವಾಗಿ ಹಂಚಿ ಅವರೇ ಅವಳಿಗೆ ಒಂದೊಂದಂಶವನ್ನು ಕೊಟ್ಟು ಗೌರವಿಸಲಿ ಎಂದು ಇಷ್ಟಪಟ್ಟನು.

ವಿಗ್ರಹವಾಕ್ಯಗಳು. ೧.ಕೋಸಲಸ್ಯ ಅಪತ್ಯಂ ಸ್ತ್ರೀ-ಕೌಸಲ್ಯಾ (ತ.ವೃ.). ೨.ಕೇಕಯಸ್ಯ ವಂಶಃ-ಕೇಕಯವಂಶಃ (ಷ.ತ.); ತಸ್ಮಿನ್-ಕೇಕಯವಂಶೇ; ಕೇಕಯ ವಂಶೇ ಜಾತಾ-ಕೇಕಯವಂಶಜಾ (ಸ.ತ.).

ವಿಚಾರ. ರಾಜನು ಕೌಸಲ್ಯೆಗೂ ಕೈಕೇಯಿಗೂ ಪಾಯಸವನ್ನು ಕೊಟ್ಟು ಅವರಿಬ್ಬರಿಂದ ಸುಮಿತ್ರೆಗೆ ಕೊಡಿಸಿದನೆಂದು ಇಲ್ಲಿ ವರ್ಣಿಸಿದೆಯಷ್ಟೆ; ಆದರೆ ರಾಮಾಯಣದಲ್ಲಿ ಹೀಗಿಲ್ಲ; ರಾಜನೇ ಮೂರು ಜನ ಹೆಂಡತಿಯರಿಗೂ ಹಂಚಿದನೆಂದು ಹೇಳಿದೆ. ಕವಿಯು ರಾಮಾಯಣದ ಕ್ರಮವನ್ನು ಬಿಟ್ಟು ಬೇರೆ ವಿಧವಾಗಿ ವರ್ಣಿಸಿರುವದಕ್ಕೆ ಒಬ್ಬೊಬ್ಬರು ಒಂದೊಂದು ವಿಧವಾಗಿ ತಾತ್ಪರ್ಯವನ್ನು ಕಲ್ಪಿಸುತ್ತಾರೆ. ರಾಜನು ಕೌಸಲ್ಯೆಗೂ ಕೈಕೇಯಿಗೂ ಮೊದಲು ಕೊಟ್ಟು ಅವರಿಗೆ ಸಂತೋಷಪಡಿಸಿದ ಮೇಲೆ ಅವರಿಂದಲೆ ಸುಮಿತ್ರೆಗೆ ಕೊಡಿಸಿದ್ದರಿಂದ ಅವಳಿಗೆ ಅವರಿಬ್ಬರಿಗಿಂತಲೂ ಹೆಚ್ಚಾಗಿಯೆ ಬಂದಂತಾಯಿತು ಎಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಸುಮಿತ್ರೆಯ ತಾಯಿ ವೈಶ್ಯಳಾದ್ದರಿಂದ ಅವಳು ನಿಜವಾಗಿ ಪತ್ನಿ ಎಂಬ ಶಬ್ದಕ್ಕೆ ಅರ್ಹಳಲ್ಲ. ಪತ್ನಿಯೆಂದರೆ ಯಜ್ಞದಲ್ಲಿ ಗಂಡನೊಡನೆ ಭಾಗಿನಿಯಾಗುವದಕ್ಕೆ ತಕ್ಕವಳು. ಆದ್ದರಿಂದಲೆ ಕವಿಯು ೫೪ನೆಯ ಶ್ಲೋಕದಲ್ಲಿ 'ಪತ್ನ್ಯೋಃ' ಎಂಬ ಮಾತನ್ನು ಉಪಯೋಗಿಸಿರುತ್ತಾನೆ. ಆದರೂ ಅವರು ತನ್ನ ಅಭಿಪ್ರಾಯವನ್ನು ಅರಿತು ಸುಮಿತ್ರೆಗೂ ಒಂದು ಅಂಶವನ್ನು ಕೊಡುವರೆಂಬ ನಂಬಿಕೆಯಿಂದ ಅವರಿಗೆ ಕೊಟ್ಟು ರಾಜನು ತನ್ನ ಜಾಣತನವನ್ನು ತೋರಿಸಿರುತ್ತಾನೆಂದು ಹೇಳುವರು. ಇವರ ಪಕ್ಷಕ್ಕೆ ಮುಂದಿನ ಶ್ಲೋಕದಲ್ಲಿ 'ಬಹುಜ್ಞಸ್ಯ' 'ಚಿತ್ತಜ್ಞೇ' ಎಂಬ ಮಾತುಗಳು ಒತ್ತಾಸೆಯನ್ನು ಕೊಡುವವು. ಸುಮಿತ್ರೆಯು ಸಂಕರಜಾತಿಯವಳೆಂಬ ವಿಷಯವನ್ನು ರಾಮಾಯಣವ್ಯಾಖ್ಯಾನದಲ್ಲಿಯೂ ಹೇಳಿದೆ.

ತೇ ಬಹುಜ್ಞಸ್ಯ ಚಿತ್ತಜ್ಞೇ ಪತ್ನ್ಯೌ ಪತ್ಯುರ್ಮಹೀಕ್ಷಿತಃ ।
ಚರೋರರ್ಧಾರ್ಧಭಾಗಾಭ್ಯಾಂ ತಾಮಯೋಜಯತಾಮುಭೇ ॥೫೬॥

ಅನ್ವಯ. [ಬಹುಜ್ಞಸ್ಯ ಪತ್ಯುಃ ಮಹೀಕ್ಷಿತಃ ಚಿತ್ತಜ್ಞೇ ತೇ ಉಭೇ ಪತ್ನ್ಯೌ ಚರೋಃ ಅರ್ಧಾರ್ಧಭಾಗಾಭ್ಯಾಂ ತಾಂ ಅಯೋಜಯತಾಮ್.]

ಅರ್ಥ. ಬಹುಜ್ಞಸ್ಯ-ಬಹಳ ತಿಳಿದವನಾದ ಪತ್ಯುಃ-ಗಂಡನಾದ ಮಹೀಕ್ಷಿತಃ - ರಾಜನ ಚಿತ್ತಜ್ಞೇ-ಮನಸ್ಸನ್ನು ತಿಳಿದ ತೇ-ಆ ಉಭೇ-ಇಬ್ಬರು ಪತ್ನ್ಯೌ-ಹೆಂಡಿರುಗಳು ಚರೋಃ-ಪಾಯಸದ ಅರ್ಧಾರ್ಧಭಗಾಭ್ಯಾಂ-(ಅರ್ಧ-ಸಮಭಾಗಗಳ ಅರ್ಧಭಾಗಾಭ್ಯಾಂ-ಸ್ವಲ್ಪ ಭಾಗಗಳಿಂದ) ತಮ್ಮ ಅರ್ಧಪಾಲಿನಲ್ಲಿ ಸ್ವಲ್ಪಭಾಗಗಳಿಂದ ತಾಂ-ಆಕೆಯನ್ನು ಅಯೋಜಯತಾಂ-ಕೊಡಿಸಿದರು.

ತಾತ್ಪರ್ಯ. ತಿಳಿದವನೂ ಪತಿಯೂ ರಾಜನೂ ಆದ ದಶರಥನ ಅಭಿಪ್ರಾಯವನ್ನು ತಿಳಿದುಕೊಂಡು ಆ ಇಬ್ಬರು ಹೆಂಡತಿಯರೂ ತಮ್ಮ ಪಾಲಿಗೆ ಬಂದ ಪಾಯಸಾರ್ಧದಲ್ಲಿ ಒಂದೊಂದು ಭಾಗವನ್ನು ಸುಮಿತ್ರೆಗೆ ಕೊಟ್ಟರು.

ವಿಗ್ರಹವಾಕ್ಯಗಳು. ೧.ಜಾನಾತೀತಿ-ಜ್ಞಃ (ಕೃ.ವೃ.); ಬಹೋಃ ಜ್ಞಃ - ಬಹುಜ್ಞಃ (ಷ.ತ.). ೨. ಜಾನೀತ ಇತಿ-ಜ್ಞೇ (ಕೃ.ವೃ.); ಚಿತ್ತಸ್ಯ ಜ್ಞೇ-ಚಿತ್ತಜ್ಞೇ (ಷ.ತ.). ೩.ಮಹೀಂ ಕ್ಷೀಯತೇ ಇತಿ-ಮಹೀಕ್ಷಿತ್(ಉಪ.ಸ.). ೪.ಅರ್ಧಯೋಃ ಅರ್ಧೌ-ಅರ್ಧಾರ್ಧೌ (ಷ.ತ.); ಅರ್ಧಾರ್ಧೌ ಚ ತೌ ಭಾಗೌ ಚ-ಅರ್ಧಾರ್ಧಭಾಗೌ (ವಿ.ಪೂ.ಕ); ತಾಭ್ಯಾಂ- ಅರ್ಧಾರ್ಧಭಾಗಾಭ್ಯಾಮ್.

ವ್ಯಾಕರಣವಿಶೇಷ. ೧. ಬಹುಜ್ಞಸ್ಯ, ಚಿತ್ತಜ್ಞೇ -೨೦ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು ನೋದಿ. ೨.ಪತ್ಯುಃ-ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ. ೩.ಮಹೀಕ್ಷಿತಃ-ಇಲ್ಲಿ ಕ್ಷಿತ್ ಎಂಬುದು ಕ್ಷಿ ಐಶ್ವರ್ಯೇ ಎಂಬ ಧಾತುವಿನಿಂದ ಬಂದಿದೆ ಎಂದು ಮಲ್ಲಿನಾಥವ್ಯಾಖ್ಯಾನ(೧-೧೧)ದಲ್ಲಿ; ಈ ಧಾತುವನ್ನು ಪರಸ್ಮೈ ಪದವಾಗಿಯೂ (೧-೧೧) ಆತ್ಮನೇಪದವಾಗಿಯೂ (೧-೧೫) ವ್ಯಾಖ್ಯಾನದಲ್ಲಿ ಪ್ರಯೋಗಮಾಡಿದೆ. ೪. ಅರ್ಧಾರ್ಧಭಾಗಾಭ್ಯಾಂ-ಮೇಲೆ ಕೊಟ್ಟಿರುವದು ಮಲ್ಲಿನಾಥವ್ಯಾಖ್ಯಾನಕ್ಕನುಸಾರವಾದ ವಿಗ್ರಹ; ಮೊದಲನೆಯ ಅರ್ಧ ಎಂಬ ಶಬ್ದಕ್ಕೆ ಎರಡರಲ್ಲಿ ಒಂದು ಸಮಭಾಗ (half) ಎಂದರ್ಥ, ಎರಡನೆಯ ಅರ್ಧ ಎಂಬ ಶಬ್ದಕ್ಕೆ ಸ್ವಲ್ಪ (part) ಎಂದರ್ಥ. ಸಮಭಾಗವೆಂದು ಅರ್ಥವಾದಾಗ ಅರ್ಧಶಬ್ದವು ನಪುಂಸಕ, ಒಂದಂಶವೆಂದು ಅರ್ಥವಾದರೆ ಪುಲ್ಲಿಂಗ. ೫.ಅಯೋಜಯತಾಂ (೧೦)-ಯುಜಿರ್‌ಯೋಗೇ (ಯುಜ್-ಹೊಂದು) ಎಂಬ ೭ನೆಯ ಗಣದ ಧಾತುವಿನ ಣಿಜನ್ತರೂಪ. ಲಙ್. ಪ್ರ.ದ್ವಿ.

ವಿಚಾರ. ಇಲ್ಲಿರುವ ಪಾಯಸವಿಭಾಗಕ್ರಮಕ್ಕೂ ರಾಮಾಯಣದಲ್ಲಿರುವದಕ್ಕೂ ಸರಿಯಾಗುವದಿಲ್ಲ. ಅಚ್ಚಾಗಿರುವ ರಾಮಾಯಣಪ್ರತಿಗಳಲ್ಲಿ ಕೌಸಲ್ಯೆಗೆ ಅರ್ಧವೂ ಕೈಕೇಯಿಗೆ ಎಂಟನೆಯಂಶವೂ ಸುಮಿತ್ರೆಗೆ ಎಂಟನೆಯ ಮೂರಂಶವೂ

ಬಂತೆಂದು ಅಭಿಪ್ರಾಯವಾಗುವ ಶ್ಲೋಕಗಳಿವೆ; ಬಾಲಕಾಂಡ ೬ನೆಯ ಸರ್ಗ ೨೭.-೨೮ನೆಯ ಶ್ಲೋಕಗಳನ್ನು ನೋಡಿ. ಬೇರೆ ಕೆಲವು ಕೈಪ್ರತಿಗಳಲ್ಲಿ:- "ಇತ್ಯುಕ್ತ್ವಾ ಪ್ರದದೌ ತಸ್ಯೈ ಹವಿಷಾರ್ಧಂ ನರಾಧಿಪಃ । ಸ್ವಯಮೇವ ಸಮಂ ಕೃತ್ವಾ ಭಾಗಂ ಭಾಗವತಾಂ ವರಃ ॥ ಅರ್ಧಾದರ್ಧಂ ದದೌ ಚಾಪಿ ಕೈಕೇಯ್ಯೈ ಸ ನರಾಧಿಪಃ । ಚತುರ್ಭಾಗಂ ದ್ವಿಧಾ ಕೃತ್ವಾ ಸುಮಿತ್ರಾಯೈ ದದೌ ತದಾ ॥ "-ಕೌಸಲ್ಯೆಗೆ ಅರ್ಧವನ್ನೂ ಕೈಕೇಯಿಗೆ ಉಳಿದ ಅರ್ಧದಲ್ಲಿ ಅರ್ಧವನ್ನೂ ಎಂದರೆ ಕಾಲುಪಾಲನ್ನೂ ಉಳಿದ ಕಾಲುಪಾಲನ್ನು ಎರಡು ಪಾಲುಮಾಡಿ ಸುಮಿತ್ರೆಗೂ ಕೊಟ್ಟನು ಎಂದಿದೆ. ಈ ಎರಡನೆಯ ರಾಮಾಯಣಪಾಠವನ್ನು ಮಲ್ಲಿನಾಥವ್ಯಾಖ್ಯಾನದಲ್ಲಿ ಅಂಗೀಕರಿಸಿದೆ. ಆದರೆ ಈ ಎರಡು ಪಾಠಕ್ಕೂ ಕವಿಯು ಹೇಳಿರುವದು ವಿರೋಧವಾಗಿದೆ. "ಕೌಸಲ್ಯೆಯೂ ಕೈಕೇಯಿಯೂ ತಮ್ಮ ತಮ್ಮ ಭಾಗದಲ್ಲಿ ಒಂದೊಂದಂಶವನ್ನು ಕೊಟ್ಟರು" ಎಂಬ ನರಸಿಂಹಪುರಾಣಾನುಸಾರವಾಗಿ ಕವಿಯು ವರ್ಣಿಸಿರುತ್ತಾನೆಂದು ಮಲ್ಲಿನಾಥವ್ಯಾಖ್ಯಾನದಲ್ಲಿ ಈ ವಿರೋಧಕ್ಕೆ ಸಮಾಧಾನವನ್ನು ಹೇಳಿರುತ್ತದೆ. ನಾಲ್ಕು ಜನ ಮಕ್ಕಳಿಗೂ ನಾಲ್ಕು ಸಮಾಂಶಗಳು ಬರುವಂತೆ ಕೌಸಲ್ಯೆಗೆ ಕಾಲುಪಾಲು, ಸುಮಿತ್ರೆಗೆ ಅರ್ಧ, ಕೈಕೇಯಿಗೆ ಕಾಲುಪಾಲು-ಹೀಗೆ ಪಾಯಸಾನ್ನವನ್ನು ಕವಿಯು ಹಂಚಿರುತ್ತಾನೆಂದೂ ಕಲ್ಪಿಸಬಹುದಾಗಿದೆ. ಈ ಕಲ್ಪನೆಯು ಅಧ್ಯಾತ್ಮರಾಮಾಯಣಕ್ಕೆ ಹೊಂದುತ್ತದೆ.

ಸಾ ಹಿ ಪ್ರಣಯವತ್ಯಾಸೀತ್ಸಪತ್ನ್ಯೋರುಭಯೋರಪಿ ।
ಭ್ರಮರೀ ವಾರಣಸ್ಯೇವ ಮದನಿಸ್ಯನ್ದರೇಖಯೋಃ ॥೫೭॥

ಅನ್ವಯ. [ಸಾ ಉಭಯೋಃ ಅಪಿ ಸಪತ್ನ್ಯೋಃ ಭ್ರಮರೀ ವಾರಣಸ್ಯ ಮದನಿಸ್ಯನ್ದರೇಖಯೋಃ ಇವ ಪ್ರಣಯವತೀ ಆಸೀತ್ ಹಿ.]

ಅರ್ಥ. ಸಾ-ಆ (ಸುಮಿತ್ರೆಯು) ಉಭಯೋಃ ಅಪಿ-ಇಬ್ಬರಾದ ಸಪತ್ನ್ಯೋಃ- ಸವತಿಯರಿಗೂ ಭ್ರಮರೀ-ಹೆಣ್ಣು ಜೇನುಹುಳವು ವಾರಣಸ್ಯ-ಆನೆಯ ಮದನಿಸ್ಯನ್ದರೇಖಯೋಃ-(ಮದ-ಮದದ ನಿಸ್ಯನ್ದ-ಪ್ರವಾಹದ ರೇಖಯೋರಿವ-ಗೆರೆಗಳಲ್ಲಿ ಹೇಗೋ ಹಾಗೆ) ಎರಡು ಮದಧಾರೆಗಳಲ್ಲಿ ಹೇಗೋ ಹಾಗೆ ಪ್ರಣಯವತೀ- ಪ್ರೇಮವುಳ್ಳವಳು ಆಸೀತ್ ಹಿ-ಆಗಿದ್ದಳಷ್ಟೆ.

ತಾತ್ಪರ್ಯ. ಹೆಣ್ಣುದುಂಬಿಯು ಆನೆಯ ಎರಡು ಕಡೆಗಳಲ್ಲಿಯೂ ಸುರಿಯುವ ಮದಧಾರೆಗಳಲ್ಲಿ ಸಮಾನಪ್ರೀತಿಯನ್ನು ಇಟ್ಟುಕೊಂಡಿರುವಂತೆ ಸುಮಿತ್ರೆಯು ಕೌಸಲ್ಯೆ, ಕೈಕೇಯಿ-ಇವರಿಬ್ಬರಲ್ಲಿಯೂ ಒಂದೇ ಸಮವಾದ ಪ್ರೀತಿ

ಯನ್ನು ಇಟ್ಟುಕೊಂಡಿದ್ದಳು.

ವಿಗ್ರಹವಾಕ್ಯಗಳು. ೧.ಪ್ರಣಯಃ ಅಸ್ಯಾಃ ಅಸ್ತೀತಿ-ಪ್ರಣಯವತೀ (ತ.ವೃ.). ೨.ಸಮಾನಃ ಪತಿಃ ಯಯೋಃ ತೌ-ಸಪತ್ನ್ಯೌ (ಷ.ಬ.); ತಯೋಃ-ಸಪತ್ನ್ಯೋಃ ೩.ಮದಸ್ಯ ನಿಸ್ಯನ್ದಃ-ಮದನಿಸ್ಯನ್ದಃ (ಷ.ತ.); ತಸ್ಯ-ಮದನಿಸ್ಯನ್ದಸ್ಯ; ಮದನಿಸ್ಯನ್ದಸ್ಯ ರೇಖೇ-ಮದನಿಸ್ಯನ್ದರೇಖೇ (ಷ.ತ); ತಯೋಃ-ಮದನಿಸ್ಯನ್ದರೇಖಯೋಃ.

ವ್ಯಾಕರಣವಿಶೇಷ. ೧.ಸಪತ್ನ್ಯೋಃ - ಯಜ್ಞದ ಫಲವನ್ನು ಅನುಭವಿಸುವವಳು ಎಂಬರ್ಥದಲ್ಲಿ ಪತಿಶಬ್ದದ ಸ್ತ್ರೀಲಿಂಗವು 'ಪತ್ನೀ' ಎಂದಾಗುವದು; ಸಮಾಸದಲ್ಲಿ 'ಪತಿ' 'ಪತ್ನೀ' ಎಂದು ಎರಡು ರೂಪಗಳೂ ಬರುವವು. ಉದಾಹರಣೆ: 'ದೃಢಪತ್ನೀ' ಅಥವಾ 'ದೃಢಪತಿಃ' ಸಮಾನ. ಏಕ, ವೀರ- ಮುಂತಾದ ಕೆಲವು ಶಬ್ದಗಳು ಪೂರ್ವಪದವಾಗಿರುವಾಗ ಮಾತ್ರ 'ಪತ್ನೀ' ಎಂದೇ ಆಗುವದು. ಸಮಾನಶಬ್ದಕ್ಕೆ ಈ ಸಂದರ್ಭದಲ್ಲಿ 'ಸ' ಎಂಬ ಆದೇಶವು ಬರುವದು. ೨.ಉಭಯೋಃ- ನಿತ್ಯದ್ವಿವಚನ. ೩.ಆಸೀತ್ (೯)-ಅಸಭುವಿ (ಅಸ್-ಇರು) ಎಂಬ ೨ನೆಯ ಗಣದ ಧಾತುವಿನ ಲಙ್, ಪ್ರ.ಪು.ಏ

ತಾಭಿರ್ಗರ್ಭಃ ಪ್ರಜಾಭೂತ್ಯೈ ದಧ್ರೇ ದೇವಾಂಶಸಂಭವಃ ।
ಸೌರೀಭಿರಿವ ನಾಡೀಭಿರಮೃತಾಖ್ಯಾಭಿರಮ್ಮಯಃ ॥೫೮॥

ಅನ್ವಯ. [ತಾಭಿಃ ಪ್ರಜಾಭೂತ್ಯೈ ದೇವಾಂಶಸಂಭವಃ ಗರ್ಭಃ ಸೌರೀಭಿಃ ಅಮೃತಾಖ್ಯಾಭಿಃ ನಾಡೀಭಿಃ ಅಮ್ಮಯಃ ಇವ ದಧ್ರೇ.]

ಅರ್ಥ. ತಾಭಿಃ-ಅವರಿಂದ ಪ್ರಜಾಭೂತ್ಯೈ-ಜನರ ಒಳ್ಳೆಯದಕ್ಕಾಗಿ ದೇವಾಂಶ ಸಂಭವಃ (ದೇವ-ದೇವನ ಅಂಶ-ಅಂಶವು ಸಂಭವಃ-ಕಾರಣವಾಗುಳ್ಳ) ವಿಷ್ಣುವಿನ ಅಂಶದಿಂದುಂಟಾಗಿರುವ ಗಭರ್ಃ-ಗರ್ಭವು ಸೌರೀಭಿಃ-ಸೂರ್ಯನ ಅಮೃತಾಖ್ಯಾಭಿಃ - ಅಮೃತವೆಂಬ ಹೆಸರುಳ್ಳ ನಾಡೀಭಿಃ-ಕಿರಣಗಳಿಂದ ಅಮ್ಮಯಃ-ನೀರಿನ ವಿಕಾರ ವಾದ (ಗರ್ಭಃ) ಇವ- (ಗರ್ಭದ)ಹಾಗೆ ದಧ್ರೇ-ಧರಿಸಲ್ಪಟ್ಟಿತು.

ತಾತ್ಪರ್ಯ. ಅಮೃತವೆಂಬ ಹೆಸರಿನ ಸೂರ್ಯಕಿರಣಗಳು ಜನಕ್ಕೆ ಅನುಕೂಲ ಪಡಿಸುವಂಥ ಜಲಮಯವಾದ ಗರ್ಭವನ್ನು ಧರಿಸುವಂತೆ ಆ ಮೂರು ಜನರೂ ಪರಮಾತ್ಮನ ಅಂಶದಿಂದುಂಟಾದ ಗರ್ಭವನ್ನು ಧರಿಸಿದರು.

ವಿಗ್ರಹವಾಕ್ಯಗಳು. ೧.ಪ್ರಜಾನಾಂ ಭೂತಿಃ-ಪ್ರಜಾಭೂತಿಃ (ಷ.ತ.); ತಸ್ಯೈ- ಪ್ರಜಾಭೂತ್ಯೈ. ೨.ದೇವಸ್ಯ ಅಂಶಃ- ದೇವಾಂಶಃ (ಷ.ತ.); ದೇವಾಂಶಃ ಸಂಭವಃ ಯಸ್ಯ ಸಃ-ದೇವಾಂಶಸಂಭವಃ (ಷ. ಬ.). ೩.ಸೂರ್ಯಸ್ಯ ಇಮಾಃ- ಸೌರ್ಯ್ಯಃ (ತ. ವೃ.) ತಾಭಿಃ-ಸೌರೀಭಿಃ. ೪. ಅಮೃತಾ ಇತಿ ಆಖ್ಯಾ ಯಾಸಾಂ ತಾಃ-ಅಮೃತಾಖ್ಯಾಃ (ಷ.ಬ.); ತಾಭಿಃ-ಅಮೃತಾಖ್ಯಾಭಿಃ ೫.ಅಪಾಂ ವಿಕಾರಃ-ಅಮ್ಮಯಃ. (ತ.ವೃ.).

ವ್ಯಾಕರಣವಿಶೇಷ. ೧.ಸೂರೀಭಿಃ-ಸೂರ್ಯ, ಅಗಸ್ತ್ಯ-ಈ ಶಬ್ದಗಳಿಗೆ 'ಈಯ' ಮತ್ತು ಸ್ತ್ರೀಲಿಂಗದ 'ಈ'- ಎಂಬ ಪ್ರತ್ಯಯಗಳು ಪರವಾದಾಗ ಯಕಾರವು ಲೋಪವಾಗುತ್ತದೆ; ಇಲ್ಲಿ 'ಈ' ಪ್ರತ್ಯಯವು ಬಂದಿರುತ್ತದೆ. ೨.ಅಮ್ಮಯಃ-ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ. (ಹೆಚ್ಚಾಗಿರುವದು) ವಿಕಾರ (ಅದರಿಂದಾಗಿರುವದು) ಎಂಬ ಎರಡು ಅರ್ಥಗಳುಂಟು; ಇಲ್ಲಿ ವಿಕಾರವೆಂಬ ಅರ್ಥ. ೩.ದಧ್ರೇ (೨೪)-ಧೃಞ್‌ಧಾರಣೇ (ಧೃ-ಧರಿಸು) ಎಂಬ ೧ನೆಯ ಗಣದ ಧಾತುವಿನ ಕರ್ಮಣಿ (passive) ಲಿಟ್, ಅ. ಪ್ರ. ಏ.)

ವಿಚಾರ. ಮಳೆ, ಹಿಮ-ಇವುಗಳನ್ನು ಬಿಡುವದಕ್ಕೆ ಸೂರ್ಯನ ಕಿರಣಗಳು-ಅನಂತವಾಗಿರುವವೆಂದೂ ಅವುಗಳಿಗೆ ಅಮೃತವೆಂದು ಹೆಸರೆಂದು ವರ್ಣಿಸುವದು ವಾಡಿಕೆ. ಸೂರ್ಯನ ಉಷ್ಣದಿಂದಲೆ ನೀರು ಆವಿಯಾಗಿ ಮಳೆಯಾಗುವದೆಂಬುದು ಪ್ರಸಿದ್ಧವು.

ಸಮಮಾಪನ್ನಸತ್ತ್ವಾಸ್ತಾ ರೇಜುರಾಪಾಣ್ಡುರತ್ವಿಷಃ ।
ಅನ್ತರ್ಗತಫಲಾರಮ್ಭಾಃ ಸಸ್ಯಾನಾಮಿವ ಸಮ್ಪದಃ ॥೫೯॥

ಅನ್ವಯ. [ಸಮಂ ಆಪನ್ನಸತ್ತ್ವಾಃ ಆಪಾಣ್ಡುರತ್ವಿಷಃ ತಾಃ ಅನ್ತರ್ಗತ ಫಲಾರಮ್ಭಾಃ ಸಸ್ಯಾನಾಂ ಸಂಪದಃ ಇವ ರೇಜುಃ]

ಅರ್ಥ. ಸಮಂ-ಒಂದೇ ಕಾಲದಲ್ಲಿ ಆಪನ್ನಸತ್ತ್ವಾಃ-(ಅಪನ್ನ-ಹೊಂದಲ್ಪಟ್ಟ ಸತ್ತ್ವಾಃ-ಪ್ರಾಣಿಗಳುಳ್ಳ) ಗರ್ಭಿಣಿಯರಾದ ಆಪಾಣ್ಡುರತ್ವಿಷಃ-(ಆಪಾಣ್ಡುರ-ಸ್ವಲ್ಪ ಬಿಳುಪಾದ ತ್ವಿಷಃ-ಕಾಂತಿಯುಳ್ಳ) ಬಿಳುಪು ಬಣ್ಣದ ತಾಃ-ಅವರು ಅನ್ತರ್ಗತಫಲಾ ರಮ್ಭಾಃ-(ಅನ್ತರ್ಗತ-ಒಳಗಿರುವ ಫಲ-ಫಲದ ಆರಂಭಾಃ-ಪ್ರಾರಂಭವುಳ್ಳ) ಫಲವಾಗದೆ ಇನ್ನೂ ಅವ್ಯಕ್ತವಾಗಿರುವ ಸಸ್ಯಾನಾಂ-ಪೈರುಗಳ ಸಂಪದ ಇವ-ಸಂ ಪತ್ತುಗಳ ಹಾಗೆ ರೇಜುಃ-ಹೊಳೆಯುತ್ತಿದ್ದರು.

ವಿಗ್ರಹವಾಕ್ಯಗಳು. ೧. ಆಪನ್ನಾಃ ಸತ್ತ್ವಾಃ ಯಾಭಿಃ ತಾಃ-ಆಪನ್ನ ಸತ್ತ್ವಾಃ (ತೃ.ಬ.). ೨. ಈಷತ್ ಪಾಣ್ಡುರಾ-ಆಪಾಣ್ಡುರಾ(ಸಾ.ಸ.); ಆಪಾಣ್ಡುರಾ ತ್ವಿಟ್ ಯಾಸಾಂ ತಾಃ-ಆಪಾಂಡುರತ್ವಿಷಃ (ಷ.ಬ.). ೩. ಫಲಾನಾಂ ಆರಮ್ಭಾಃ-ಫಲಾ ರಮ್ಭಾಃ (ಷ.ತ.); ಅನ್ತರ್ಗತಾಃ ಫಲಾರಮ್ಭಾಃ ಯಾಸಾಂ ತಾಃ-ಅನ್ತರ್ಗತಫಲಾ ರಂಭಾಃ (ಷ.ಬ.).

ವ್ಯಾಕರಣವಿಶೇಷ. ೧. ಸಮಂ-ಅವ್ಯಯ. ೨. ಆಪಾಣ್ಡುರಾ-ನಿತ್ಯಸಮಾಸ, ಸ್ವಪದ ವಿಗ್ರಹವಿಲ್ಲ. ಆಪಾಣ್ಡುರತ್ವಿಷಃ-ಷಕಾರಾನ್ತ ಸ್ತ್ರೀಲಿಂಗ (೦ತ್ವಿಟ್, ೦ತ್ವಿಷೌ, ೦ತ್ವಿಷಃ). ೩. ಆಪನ್ನ ಸತ್ತ್ವಾಃ-ಮೇಲೆ ಕೊಟ್ಟಿರುವ ವಿಗ್ರಹವು ಮಲ್ಲಿನಾಥವ್ಯಾಖ್ಯಾನುಸಾರವಾದದ್ದು. ಆಪನ್ನಾಃ ಸತ್ತ್ವಂ-ಆಪನ್ನಸ

ತ್ವಾಃ (ದ್ವಿ.ತ.)-ಎಂದೂ ಬಿಡಿಸಬಹುದು. 'ಪ್ರಾಪ್ತ' 'ಆಪನ್ನ' ಈ ಮಾತುಗಳು ದ್ವಿತೀಯೆಯೊಡನೆ ಸೇರಿ ತತ್ಪುರುಷವಾಗುವಾಗ ಸಮಾಸದಲ್ಲಿ ಪೂರ್ವಪದವಾಗಿ ಪ್ರಯೋಗವಾಗುವವು. ೪.ರೇಜುಃ(೨೨)-ರಾಜೃ ದೀಪ್ತೌ (ರಾಜ್-ಪ್ರಕಾಶಿಸು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಬ. ೫.ಸಂಪದಃ-ದಕಾರಾನ್ತ ಸ್ತ್ರೀಲಿಂಗ (ಸಂಪತ್, ಸಂಪದೌ, ಸಂಪದಃ)

ಗುಪ್ತಂ ದದೃಶುರಾತ್ಮಾನಂ ಸರ್ವಾಃ ಸ್ವಪ್ನೇಷು ವಾಮನೈಃ ।
ಜಲಜಾಸಿಗದಾಶಾರ್ಙ್ಗಚಕ್ರಲಾಞ್ಛಿತಮೂರ್ತಿಭಿಃ ॥೬೦॥

ಅನ್ವಯ. [ಸರ್ವಾಃ ಸ್ವಪ್ನೇಷು ಜಲಜಾಸಿಗದಾಶಾರ್ಙ್ಗಚಕ್ರಲಾಞ್ಛಿತ ಮೂರ್ತಿಭಿಃ ವಾಮನೈಃ ಗುಪ್ತಂ ಆತ್ಮಾನಂ ದದೃಶುಃ.]

ಅರ್ಥ. ಸರ್ವಾಃ - (ಅವರು) ಎಲ್ಲರೂ ಸ್ವಪ್ನೇಷು-ಕನಸುಗಳಲ್ಲಿ ಜಲಜಾಸಿಗದಾಶಾರ್ಙ್ಗಚಕ್ರಲಾಞ್ಛಿತಮೂರ್ತಿಭಿಃ- (ಜಲಜ-ಶಂಖ ಅಸಿ-ಕತ್ತಿ ಗದಾ-ಗದೆ ಶಾರ್ಙ್ಗ - ಶಾರ್ಙ್ಗಧನುಸ್ಸು ಚಕ್ರ-ಚಕ್ರ ಇವುಗಳಿಂದ ಲಾಞ್ಛಿತ- ಗುರುತುಮಾಡಲ್ಪಟ್ಟ ಮೂರ್ತಿಭಿಃ-ಶರೀರವುಳ್ಳ)ಶಂಖಚಕ್ರಗದಾಪದ್ಮಗಳ ಚಿಹ್ನೆಯುಳ್ಳ ವ್ಯೆಯಿನ ವಾಮನೈಃ- ಗುಜ್ಜಾರಿಗಳಿಂದ ಗುಪ್ತಂ-ಕಾಪಾಡಲ್ಪಟ್ಟಿದ್ದ ಆತ್ಮಾನಂ-ತಮ್ಮ ರೂಪವನ್ನು ದದೃಶುಃ-ಕಂಡರು.

ತಾತ್ಪರ್ಯ. ಅವರಿಗೆಲ್ಲ ಶಂಖಚಕ್ರಾದಿಗಳ ಚಿಹ್ನೆಯುಳ್ಳ ಗುಜ್ಜಾರಿಗಳು ತಮಗೆ ಕಾವಲಿರುವಂತೆ ಕನಸುಗಳಾಗುತ್ತಿದ್ದವು.

ವಿಗ್ರಹವಾಕ್ಯಗಳು. ೧.ಜಲಜಶ್ಚ ಅಸಿಶ್ಚ ಗದಾ ಚ ಶಾರ್ಙ್ಗಂ ಚ ಚಕ್ರಂ ಚ-ಜಲಜಾಸಿಗದಾಶಾರ್ಙ್ಗಚಕ್ರಾಣಿ (ದ್ವ.ಸ.);ತೈಃ- ಜಲಜಾಸಿಗದಾಶಾರ್ಙ್ಗಚಕ್ರೈಃ; ಜಲಜಾಸಿಗದಾಶಾರ್ಙ್ಗಚಕ್ರೈಃ ಲಾಞ್ಛಿತಾಃ-ಜಲಜಾಸಿ ..... ಚಕ್ರಲಾಞ್ಛಿತಾಃ (ತೃ.ತ.); ಜಲಜಾಸಿ... ಚಕ್ರಲಾಞ್ಛಿತಾಃ ಮೂರ್ತಯಃ ಯೇಷಾಂ ತೇ-ಜಲಜಾಸಿ ಲಾಞ್ಛಿತಮೂರ್ತಯಃ (ಷ.ಬ.); ತೈಃ-ಜಲಜಾಸಿಗದಾಶಾರ್ಙ್ಗಚಕ್ರಲಾಞ್ಛಿತ ಮೂರ್ತಿಭಿಃ.

ವ್ಯಾಕರಣವಿಶೇಷ. ೧.ಆತ್ಮಾನಂ-ತಮ್ಮನ್ನು ಎಂಬರ್ಥದ ಸರ್ವನಾಮ. ಇದು ತಾನು ಎಂಬರ್ಥದ ಸರ್ವನಾಮ (reflexive pronoun)ಆದಾಗ ಏಕವಚನದಲ್ಲಿ ಮಾತ್ರವೆ ಪ್ರಯೋಗವಾಗುವದು ೨.ಜಲಜಾಸಿ.... ಮೂರ್ತಿಭಿಃ ವಾಮನೈಃ-ಎಂಬುದರ ವಿಶೇಷಣ, ಪುಲ್ಲಿಂಗ. ೩.ದದೃಶುಃ(೧೯)-ದೃಶಿರ್ಪ್ರೇಕ್ಷಣೇ (ದೃಶ್ ಪಶ್ಯ-ನೋಡು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಬ.

ವಿಚಾರ. ೧.ವಿಷ್ಣುವು ಅವರ ಗರ್ಭದಲ್ಲಿದಾನೆಂಬುದನ್ನು ಸೂಚಿಸುವದಕ್ಕೆ

ವಿಷ್ಣುಸಾರೂಪ್ಯವನ್ನು ಹೊಂದಿದ ಅಂಗರಕ್ಷಕರು (body-guards) ಕನಸಿನಲ್ಲಿ ಅವರಿಗೆ ಕಾಣಿಸಿಕೊಳ್ಳುತ್ತಿದ್ದರೆಂದು ಭಾವ. ೨. ವಿಷ್ಣುವಿನ ಆಯುಧಗಳ ಹೆಸರುಗಳು:-(೧) ಶಂಖ-ಪಾಂಚಜನ್ಯ, (೨) ಕತ್ತಿ-ನಂದಕ, (೩) ಗದೆ-ಕೌಮೋದಕಿ, (೪) ಧನುಸ್ಸು-ಶಾರ್ಙ್ಗ, (೫) ಚಕ್ರ-ಸುದರ್ಶನ.

ಹೇಮಪಕ್ಷಪ್ರಭಾಜಾಲಂ ಗಗನೇ ಚ ವಿತನ್ವತಾ ।
ಉಹ್ಯನ್ತೇ ಸ್ಮ ಸುಪರ್ಣೇನ ವೇಗಾಕೃಷ್ಟಪಯೋಮುಚಾ ॥೬೧॥

ಅನ್ವಯ. [(ಕಿಂ) ಚ ಹೇಮಪಕ್ಷಪ್ರಭಾಜಾಲಂ ವಿತನ್ವತಾ ವೇಗಾಕೃಷ್ಟ ಪಯೋಮುಚಾ ಸುಪರ್ಣೇನ ಗಗನೇ ಉಹ್ಯನ್ತೇ ಸ್ಮ.]

ಅರ್ಥ. ಚ-ಮತ್ತು ಹೇಮಪಕ್ಷಪ್ರಭಾಜಾಲಂ (ಹೇಮ-ಚಿನ್ನದ ಪಕ್ಷ-ರೆಕ್ಕೆಗಳ ಪ್ರಭಾ-ಕಾಂತಿಯ ಜಾಲಂ- ಸಮೂಹವನ್ನು) ಚಿನ್ನದ ರೆಕ್ಕೆಗಳ ದೊಡ್ಡ ಬೆಳಕನ್ನು ವಿತನ್ವತಾ-ಹರಡುತ್ತಿರುವ ವೇಗಾಕೃಷ್ಟಪಯೋಮುಚಾ- (ವೇಗ-ವೇಗದಿಂದ ಆಕೃಷ್ಟ-ಎಳೆಯಲ್ಪಟ್ಟ ಪಯೋಮುಚಾ-ಮೋಡಗಳುಳ್ಳ) ವೇಗದಿಂದ ಮೋಡಗಳನ್ನೂ ಕೊಚ್ಚಿಕೊಂಡು ಹೋಗುತ್ತಿರುವ ಸುಪರ್ಣೇನ-ಗರುಡನಿಂದ ಗಗನೇ-ಆಕಾಶದಲ್ಲಿ ಉಹ್ಯನ್ತೇ ಸ್ಮ-ಹೊತ್ತುಕೊಂಡು ಹೋಗಲ್ಪಡುವವರಾಗುತ್ತಿದ್ದರು.

ವಿಗ್ರಹವಾಕ್ಯಗಳು. ೧. ಹೇಮ್ನಃ ಪಕ್ಷೌ-ಹೇಮಪಕ್ಷೌ (ಷ.ತ.); ತಯೋಃ - ಹೇಮಪಕ್ಷಯೋಃ; ಹೇಮಪಕ್ಷಯೋಃ ಪ್ರಭಾಃ-ಹೇಮಪಕ್ಷಪ್ರಭಾಃ(ಷ.ತ.); ತಾಸಾಂ - ಹೇಮಪಕ್ಷಪ್ರಭಾಣಾಂ; ಹೇಮಪಕ್ಷಪ್ರಭಾಣಾಂ ಜಾಲಂ-ಹೇಮಪಕ್ಷಪ್ರಭಾಜಾಲಮ್ (ಷ.ತ.). ೨. ವಿತನೋತೀತಿ- ವಿತನ್ವನ್ (ತ.ವ್ಯ.); ತೇನ ವಿತನ್ವತಾ. ೩. ವೇಗೇನ ಆಕೃಷ್ಟಾಃ-ವೇಗಾಕೃಷ್ಟಾಃ (ತೃ.ತ.); ವೇಗಾಕೃಷ್ಟಾಃ ಪಯೋಮುಚಃ ಯೇನ ಸಃ-ವೇಗಾಕೃಷ್ಟಪಯೋಮುಕ್(ತೃ.ಬ.); ತೇನ - ವೇಗಾಕೃಷ್ಟಪಯೋಮುಚಾ.

ವ್ಯಾಕರಣವಿಶೇಷ. ೧.ಚ-ಇದಲ್ಲದೆ (moreover) ಎಂಬರ್ಥದ ಅವ್ಯಯ; ವಾಕ್ಯದ ಆರಂಭದಲ್ಲಿ ಇದನ್ನು ಪ್ರಯೋಗಮಾಡುವದಿಲ್ಲ. ೨.ವಿತನ್ವತಾ-ತಕಾರಾನ್ತ ಪುಲ್ಲಿಂಗ; (ವಿತನ್ವನ್, ವಿತನ್ವನ್ತೌ, ವಿತನ್ವನ್ತಃ) ೩.ಉಹ್ಯನ್ತೇ ಸ್ಮ (೩)-ವಹ-ಪ್ರಾಪಣೇ (ವಹ್-ಹೊರು) ಎಂಬ ೧ನೆಯ ಗಣದ ಧಾತುವಿನ ಕರ್ಮಣಿ(passive) ಲಟ್. ಆ. ಪ್ರ. ಬ; 'ಸ್ಮ' ಎಂಬ ಅವ್ಯಯವು ಸೇರಿದ್ದರೆ ಭೂತಾರ್ಥವನ್ನು ಹೇಳುವದಕ್ಕೆ ಲಟ್ (ವರ್ತಮಾನ) ರೂಪವನ್ನುಪಯೋಗಿಸುತ್ತಾರೆ.

ವಿಚಾರ. ಗರುಡನು ವಿಷ್ಣುವಿನ ವಾಹನವಾದ್ದರಿಂದ ಅವರ ಗರ್ಭದಲ್ಲಿರುವ ವಿಷ್ಣುವಿನ ಸೇವೆಗೆ ನಿಂತನೆಂಬುದನ್ನು ಈ ಕನಸು ಸೂಚಿಸಿತು.

ಬಿಭ್ರತ್ಯಾ ಕೌಸ್ತುಭನ್ಯಾಸಂ ಸ್ತನಾನ್ತರವಿಲಮ್ಬಿನಮ್ ।
ಪರ್ಯುಪಾಸ್ಯನ್ತ ಲಕ್ಷ್ಮ್ಯಾ ಚ ಪದ್ಮವ್ಯಜನಹಸ್ತಯಾ ॥೬೨॥

ಅನ್ವಯ. [(ಕಿಂ) ಚ ಸ್ತನಾನ್ತರವಿಲಮ್ಬಿನಂ ಕೌಸ್ತುಭನ್ಯಾಸಂ ಬಿಭ್ರತ್ಯಾ ಪದ್ಮವ್ಯಜನಹಸ್ತಯಾ ಲಕ್ಷ್ಮ್ಯಾ ಪರ್ಯುಪಾಸ್ಯನ್ತ.]

ಅರ್ಥ. ಚ-ಮತ್ತು ಸ್ತನಾನ್ತರವಿಲಮ್ಬಿನಂ (ಸ್ತನಾನ್ತರ-ಸ್ತನಗಳ ನಡುವೆ ವಿಲಮ್ಬಿನಂ-ಜೋಲಾಡುತ್ತಿರುವ) ಕೊರಳಲ್ಲಿ ಜೋತು ಬಿದ್ದಿರುವ ಕೌಸ್ತುಭನ್ಯಾಸಂ - ಕೌಸ್ತುಭವೆಂಬ (ವಿಷ್ಣುವು) ಕೊಟ್ಟಿರುವ ಒಡವೆಯನ್ನು ಬಿಭ್ರತ್ಯಾ- ಧರಿಸಿರುವ ಳಾಗಿಯೂ ಪದ್ಮವ್ಯಜನ ಹಸ್ತಯಾ-(ಪದ್ಮ-ಕಮಲವೆಂಬ ವ್ಯಜನ-ಬೀಸಣಿಗೆಯು ಹಸ್ತಯಾ-ಕೈಯಲ್ಲಿರುವ) ಕೈಯಲ್ಲಿ ಕಮಲವೆಂಬ ಬೀಸಣಿಗೆಯನ್ನು ಹಿಡಿದಿರುವವ ಳಾಗಿಯೂ ಇರುವ ಲಕ್ಷ್ಮ್ಯಾ-ಲಕ್ಷ್ಮಿಯಿಂದ ಪರ್ಯುಪಾಸ್ಯನ್ತ- ಸೇವಿಸಲ್ಪಟ್ಟರು.

ತಾತ್ಪರ್ಯ. ವಿಷ್ಣುವು ಹಾಕಿಕೊಂಡಿರೆಂದು ಕೊಟ್ಟಿರುವ ಕೌಸ್ತುಭಮಣಿ ಯನ್ನು ಕೊರಳಿನಲ್ಲಿ ಧರಿಸಿಕೊಂಡು ಕೈಯಲ್ಲಿ ಲೀಲಾಕಮಲವನ್ನು ಅಲ್ಲಾಡಿಸುತ್ತಾ ಲಕ್ಷ್ಮಿಯು ಅವರನ್ನು ಕನಸಿನಲ್ಲಿ ಸೇವಿಸುತ್ತಿದ್ದಳು.

ವಿಗ್ರಹವಾಕ್ಯಗಳು. ೧.ಕೌಸ್ತುಭ ಏವ ನ್ಯಾಸಃ-ಕೌಸ್ತುಭನ್ಯಾಸಃ (ಅ.ಪೂ.ಕ.); ತಂ-ಕೌಸ್ತುಭನ್ಯಾಸಮ್. ೨.ಸ್ತನಯೋಃ ಅನ್ತರಂ- ಸ್ತನಾನ್ತರಮ್ (ಷ.ತ.); ತಸ್ಮಿನ್ ಸ್ತನಾನ್ತರೇ; ಸ್ತನಾನ್ತರೇ ವಿಲಮ್ಬತ ಇತಿ-ಸ್ತನಾನ್ತರವಿಲಮ್ಬೀ-(ಉಪ.ಸ.); ತಂ - ಸ್ತನಾನ್ತರವಿಲಮ್ಬಿನಮ್. ೩.ನ್ಯಸ್ಯತ ಇತಿ- ನ್ಯಾಸಃ (ಕೃ.ವೃ.); ಕೌಸ್ತುಭ ಏವ ನ್ಯಾಸಃ- ಕೌಸ್ತುಭನ್ಯಾಸಃ(ಅ.ಪೂ.ಕ.); ತಂ-ಕೌಸ್ತುಭನ್ಯಾಸಮ್. ೪.ಪದ್ಮಂ ಏವ ವ್ಯಜನಂ-ಪದ್ಮವ್ಯಜನಮ್ (ಅ.ಪೂ.ಕ.); ಪದ್ಮವ್ಯಜನಂ ಹಸ್ತೇ ಯಸ್ಯಾಃ ಸಾ - ಪದ್ಮವ್ಯಜನಹಸ್ತಾ (ಷ.ಬ.).

ವ್ಯಾಕರಣವಿಶೇಷ. ೧. ಬಿಭ್ರತ್ಯಾ-ಈಕಾರಾನ್ತ ಸ್ತ್ರೀಲಿಂಗ; ಪುಲ್ಲಿಂಗದಲ್ಲಿ ಬಿಭ್ರತ್ ಎಂಬ ರೂಪವಾಗುವದು; ತಕಾರಾನ್ತಶಬ್ದಗಳು ಸ್ತ್ರೀಲಿಂಗದಲ್ಲಿ ಬಹುಮಟ್ಟಿಗೆ ಈಕಾರಾನ್ತವಾಗುವವು. ೨.ಲಕ್ಷ್ಮ್ಯಾ-ಈಕಾರಾನ್ತ; (ಲಕ್ಷ್ಮೀಃ, ಲಕ್ಷ್ಮ್ಯಾ, ಲಕ್ಷ್ಮ್ಯಃ; ಮಿಕ್ಕದ್ದು ಗೌರೀಶಬ್ದದಂತೆ) ೩.ಪರ್ಯುಪಾಸ್ಯನ್ತ(೧೨)-ಆಸ್ ಉಪವೇಶನೇ (ಆಸ್-ಕೂತುಕೋ)ಎಂಬ ೨ನೆಯ ಗಣದ ಧಾತುವಿನ ಕರ್ಮಣಿ (passive) ಲಙ್, ಆ. ಪ್ರ. ಬ; ಪರಿ, ಉಪ-ಎಂಬ ಉಪಸರ್ಗಗಳು ಸೇರಿ ಸೇವೆಮಾಡು ಎಂಬ ಅರ್ಥವಾಗಿದೆ.

ವಿಚಾರ. ೧.ಕೌಸ್ತುಭವೆಂಬುದು ವಿಷ್ಣುವಿನ ಕೊರಳಲ್ಲಿರುವ ರತ್ನವು. ಅದನ್ನು ಹಾಕಿಕೊಂಡಿರೆಂದು ವಿಷ್ಣುವು ಲಕ್ಷ್ಮಿಯಲ್ಲಿ ನ್ಯಾಸವಾಗಿ(deposit) ಕೊಟ್ಟಿದ್ದನೆಂದು ಇಲ್ಲಿ ವರ್ಣಿಸಿರುತ್ತದೆ. ೨.ಲಕ್ಷ್ಮಿಯು ಕಮಲದಲ್ಲಿ ಹುಟ್ಟಿದವಳೆಂದೂ

ಕಮಲವನ್ನು ಕೈಯಲ್ಲಿ ಹಿಡಿದಿರುವಳೆಂದೂ ರೂಢಿಯಾಗಿ ವರ್ಣಿಸುವರು.

ಕೃತಾಭಿಷೇಕೈರ್ದಿವ್ಯಾಯಾಂ ತ್ರಿಸ್ರೋತಸಿ ಚ ಸಪ್ತಭಿಃ ।
ಬ್ರಹ್ಮರ್ಷಿಭಿಃ ಪರಂ ಬ್ರಹ್ಮ ಗೃಣದ್ಭಿರುಪತಸ್ಥಿರೇ ॥೬೩॥

ಅನ್ವಯ. [(ಕಿಂ) ಚ ದಿವ್ಯಾಯಾಂ ತ್ರಿಸ್ರೋತಸಿ ಕೃತಾಭಿಷೇಕೈಃ ಪರಂ ಬ್ರಹ್ಮ ಗೃಣದ್ಭಿಃ ಸಪ್ತಭಿಃ ಬ್ರಹ್ಮರ್ಷಿಭಿಃ ಉಪತಸ್ಥಿರೇ.]

ಅರ್ಥ. ಚ-ಮತ್ತು ದಿವ್ಯಾಯಾಂ-ಆಕಾಶದ ತ್ರಿಸ್ರೋತಸಿ-ಗಂಗೆಯಲ್ಲಿ ಕೃತಾಭಿಷೇಕೈಃ-(ಕೃತ-ಮಾಡಲ್ಪಟ್ಟ ಅಭಿಷೇಕೈಃ-ಸ್ನಾನವುಳ್ಳ) ಸ್ನಾನಮಾಡಿದ ಪರಂ - ಹೆಚ್ಚಿನ ಬ್ರಹ್ಮ-ವೇದವನ್ನು ಗೃಣದ್ಭಿಃ-ಪಠಿಸುತ್ತಿರುವ ಸಪ್ತಭಿಃ-ಏಳು ಜನ ಬ್ರಹ್ಮರ್ಷಿಭಿಃ - ಬ್ರಹ್ಮರ್ಷಿಗಳಿಂದ ಉಪತಸ್ಥಿರೇ-ಸೇವಿಸಲ್ಪಟ್ಟರು.

ವಿಗ್ರಹವಾಕ್ಯಗಳು. ೧. ಕೃತಃ ಅಭಿಷೇಕಃ ಯೈಃ ತೇ-ಕೃತಾಭಿಷೇಕಾಃ (ತ್ರ. ಬ.); ತೈಃ-ಕೃತಾಭಿಷೇಕೈಃ. ೨. ದಿವಿ ಭವಾ-ದಿವ್ಯಾ (ತ.ವ್ಯ.). ೩. ತ್ರೀಣಿ ಸ್ರೋತಾಂಸಿ ಯಸ್ಯಾಃ ಸಾ-ತ್ರಿಸ್ರೋತಾಃ (ಷ. ಬ.); ತಸ್ಯಾಂ-ತ್ರಿಸ್ರೋತಸಿ. ೪. ಬ್ರಹ್ಮಣೋ ಋಷಯಃ-ಬ್ರಹ್ಮರ್ಷಯಃ (ಷ. ತ.); ತೈಃ-ಬ್ರಹ್ಮರ್ಷಿಭಿಃ.

ವ್ಯಾಕರಣವಿಶೇಷ. ೧.ತ್ರಿಸ್ರೋತಸಿ-ಸಕಾರಾನ್ತ. ಸ್ತ್ರೀಲಿಂಗ; (ತ್ರಿಸ್ರೋತಾಃ, ತ್ರಿಸ್ರೋತಸೌ, ತ್ರಿಸ್ರೋತಸಃ). ೨. ಬ್ರಹ್ಮ-ನಕಾರಾನ್ತ ನಪುಂಸಕ; (ಬ್ರಹ್ಮ, ಬ್ರಹ್ಮಣೀ, ಬ್ರಹ್ಮಾಣಿ). ೩.ಉಪತಸ್ಥಿರೇ(೨೪)-ಷ್ಠಾ ಗತಿನಿವೃತ್ತೌ(ಸ್ಥಾ-ನಿಲ್ಲು) ಎಂಬ ೧ನೆಯ ಗಣದ ಅಕರ್ಮಕ (intransitive) ಧಾತುವಿಗೆ ಉಪ ಎಂಬ ಉಪಸರ್ಗವು ಸೇರಿ ಮಂತ್ರದಿಂದ ಸ್ತೋತ್ರಮಾಡು ಎಂಬ ಸಕರ್ಮಕ (transitive) ಅರ್ಥವಾಗಿದೆ. ಈ ಅರ್ಥದಲ್ಲಿ ಸ್ಥಾ ಧಾತುವು ಯಾವಾಗಲೂ ಆತ್ಮನೇಪದ. ಕರ್ಮಣಿ (passive) ಲಿಟ್.ಅ. ಪ್ರ. ಬ.

ವಿಚಾರ. ೧.ಇಲ್ಲಿ ಹೇಳಿರುವ ಏಳು ಜನ ಬ್ರಹ್ಮರ್ಷಿಗಳು ಯಾರೆಂಬ ವಿಷಯದಲ್ಲಿ ಮತಭೇಧಗಳಿವೆ. ಕಶ್ಯಪನೇ ಮುಂತಾದವರೆಂದು ಮಲ್ಲಿನಾಥ ವ್ಯಾಖ್ಯಾನದಲ್ಲಿದೆ:-ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರಸ್ತು ಗೌತಮಃ । ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸಮೃತಾಃ ॥ ಇವರು ಕಶ್ಯಪಾದಿಋಷಿಗಳು. ಈ ಸರ್ಗದ ೧೬ನೆಯ ಶ್ಲೋಕದ ವಿಚಾರದಲ್ಲಿ ಹೇಳಿರುವ ಭೃಗು, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ- ಇವರೇ ಆಗಿದ್ದರೂ ಆಗಿರಬಹುದು. ಕುಮಾರಸಂಭವದಲ್ಲಿ ಕವಿಯು ಬರೆದಿರುವ ಸಪ್ತರ್ಷಿಗಳಲ್ಲಿ 'ಅಂಗಿರಸ್ಸು' ಎಂಬಾತನು ಒಬ್ಬನಾಗಿದ್ದಾನೆಂದು ತಿಳಿದುಬರುವದು. (ಕು.ಸಂ. ೬-೬೫ನೆಯ ಶ್ಲೋಕವನ್ನು ನೋಡಿ.). ಆ ಋಷಿಗಳನ್ನೆ ಇಲ್ಲಿ ಇಟ್ಟುಕೊಳ್ಳುವದಾದರೆ ಮರೀಚಿ,

ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ-ಎಂಬ ಏಳು ಜನಗಳನ್ನು ಇಟ್ಟುಕೊಳ್ಳಬೇಕು. ಇವರನ್ನು ಮಹಾಭಾರತದಲ್ಲಿಯೂ ಹೇಳಿದೆ. ಒಬ್ಬ ವ್ಯಾಖ್ಯಾನಕಾರರೂ ಈ ಏಳು ಜನರನ್ನು ಕೊಟ್ಟಿರುತ್ತಾರೆ. ೨.ಬ್ರಹ್ಮರ್ಷಿಗಳೆಂದರೆ:-ಬ್ರಹ್ಮ (ವೇದ) ವನ್ನು ಮೊದಲು ಹೇಳಿಕೊಟ್ಟ ಸಂಪ್ರದಾಯ ಪ್ರವರ್ತಕರು. ಅಥವಾ ಸಪ್ತರ್ಷಿಗಳಿಗೆ ಸಪ್ತಬ್ರಹ್ಮರೆಂದೂ ಹೆಸರುಂಟು. ಆದ್ದರಿಂದ ಬ್ರಹ್ಮರಾದ ಋಷಿಗಳು ಎಂದೂ ಅರ್ಥಮಾಡಬಹುದು. ಆಗ 'ಬ್ರಹ್ಮಾಣಶ್ಚ ತೇ ಋಷಯಶ್ಚ-ಬ್ರಹ್ಮರ್ಷಯಃ' - ಎಂದು ವಿಗ್ರಹಬಿಡಿಸಬೇಕಾಗುವದು. 'ಮಹರ್ಷಯಃ- ಎಂದು ಪಾಠಾಂತರವುಂಟು. ಆಗ- 'ಭೃಗುರ್ನಭೋ ವಿವಸ್ವಾಂಶ್ಚ ಸುಧಾಮಾ ವಿರಜಸ್ತಥಾ । ಅತ್ರಿನಾಮಾ ಸಹಿಷ್ಣುಶ್ಚ ಸಪ್ತೈತೇ ತು ಮಹರ್ಷಯಃ ॥ '- ಎಂಬ ಶ್ಲೋಕದಲ್ಲಿ ಹೇಳಿರುವ ಋಷಿಗಳನ್ನು ಇಟ್ಟುಕೊಳ್ಳಬೇಕು. ೩. ಪರಬ್ರಹ್ಮವೆಂದರೆ ವೇದವೆಂದು ಮಲ್ಲಿನಾಥವ್ಯಾಖ್ಯಾನಾನುಸಾರವಾಗಿ ಅರ್ಥವನ್ನು ಕೊಟ್ಟಿರುತ್ತದೆ. ಪರಮಾತ್ಮನೆಂದೂ ಅರ್ಥಮಾಡಬಹುದು.

ತಾಭ್ಯಸ್ತಥಾವಿಧಾನ್ಸ್ವಪ್ನಾಞ್ಶ್ರುತ್ವಾ ಪ್ರೀತೋ ಹಿ ಪಾರ್ಥಿವಃ ।
ಮೇನೇ ಪರಾರ್ಧ್ಯಮಾತ್ಮಾನಂ ಗುರುತ್ವೇನ ಜಗದ್ಗುರೋಃ ॥೬೪॥

ಅನ್ವಯ. [ಪಾರ್ಥಿವಃ ತಾಭ್ಯಃ ತಥಾವಿಧಾನ್ ಸ್ವಪ್ನಾನ್ ಶ್ರುತ್ವಾ ಪ್ರೀತಃ ಆತ್ಮಾನಂ ಜಗದ್ಗುರೋಃ ಗುರುತ್ವೇನ ಪರಾರ್ಧ್ಯಂ ಮೇನೇ ಹಿ.]

ಅರ್ಥ. ಪಾರ್ಥಿವಃ-ರಾಜನು ತಾಭ್ಯಃ-ಅವರ ಕಡೆಯಿಂದ ತಥಾವಿಧಾನ್-ಆ ಬಗೆಯಾದ ಸ್ವಪ್ನಾನ್-ಕನಸುಗಳನ್ನು ಶ್ರುತ್ವಾ-ಕೇಳಿ ಪ್ರೀತಃ-ಸಂತೋಷಪಟ್ಟವನಾಗಿ ಆತ್ಮಾನಂ-ತನ್ನನ್ನು ಜಗದ್ಗುರೋಃ-ಜಗತ್ತಿನ ತಂದೆಯಾದ (ವಿಷ್ಣುವಿಗೆ) ಗುರುತ್ವೇನ - ತಂದೆಯಾಗಿರೋಣದರಿಂದ ಪರಾರ್ಧ್ಯಂ-ಉತ್ತಮಸ್ಥಾನದಲ್ಲಿರುವವನನ್ನಾಗಿ ಮೇನೇ ಹಿ-ನಿಜವಾಗಿ ತಿಳಿದುಕೊಂಡನು.

ವಿಗ್ರಹವಾಕ್ಯಗಳು. ೧.ತಥಾ ವಿಧಾಃ ಯೇಷಾಂ ತೇ-ತಥಾವಿಧಾಃ (ಷ.ಬ.); ತಾನ್-ತಥಾವಿಧಾನ್. ೨.ಪರಂ ಚ ತತ್ ಅರ್ಧಂ ಚ- ಪರಾರ್ಧಂ (ವಿ.ಪೂ.ಕ); ತಸ್ಮಿನ್-ಪರಾರ್ಧೇ; ಪರಾರ್ಧೇ ಭವಃ-ಪರಾರ್ಧ್ಯಃ (ತ.ವೃ); ತಂ-ಪರಾರ್ಧ್ಯಮ್. ೩.ಗುರೋರ್ಭಾವಃ-ಗುರುತ್ವಮ್ (ತ.ವೃ.); ತೇನ-ಗುರುತ್ವೇನ ೪. ಜಗತೋ ಗುರುಃ-ಜಗದ್ಗುರುಃ (ಷ.ತ.); ತಸ್ಯ-ಜಗದ್ಗುರೋಃ.

ವ್ಯಾಕರಣವಿಶೇಷ. ೧.ತಾಭ್ಯಃ-ಯಾರು ಹೇಳುವದನ್ನು ಕೇಳುತ್ತೇವೋ ಅವರ ಹೆಸರಿಗೆ ಪಂಚಮಿಯು ಬರುವದು. ೨.ಮೇನೇ(೨೪)- ಮನು ಅವಬೋಧೇ(ಮನ್-ಯೋಚಿಸು) ಎಂಬ ಆನೆಯ

ಗಣದ ಧಾತುವಿನ ಲಿಟ್, ಆ.ಪ್ರ.ಏ.

ವಿಭಕ್ತಾತ್ಮಾ ವಿಭುಸ್ತಾಸಾಮೇಕಃ ಕುಕ್ಷಿಷ್ವನೇಕಧಾ ।
ಉವಾಸ ಪ್ರತಿಮಾಚನ್ದ್ರಃ ಪ್ರಸನ್ನಾನಾಮಪಾಮಿವ ॥೬೫॥

ಅನ್ವಯ. [ಏಕಃ ವಿಭುಃ ತಾಸಾಂ ಕುಕ್ಷಿಷು ಪ್ರಸನ್ನಾನಾಂ ಅಪಾಂ (ಕುಕ್ಷಿಷು) ಪ್ರತಿಮಾಚನ್ದ್ರಃ ಇವ ಅನೇಕಧಾ ವಿಭಕ್ತಾತ್ಮಾ ಉವಾಸ.]

ಅರ್ಥ. ಏಕಃ-ಒಬ್ಬನಾದ ವಿಭುಃ-ವಿಷ್ಣುವು ತಾಸಾಂ-ಅವರ ಕುಕ್ಷಿಷು-ಗರ್ಭಗಳಲ್ಲಿ ಪ್ರಸನ್ನಾನಾಂ-ನಿರ್ಮಲಗಳಾದ ಅಪಾಂ-ನೀರುಗಳ (ಕುಕ್ಷಿಷು-ಹೊಟ್ಟೆಗಳಲ್ಲಿ) ಪ್ರತಿಮಾಚನ್ದ್ರಃ ಇವ-ಪ್ರತಿಬಿಂಬರೂಪನಾದ ಚಂದ್ರನು ಹೇಗೋ ಹಾಗೆ ಅನೇಕಧಾ - ನಾನಾರೂಪವಾಗಿ ವಿಭಕ್ತಾತ್ಮಾ-(ವಿಭಕ್ತ-ಬೇರ್ಪಡಿಸಲ್ಪಟ್ಟ ಆತ್ಮಾ-ಸ್ವರೂಪವುಳ್ಳವನಾಗಿ) ಬೇರೆ ಬೇರೆ ರೂಪದಲ್ಲಿ ಉವಾಸ-ವಾಸಮಾಡಿದನು.

ವಿಗ್ರಹವಾಕ್ಯಗಳು. ೧.ವಿಭಕ್ತಃ ಆತ್ಮಾ ಯಸ್ಯ ಸಃ-ವಿಭಕ್ತಾತ್ಮಾ (ಷ.ಬ.). ೨.ಪ್ರತಿಮಾಭೂತಶ್ಚನ್ದ್ರಃ-ಪ್ರತಿಮಾಚನ್ದ್ರಃ(ಉ.ಮ.ಕ.).

ವ್ಯಾಕರಣವಿಶೇಷ. ೧. ಅನೇಕಧಾ- ಕ್ರಿಯೆಯ ಪ್ರಕಾರವೆಂಬ ಅರ್ಥದಲ್ಲಿ ಅನೇಕವೆಂಬ ಸಂಖ್ಯಾವಾಚಕಕ್ಕೆ ಧಾ ಎಂಬ ಪ್ರತ್ಯಯವು ಬಂದು ತದ್ಧಿತಾಂತ್ಯಾಯವಾಗಿದೆ. ೨.ಅಪಾಂ - ಪಕಾರಾನ್ತ ಸ್ತ್ರೀಲಿಂಗ ನಿತ್ಯಬಹುವಚನ; ಪರಿಶಿಷ್ಟವನ್ನು ನೋಡಿ. ೩.ಉವಾಸ (೧೬)-ವಸ ನಿವಾಸೇ (ವಸ್-ವಾಸಿಸು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಏ.

ವಿಚಾರ. ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥ ಮುಂತಾದಶಾಸ್ತ್ರವನ್ನು ಅನುಸರಿಸಿ 'ಪರಮಾತ್ಮನು ಒಬ್ಬನೇ ಆಗಿದ್ದು ತನ್ನ ಅಂಶದಿಂದ ಅವರಲ್ಲಿ ಬೇರೆ ಬೇರೆಯಾಗಿ ವಿಂಗಡಿಸಿಕೊಂಡು ವಾಸಮಾಡಿದನು' ಎಂದು ಕವಿಯು ವರ್ಣಿಸಿರುತ್ತಾನೆ. ಕವಿಗೆ ಅದ್ವೈತದ ಕಡೆಗೆ ಒಲವು ಇರುವದೆನ್ನುವದಕ್ಕೆ ಇದೂ ಒಂದು ಸಾಕ್ಷಿಯಾಗಿದೆ.

ಅಥಾಗ್ರ್ಯಮಹಿಷೀ ರಾಜ್ಞಃ ಪ್ರಸೂತಿಸಮಯೇ ಸತೀ ।
ಪುತ್ರಂ ತಮೋಽಪಹಂ ಲೇಭೇ ನಕ್ತಂ ಜ್ಯೋತಿರಿವೌಷಧಿಃ ॥೬೬॥

ಅನ್ವಯ. [ಅಥ ರಾಜ್ಞಃ ಸತೀ ಅಗ್ರ್ಯಮಹಿಷೀ ಪ್ರಸೂತಿಸಮಯೇ ಓಷಧಿಃ ನಕ್ತಂ ತಮೋಽಪಹಂ ಜ್ಯೋತಿಃ ಇವ ಪುತ್ರಂ ಲೇಭೇ.]

ಅರ್ಥ. ಅಥ-ಅನಂತರದಲ್ಲಿ ರಾಜ್ಞಃ-ರಾಜನ ಸತೀ-ಪತಿವ್ರತೆಯಾದ ಅಗ್ರ್ಯ

ಮಹಿಷೀ-ಹಿರಿಯ ಹೆಂಡತಿಯು ಪ್ರಸೂತಿಸಮಯೇ-ಹಡೆಯುವ ಕಾಲದಲ್ಲಿ ಓಷಧಿಃ - ಓಷಧಿಯೆಂಬ ಒಂದಾನೊಂದು ಗಿಡವು ನಕ್ತಂ-ರಾತ್ರೆಯಲ್ಲಿ ತಮೋಽಪಹಂ - ಕತ್ತಲೆಯನ್ನು ಹೋಗಲಾಡಿಸುವ ಜ್ಯೋತಿರಿವ-ಬೆಳಕನ್ನು ಹೇಗೋ ಹಾಗೆ ಪುತ್ರಂ-ಮಗನನ್ನು ಲೇಭೇ-ಪಡೆದಳು.

ವಿಗ್ರಹವಾಕ್ಯಗಳು. ೧.ಅಗ್ರೇ ಭವಾ-ಅಗ್ರ್ಯಾ (ತ.ವೃ.); ಅಗ್ರ್ಯಾ ಚ ಸಾ ಮಹಿಷೀ ಚ-ಅಗ್ರ್ಯಮಹಿಷೀ (ವಿ.ಪೂ.ಕ). ೨.ಪ್ರಸೂತೇಃ ಸಮಯಃ-ಪ್ರಸೂತಿ ಸಮಯಃ, (ಷ.ತ.). ೩.ತಮೋಽಪಹನ್ತೀತಿ-ತಮೋಪಹಃ (ಉಪ.ಸ.) ತಂ - ತಮೋಽಪಹಮ್.

ವ್ಯಾಕರಣವಿಶೇಷ. ೧.ತಮೋಽಪಹಮ್-೨ನೆಯ ಶ್ಲೋಕದ ೪ನೆಯ ಟಿಪ್ಪಣಿಯನ್ನು (ಪು. ೧೮೯) ನೋಡಿ. ೨.ನಕ್ತಂ-ಅವ್ಯಯ. ೩.ಓಷಧಿಃ-ಇಕಾರಾನ್ತ ಸ್ತ್ರೀಲಿಂಗ. ೪.ಲೇಭೇ (೨೪)-ಡು ಲಭಷ್ ಪ್ರಾಪ್ತೌ (ಲಭ್-ಹೊಂದು) ಎಂಬ ೧ನೆಯ ಗಣದ ಧಾತುವಿನ ಲಿಟ್, ಆ.ಪ್ರ. ಏ.

ವಿಚಾರ. ರಾತ್ರೆಯ ಕಾಲದಲ್ಲಿ ಓಷಧಿಯೆಂಬ ಒಂದಾನೊಂದು ಗಿಡವು ದೀಪದಂತೆ ಬೆಳಕುಕೊಡುವದಂತೆ; ಸೂರ್ಯನು ಅಗ್ನಿಯಲ್ಲಿಯೂ ಓಷಧಿಗಳಲ್ಲಿಯೂ ತನ್ನ ಬೆಳಕನ್ನು ಇಟ್ಟು ಅಸ್ತವಾಗುತ್ತಾನೆಂದು ವರ್ಣಿಸುತ್ತಾರೆ. ರಾತ್ರಿಯಾಗುತ್ತಲೂ ಓಷಧಿಗೆ ಹೇಗೆ ಬೆಳಕು ಬರುವದೋ ಅದರಂತೆ ನವಮಾಸವು ತುಂಬುತ್ತಲೂ ಕೌಸಲ್ಯೆಗೆ ಸತ್ಪುತ್ರೋತ್ಪತ್ತಿಯಾಯಿತು ಎಂಬುದು ಉಪಮಾನದ ಭಾವ.

ರಾಮ ಇತ್ಯಭಿರಾಮೇಣ ವಪುಷಾ ತಸ್ಯ ಚೋದಿತಃ ।
ನಾಮಧೇಯಂ ಗುರುಶ್ಚಕ್ರೇ ಜಗತ್ಪ್ರಥಮಮಙ್ಗಲಮ್ ॥೬೭॥

[ಅನ್ವಯ ಅಭಿರಾಮೇಣ ವಪುಷಾ ಚೋದಿತಃ ಗುರುಃ ತಸ್ಯ ಜಗತ್ಪ್ರಥಮ ಮಙ್ಗಲಂ ರಾಮ ಇತಿ ನಾಮಧೇಯಂ ಚಕ್ರೇ.]

ಅರ್ಥ. ಅಭಿರಾಮೇಣ-ಮನೋಹರವಾದ ವಪುಷಾ-ಶರೀರದಿಂದ ಚೋದಿತಃ - ಪ್ರೇರಿತನಾಗಿ ಗುರುಃ-ತಂದೆಯು ತಸ್ಯ-ಆ (ಮಗನಿಗೆ) ಜಗತ್ಪ್ರಥಮಮಙ್ಗಲಂ- (ಜಗತ್-ಲೋಕಗಳಿಗೆ ಪ್ರಥಮ-ಮೊದಲನೆಯ ಮಙ್ಗಲಂ - ಮಂಗಲಕರವಾದ) ಲೋಕಕ್ಕೆಲ್ಲ ಮೊದಲನೆಯ ಮಂಗಲವಾದ ರಾಮ ಇತಿ-ರಾಮನೆಂಬ ನಾಮ ಧೇಯಂ-ಹೆಸರನ್ನು ಚಕ್ರೇ-ಮಾಡಿದನು.

ತಾತ್ಪರ್ಯ. ದಶರಥನು ಅಭಿರಾಮ(=ಮನೋಹರ)ವಾದ ದೇಹವುಳ್ಳವ ನಾದ ಆ ಮಗನಿಗೆ ರಾಮನೆಂಬ ಲೋಕಕ್ಕೆಲ್ಲ ಮಂಗಲಕರವಾದ ಹೆಸರನ್ನು ಇಟ್ಟನು.

ವಿಗ್ರಹವಾಕ್ಯಗಳು. ಅಭಿರಮನ್ತೇ ಅತ್ರ ಇತಿ-ಅಭಿರಾಮಃ (ಕೃ.ವೃ.);

ತೇನ - ಅಭಿರಾಮೇಣ. ೨.ನಾಮ್ನೈವ-ನಾಮಧೇಯಮ್(ತ.ವ್ಯ.). ೩. ಪ್ರಥಮಂ ಚ ತತ್ ಮಙ್ಗಲಂ ಚ-ಪ್ರಥಮಮಙ್ಗಲಮ್ (ವಿ.ಪೂ.ಕ.); ಜಗತಾಂ ಪ್ರಥಮಮಙ್ಗಲಂ - ಜಗತ್ಪ್ರಥಮಮಙ್ಗಲಮ್ (ಷ.ತ.).

ವ್ಯಾಕರಣವಿಶೇಷ. ೧.ವಪುಷಾ-ಸಕಾರಾಂತ ನಪುಂಸಕ; (ವಪುಃ, ವಪುಷೀ, ವಪೂಂಷಿ) ೨.ನಾಮಧೇಯಂ-ನಾಮ, ರೂಪ, ಭಾಗ ಎಂಬ ಶಬ್ದಗಳಿಗೆ ಸ್ವಾರ್ಥ (original meaning of the word)ದಲ್ಲಿ ಧೇಯ ಎಂಬ ಪ್ರತ್ಯಯವು ಬರುವದು. ಉದಾ: ನಾಮ=ನಾಮಧೇಯ. ೩.ಚಕ್ರೇ(೨೫) -ಡುಕೃಞ್ಕರಣೇ (ಕೃ-ಮಾಡು) ಎಂಬ ಆನೆಯ ಗಣದ ಧಾತುವಿನ ಲಿಟ್, ಆ.ಪ್ರ.ಏ.

ವಿಚಾರ. ೧.ಪ್ರಥಮ ಎಂಬ ಮಾತಿಗೆ 'ಶ್ರೇಷ್ಠವಾದ' 'ಮೊದಲನೆಯ'- ಎಂಬ ಎರಡು ಅರ್ಥಗಳುಂಟು. ಆದ್ದರಿಂದ 'ಪ್ರಥಮಮಙ್ಗಲಮ್' ಎಂದರೆ ಅತ್ಯಂ ತಮಂಗಲವಾದ ಎಂದಾಗಲಿ, ಮೊದಲನೆಯ ಮಂಗಲವೆಂದಾಗಲಿ ಅರ್ಥವಾಗು ವದು. ಎರಡನೆಯ ಅರ್ಥವನ್ನು ಇಟ್ಟುಕೊಂಡರೆ ಅಭಿರಾಮವಾಗಿದ್ದ ಶರೀರದಿಂದ ಬಂದ ಮೊದಲನೆಯ ಮಂಗಲಕರವಾದ ಹೆಸರು, ಮುಂದೆ ಸೀತಾಪತಿ, ರಾವಣಾರಿ ಮುಂತಾದ ಇನ್ನೂ ಎಷ್ಟೋ ಮಂಗಲಕರವಾದ ಹೆಸರುಗಳು ಬಂದಿವೆ ಎಂಬ ಭಾವವು ಹೊರಡುವದು. ೨.ಅಭಿರಾಮನಾಗಿದ್ದದ್ದರಿಂದ ರಾಮನೆಂಬ ಹೆಸರು ಇಟ್ಟನು, ಎಂದದ್ದರಿಂದ ಇದು ಅನ್ವರ್ಥನಾಮ(appropriate name) ವೆಂದು ತಿಳಿಸಿದಂತೆ ಆಯಿತು.

ರಘುವಂಶಪ್ರದೀಪೇನ ತೇನಾಪ್ರತಿಮತೇಜಸಾ ।
ರಕ್ಷಾಗೃಹಗತಾ ದೀಪಾಃ ಪ್ರತ್ಯಾದಿಷ್ಟಾ ಇವಾಭವನ್ ॥೭೮॥

ಅನ್ವಯ. [ರಘುವಂಶಪ್ರದೀಪೇನ ಅಪ್ರತಿಮತೇಜಸಾ ತೇನ ರಕ್ಷಾಗೃಹ ಗತಾಃ ದೀಪಾಃ ಪ್ರತ್ಯಾದಿಷ್ಟಾ ಇವ ಅಭವನ್.]

ಅರ್ಥ. ರಘುವಂಶಪ್ರದೀಪೇನ-ರಘುವಂಶಕ್ಕೆ ದೊಡ್ಡ ಬೆಳಕಾಗಿರುವ ಅಪ್ರತಿ ಮತೇಜಸಾ-(ಅಪ್ರತಿಮ-ಅಸಮಾನವಾದ ತೇಜಸಾ-ಕಾಂತಿಯುಳ್ಳ) ಮಿಗಿಲಿಲ್ಲದ ಕಾಂತಿಯು ತೇನ-ಆತನಿಂದ ರಕ್ಷಾಗೃಹಗತಾಃ-ಹೆರಿಗೆಯ ಮನೆಯಲ್ಲಿರುವ ದೀಪಾಃ - ದೀಪಗಳು ಪ್ರತ್ಯಾದಿಷ್ಟಾ ಇವ-ಮಂಕುಗೊಳಿಸಲ್ಪಟ್ಟವೋ ಎಂಬಂತೆ ಅಭವನ್ - ಆದವು.

ವಿಗ್ರಹವಾಕ್ಯಗಳು. ೧.ರಘೂಣಾಂ ವಂಶಃ-ರಘುವಂಶಃ (ಷ.ತ.); ತಸ್ಯ - ರಘುವಂಶಸ್ಯ; ರಘುವಂಶಸ್ಯ ಪ್ರದೀಪಃ-ರಘುವಂಶಪ್ರದೀಪಃ (ಷ.ತ); ತೇನ - ರಘುವಂಶಪ್ರದೀಪೇನ. ೨.ಅವಿದ್ಯಮಾನಾ ಪ್ರತಿಮಾ ಯಸ್ಯ ತತ್-ಅಪ್ರತಿಮಮ್ (ನ.ಬ.); ಅಪ್ರತಿಮಂ ತೇಜಃ ಯಸ್ಯ ಸಃ-ಅಪ್ರತಿಮತೇಜಾಃ (ಷ.ಬ.); ತೇನ

- ಅಪ್ರತಿಮತೇಜಸಾ. ೩.ರಕ್ಷಾಯುಕ್ತಂ ಗೃಹಂ-ರಕ್ಷಾಗೃಹಮ್ (ಮ.ಲೋ.ಕ.); ರಕ್ಷಾಗೃಹಂ ಗತಾಃ-ರಕ್ಷಾಗೃಹಗತಾಃ (ದ್ವಿ.ತ.).

ವ್ಯಾಕರಣವಿಶೇಷ. ೧.ರಘುವಂಶಪ್ರದೀಪೇನ-ಇಲ್ಲಿ ರಘುವೆಂಬ ಶಬ್ದವನ್ನು ರಘುವಿನ ವಂಶದವರು ಎಂಬರ್ಥದಲ್ಲಿ ಲಕ್ಷಣೆಯಿಂದ ಬಹುವಚನವಾಗಿ ಉಪಯೋಗಿಸಿರುತ್ತದೆ. ೨.ಅಪ್ರತಿಮತೇಜಸಾ-ಸಕಾರಾನ್ತಪುಲ್ಲಿಂಗ; (ಅಪ್ರತಿಮತೇಜಾಃ, ೦ತೇಜಸೌ, ೦ತೇಜಸಃ). ೩.ಪ್ರತ್ಯಾದಿಷ್ಟಾಃ-ಪ್ರತ್ಯಾದೇಶ ಎಂದರೆ ತಿರಸ್ಕರಿಸು ಎಂದರ್ಥ; ಹಿಂದಕ್ಕೆ ಹಾಕು ಎಂಬರ್ಥದಲ್ಲಿ ಕವಿಯು ಉಪಯೋಗಿಸಿರುತ್ತಾನೆ. ೧ನೆಯ ಸರ್ಗದ ೬೧ನೆಯ ಶ್ಲೋಕವನ್ನು (ಪು. ೫೯) ನೋಡಿ. ೪.ಅಭವನ್ (೧೦)- ಭೂಸತ್ತಾಯಾಂ (ಭೂ-ಇರು) ಎಂಬ ೧ನೆಯ ಗಣದ ಧಾತುವಿನ ಲಙ್, ಪ. ಪ್ರ. ಬ.

ವಿಚಾರ. ೧.ದೊಡ್ಡ ದೀಪವಿರುವ ಕಡೆಯಲ್ಲಿ ಸಣ್ಣ ದೀಪಗಳು ಮಂಕಾಗುವಂತೆ ಈ ಹುಡುಗನ ತೇಜಸ್ಸಿನ ಮುಂದೆ ದೀಪಗಳ ಬೆಳಕೇನೂ ತೋರಲಿಲ್ಲ-ಎಂದು ವರ್ಣಿಸುವದಕ್ಕಾಗಿ 'ಪ್ರದೀಪ' ಎಂಬ ವಿಶೇಷಣವನ್ನು ಹಾಕಿರುತ್ತಾನೆ. ೨.ರಘುವಂಶಪ್ರದೀಪ-ಎಂಬ ವಿಶೇಷಣದಿಂದ ಈ ಕಾವ್ಯಕ್ಕೆ ರಾಮನೇ ಮುಖ್ಯನಾಯಕನೆಂಬುದನ್ನು ಸೂಚಿಸಿರುತ್ತದೆ. ೩.ಹೆರಿಗೆಯ ಮನೆಯಲ್ಲಿ ರಕ್ಷಾರ್ಥವಾಗಿ ಕಾತ್ಯಾಯನಿ, ಸ್ಕಂದ-ಮುಂತಾದ ದೇವತೆಗಳನ್ನು ಪೂಜಿಸುತ್ತಾರೆಂಬುದರ ಮೇಲೆ ಅದಕ್ಕೆ ರಕ್ಷಾಗೃಹವೆಂಬ ಹೆಸರು ಬಂದಿರುವದು.

ಶಯ್ಯಾಗತೇನ ರಾಮೇಣ ಮಾತಾ ಶಾತೋದರೀ ಬಭೌ ।
ಸೈಕತಾಮ್ಭೋಜಬಲಿನಾ ಜಾಹ್ನವೀವ ಶರತ್ಕೃಶಾ ॥೬೯॥

ಅನ್ವಯ. [ಶಾತೋದರೀ ಮಾತಾ ಶಯ್ಯಾಗತೇನ ರಾಮೇಣ ಸೈಕತಾಮ್ಭೋಜಬಲಿನಾ ಶರತ್ಕೃಶಾ ಜಾಹ್ನವೀ ಇವ ಬಭೌ.]

ಅರ್ಥ. ಶಾತೋದರೀ-(ಶಾತ-ತೆಳುವಾದ ಉದರೀ-ಹೊಟ್ಟೆಯುಳ್ಳ) ಬಡನಡುವಿನ ಮಾತಾ-ತಾಯಿಯು ಶಯ್ಯಾಗತೇನ-ಹಾಸಿಗೆಯಲ್ಲಿರುವ ರಾಮೇಣ-ರಾಮನೊಡನೆ ಸೈಕತಾಮ್ಭೋಜಬಲಿನಾ-(ಸೈಕತ-ಮಳಲೊಟ್ಟಿಲಿನಲ್ಲಿ ಅಂಭೋಜ - ಕಮಲಗಳ ಬಲಿನಾ-ಉಪಹಾರವುಳ್ಳ) ಮಳಲಿನ ದಡದಲ್ಲಿ ಕಾಣಿಕೆಯಾಗಿ ಕೊಟ್ಟಿರುವ ಕಮಲಗಳು ಇರುವ ಶರತ್ಕೃಶಾ-ಶರತ್ಕಾಲದಲ್ಲಿ ಬತ್ತಿರುವ ಜಾಹ್ನವೀ ಇವ - ಗಂಗೆಯ ಹಾಗೆ ಬಭೌ-ಬೆಳಗುತ್ತಿದ್ದಳು.

ವಿಗ್ರಹವಾಕ್ಯಗಳು. ೧.ಶಯ್ಯಾಂ ಗತಃ-ಶಯ್ಯಾಗತಃ(ದ್ವಿ.ತ.); ತೇನ-ಶಯ್ಯಾಗತೇನ. ೨.ಶಾತಂ ಉದರಂ ಯಸ್ಯಾಃ ಸಾ-ಶಾತೋದರೀ (ಷ.ಬ.); ೩.ಸಿಕತಾಃ ಅಸ್ಮಿನ್ ಸನ್ತೀತಿ - ಸೈಕತಮ್ (ತ.ವ್ಯ.); ತಸ್ಮಿನ್-ಸೈಕತೇ; ಅಮ್ಭಸಿ

ಜಾಯನ್ತೇ ಇತಿ - ಅಂಭೋಜಾಃ(ಉಪ.ಸ;) ತೇಷಾಂ-ಅಂಭೋಜಾನಾಂ; ಅಂಭೋಜಾನಾಂ ಬಲಿಃ - ಅಂಭೋಜಬಲಿಃ (ಷ.ತ.); ಸೈಕತೇ ಅಂಭೋಜ ಬಲಿಃ-ಸೈಕತಾಂಭೋಜಬಲಿಃ (ಸ.ತ.); ತೇನ-ಸೈಕತಾಂಭೋಜಬಲಿನಾ. ೪. ಜಹ್ನೋಃ ಅಪತ್ಯಂ ಸ್ತ್ರೀ-ಜಾಹ್ನವೀ ೫.ಶರದಿ ಕೃಶಾ-ಶರತ್ಕೃಶಾ (ಸ.ತ.).

ವ್ಯಾಕರಣವಿಶೇಷ. ಬಭೌ (೨೧)-ಭಾದೀಪ್ತೌ (ಭಾ-ಹೊಳೆ) ಎಂಬ ಎರಡನೆಯ ಗಣದ ಧಾತುವಿನ ಲಿಟ್, ಪ. ಪ್ರ. ಏ.

ವಿಚಾರ. ೧.ಇಲ್ಲಿ ಮಗ್ಗಲುಹಾಸಿಗೆಯನ್ನು ನದಿಯು ಮಳಲು ದಡಕ್ಕೆ ಹೋಲಿಸಿರುವದರಿಂದ ಅದು ಅತಿಸ್ವಚ್ಛವಾಗಿತ್ತೆಂದೂ ಮಗುವನ್ನು ಕಮಲಕ್ಕೆ ಹೋಲಿಸಿರುವದರಿಂದ ಅದು ಕೋಮಲಶರೀರವುಳ್ಳದ್ದಾಗಿತ್ತೆಂದೂ ಕೌಸಲ್ಯೆಯನ್ನು ಗಂಗೆಗೆ ಹೋಲಿಸಿದ್ದರಿಂದ ಆಕೆಯು ಪವಿತ್ರಳಾಗಿದ್ದಳೆಂದೂ ತಿಳಿಸಿದಂತಾಯಿತು. ೨.ಮಳೆಗಾಲದಲ್ಲಿ ಪ್ರವಾಹವು ತುಂಬಿರುವ ಗಂಗೆಯು ಶರತ್ಕಾಲದಲ್ಲಿ ಮೊದಲಿನಂತೆ ಕುಗ್ಗಿಕೊಳ್ಳುವುದು; ಗರ್ಭಿಣಿಯಾಗಿದ್ದ ಕೌಸಲ್ಯೆಯು ಕೂಸನ್ನು ಹಡೆದ ಮೇಲೆ ಕೃಶಳಾದಳೆಂದು ತಿಳಿಸುವದಕ್ಕೆ 'ಶರತ್ಕೃಶಾ'ಎಂಬ ವಿಶೇಷಣವನ್ನು ಕೊಟ್ಟಿದೆ. ೩. ಗಂಗೆಯನ್ನು ಜಹ್ನು ಋಷಿಯು ಕುಡಿದುಬಿಟ್ಟು ಭಗೀರಥನ ಪ್ರಾರ್ಥನೆಯಂತೆ ಕಿವಿಯಿಂದ ಈಚೆಗೆ ಬಿಟ್ಟನೆಂದೂ ಅದರಿಂದ ಗಂಗೆಗೆ ಜಾಹ್ನವಿಯೆಂಬ ಹೆಸರಾಯಿತೆಂದೂ ಪುರಾಣಕಥೆ. ಇಲ್ಲಿ ಈ ಅವಯವಾರ್ಥದ ಉಪಯೋಗವೇನೂ ಇಲ್ಲ.

ಕೈಕೇಯ್ಯಾಸ್ತನಯೋ ಜಜ್ಞೇ ಭರತೋ ನಾಮ ಶೀಲವಾನ್ ।
ಜನಯಿತ್ರೀಮಲಂಚಕ್ರೇ ಯಃ ಪ್ರಶ್ರಯ ಇವ ಶ್ರಿಯಮ್ ॥೭೦॥

ಅನ್ವಯ. [ಕೈಕೇಯ್ಯಾಃ ಭರತೋ ನಾಮ ಶೀಲವಾನ್ ತನಯಃ ಜಜ್ಞೇ ಯಃ ಪ್ರಶ್ರಯಃ ಶ್ರಿಯಂ ಇವ ಜನಯಿತ್ರೀಂ ಅಲಂಚಕ್ರೇ.]

ಅರ್ಥ. ಕೈಕೇಯ್ಯಾಃ-ಕೈಕೇಯಿಗೆ ಭರತೋ ನಾಮ-ಭರತನೆಂಬ ಶೀಲವಾನ್ - ಒಳ್ಳೆಯ ನಡತೆಯ ತನಯಃ-ಮಗನು ಜಜ್ಞೇ-ಹುಟ್ಟಿದನು; ಯಃ-ಯಾವ (ಅವ)ನು ಪ್ರಶ್ರಯಃ-ವಿನಯವು ಶ್ರಿಯಂ ಇವ-ಸಂಪತ್ತನ್ನು ಹೇಗೋ ಹಾಗೆ ಜನಯಿತ್ರೀಂ- ತಾಯಿಯನ್ನು ಅಲಂಚಕ್ರೇ-ಅಲಂಕರಿಸಿದನು.

ವಿಗ್ರಹವಾಕ್ಯಗಳು. ೧.ಕೇಕಯಸ್ಯ ಅಪತ್ಯಂ ಸ್ತ್ರೀ-ಕೈಕೇಯೀ (ತ.ವೃ.); ತಸ್ಯಾಃ-ಕೈಕೇಯ್ಯಾಃ. ೨.ಶೀಲಂ ಅಸ್ಯ ಅಸ್ತೀತಿ-ಶೀಲವಾನ್ (ತ.ವೃ.). ೩.ಜನಯತೀತಿ-ಜನಯಿತ್ರೀ(ಕೃ.ವೃ.).

ವ್ಯಾಕರಣವಿಶೇಷ. ೧.ಕೈಕೇಯ್ಯಾಃ-ಕೇಕಯಶಬ್ದಕ್ಕೆ ಮಗ ಎಂಬರ್ಥದಲ್ಲಿ ಅಞ್ ಪ್ರತ್ಯಯವು

ಸೇರಿ, ಯಕಾರಕ್ಕೆ ಈಯಾದೇಶವೂ ಸ್ತ್ರೀಲಿಂಗಕ್ಕಾಗಿ 'ಈ' ಪ್ರತ್ಯಯವೂ ಬಂದಿದೆ. ಕೈಕೇಯೀ ಎಂಬ ರೂಪವಲ್ಲದೆ 'ಕೇಕಯೀ' ಎಂಬ ರೂಪವೂ ಉಂಟು. ದೇಶ, ಕ್ಷತ್ರಿಯ-ಎರಡನ್ನೂ ಹೇಳುವ ಮಾತುಗಳಿಗೆ ಅಞ್ (ಅ) ಪ್ರತ್ಯಯವು ಬರುವದು. ೨ ಶ್ರಿಯಂ -ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ. ೩.ಅಲಂಚಕ್ರೇ (೨೫)-ಡುಕೃಞ್ ಕರಣೇ (ಕೃ-ಮಾಡು) ಎಂಬ ಅನೆಯ ಗಣದ ಧಾತುವಿಗೆ ಅಲಂ ಎಂಬ ಅವ್ಯಯವು ಸೇರಿ ಅಲಂಕರಿಸು ಎಂಬರ್ಥವಾಗಿದೆ. ಲಿಟ್, ಆ. ಪ್ರ. ಏ. ೪.ಜಜ್ಞೇ(೨೪)-ಜನೀ ಪ್ರಾದುರ್ಭಾವೇ (ಜನ್-ಹುಟ್ಟು) ಎಂಬ ೪ನೆಯ ಗಣದ ಧಾತುವಿನ ಲಿಟ್, ಆ. ಪ್ರ. ಏ.

ವಿಚಾರ. 'ಜನಯಿತ್ರೀಮಲಂಚಕ್ರೇ'- ಎಂಬಲ್ಲಿ 'ಮಲಂಚಕ್ರೇ' ಎಂದು ಅಸಭ್ಯವಾದ ಅರ್ಥವು ತೋರುವದರಿಂದ ಇದೊಂದು ಕಾವ್ಯದೋಷವೆಂದು ಒಬ್ಬ ವ್ಯಾಖ್ಯಾನಕಾರರು ಬರೆದಿರುತ್ತಾರೆ.

ಸುತೌ ಲಕ್ಷ್ಮಣಶತ್ರುಘ್ನೌ ಸುಮಿತ್ರಾ ಸುಷುವೇ ಯಮೌ ।
ಸಮ್ಯಗಾಗಮಿತಾ ವಿದ್ಯಾ ಪ್ರಬೋಧವಿನಯಾವಿವ ॥೭೧॥

ಅನ್ವಯ. [ಸುಮಿತ್ರಾ ಲಕ್ಷ್ಮಣಶತ್ರುಘ್ನೌ ಯಮೌ ಸುತೌ ಸಮ್ಯಕ್ ಆಗಮಿತಾ ವಿದ್ಯಾ ಪ್ರಬೋಧವಿನಯೌ ಇವ ಸುಷುವೇ.]

ಅರ್ಥ. ಸುಮಿತ್ರಾ-ಸುಮಿತ್ರೆಯು ಲಕ್ಷ್ಮಣಶತ್ರುಘ್ನೌ-ಲಕ್ಷ್ಮಣಶತ್ರುಘ್ನರೆಂಬ ಯಮೌ-ಅವಳಿಯಾದ ಸುತೌ-ಮಕ್ಕಳನ್ನು ಸಮ್ಯಕ್-ಚೆನ್ನಾಗಿ ಆಗಮಿತಾ-ಅಭ್ಯಾಸ ಮಾಡಲ್ಪಟ್ಟ ವಿದ್ಯಾ-ವಿದ್ಯೆಯು ಪ್ರಬೋಧವಿನಯೌ ಇವ-ಜ್ಞಾನವಿನಯಗಳನ್ನು ಹೇಗೋ ಹಾಗೆ ಸುಷುವೇ-ಹಡೆದಳು.

ವಿಗ್ರಹವಾಕ್ಯಗಳು. ೧.ಲಕ್ಷ್ಮಣಶ್ಚ ಶತ್ರುಘ್ನಶ್ಚ- ಲಕ್ಷ್ಮಣಶತ್ರುಘ್ನೌ (ದ್ವ.ಸ.). ೨.ಆಗಮೋ ಅಸ್ಯಾ ಜಾತಃ-ಆಗಮಿತಾ (ತ.ವ್ಯ.). ೩. ಪ್ರಬೋಧಶ್ಚ ವಿನಯಶ್ಚ - ಪ್ರಬೋಧವಿನಯೌ (ದ್ವ.ಸ.).

ವ್ಯಾಕರಣವಿಶೇಷ. ೧.ಸಮ್ಯಕ್-ಅವ್ಯಯ ೨.ಸುಷುವೇ (೨೪)-ಷೂಙ್ ಪ್ರಾಣಿಪ್ರಸವೇ (ಸೂ-ಹಡೆ) ಎಂಬ ೪ನೆಯ ಗಣದ ಧಾತುವಿನ ಲಿಟ್, ಆ. ಪ್ರ. ಏ.

ವಿಚಾರ. ೧. ಪರಮಾರ್ಥವಿದ್ಯೆಗೆ ತತ್ತ್ವಜ್ಞಾನ, ಇಂದ್ರಿಯ ಜಯ-ಇವೆರಡೇ ಮುಖ್ಯಫಲ; ಶಾಸ್ತ್ರಸಂಪ್ರದಾಯದಿಂದ ಉಂಟಾಗಿರುವ ವಿದ್ಯೆಗೆ ಈ ಎರಡು ಫಲಗಳೂ ಆಗುವವು-ಎಂಬುದನ್ನು 'ಪ್ರಬೋಧವಿನಯಾವಿವ' ಎಂಬುದರಿಂದ ಸೂಚಿಸಿರುತ್ತದೆ. ೨.'ಸಮ್ಯಗಾರಾಧಿತಾ' ಎಂಬ ಪಾಠಾಂತರವೂ ಉಂಟು; ಚೆನ್ನಾಗಿ ಸೇವೆಮಾಡಿದ ಎಂದರ್ಥ. ವಿದ್ಯೆ ಎಂದರೆ ಪರಮಾರ್ಥವಿದ್ಯೆ ಎಂಬ ಅರ್ಥವನ್ನು ಇಟ್ಟುಕೊಳ್ಳದೆ ಇದ್ದರೂ ವಿದ್ಯೆಯಿಂದ ತಿಳಿವಳಿಕೆಯೂ ವಿನಯವೂ

ಉಂಟಾಗುವವೆಂಬ ಸಾಧಾರಣವಾದ ಅರ್ಥವನ್ನು ಇಟ್ಟುಕೊಳ್ಳಬಹುದಾಗಿದೆ.

ನಿರ್ದೋಷಮಭವತ್ಸರ್ವಮಾವಿಷ್ಕೃತಗುಣಂ ಜಗತ್ ।
ಅನ್ವಗಾದಿವ ಹಿ ಸ್ವರ್ಗೋ ಗಾಂ ಗತಂ ಪುರುಷೋತ್ತಮಮ್ ॥೭೨॥

ಅನ್ವಯ. [ಸರ್ವಂ ಜಗತ್ ನಿರ್ದೋಷಂ ಆವಿಷ್ಕೃತಗುಣಂ ಅಭವತ್ ಗಾಂ ಗತಂ ಪುರುಷೋತ್ತಮಂ ಸ್ವರ್ಗಃ ಅನ್ವಗಾದಿವ ಹಿ.]

ಅರ್ಥ. ಸರ್ವಂ-ಎಲ್ಲಾ ಜಗತ್-ಭೂಲೋಕವೂ ನಿರ್ದೋಷಂ-ದೋಷಗಳಿಲ್ಲದ್ದೂ, ಆವಿಷ್ಕೃತಗುಣಂ-(ಆವಿಷ್ಕೃತ-ಪ್ರಕಟಿಸಲ್ಪಟ್ಟ ಗುಣಂ-ಗುಣಗಳುಳ್ಳದ್ದೂ) ಗುಣಗಳಿಂದ ಕೂಡಿದ್ದೂ ಅಭವತ್- ಆಯಿತು. ಗಾಂ-ಭೂಮಿಯನ್ನು ಗತಮ್ - ಹೊಂದಿದಂಥ ಪುರುಷೋತ್ತಮಂ-ವಿಷ್ಣುವನ್ನು ಸ್ವರ್ಗಃ-ಸ್ವರ್ಗವು ಅನ್ವಗಾದಿವ - ಅನುಸರಿಸಿತೋ (ಎಂಬಂತಿತ್ತು); ಹಿ-ನಿಶ್ಚಯ.

ವಿಗ್ರಹವಾಕ್ಯಗಳು. ೧.ನಿರ್ಗತಾಃ ದೋಷಾಃ ಯಸ್ಮಾತ್ತತ್-ನಿರ್ದೋಷಮ್ (ಪ್ರಾ.ಬ.). ೨.ಆವಿಷ್ಕೃತಾಃ ಗುಣಾಃ ಯಸ್ಯ ತತ್-ಆವಿಷ್ಕೃತಗುಣಮ್ (ಷ.ಬ.). ೩.ಪುರುಷಾಣಾಂ ಉತ್ತಮಃ- ಪುರಷೋತ್ತಮಃ (ಷ.ತ.).

ವ್ಯಾಕರಣವಿಶೇಷ. ೧.ಪುರುಷೋತ್ತಮಂ-ನಿರ್ಧಾರಣೆ (singling out) ಎಂದರೆ ಕೆಲವರಲ್ಲಿ ಆರಿಸಿ ಗೊತ್ತುಪಡಿಸುವದು ಎಂಬರ್ಥದಲ್ಲಿರುವ ಷಷ್ಠಿಯು ಸಮಾಸವಾಗುವದಿಲ್ಲವೆಂದು ಪಾಣಿನಿಯ ಸೂತ್ರವಿದೆ. ಆದ್ದರಿಂದ 'ಪುರುಷೇಷು ಉತ್ತಮಃ' ಎಂದು ವಿಗ್ರಹವನ್ನು ಬಿಡಿಸಬೇಕೆಂದು ಕೆಲವರ ಮತ. ಆದರೆ ಸಪ್ತಮೀತತ್ಪುರುಷವನ್ನು ಮಾಡಿದರೆ ಸಂಜ್ಞೆ(name)ಯಾಗಬೇಕು; 'ಪುರುಷೇಷು ಉತ್ತಮಃ' ಎಂಬ ವಾಕ್ಯದಲ್ಲಿ ಸಂಜ್ಞೆಯು ತೋರುವದಿಲ್ಲವಾದ್ದರಿಂದ 'ಪುರುಷೋತ್ತಮಃ' ಎಂಬುದು ನಿತ್ಯಸಮಾಸವೆಂದಾಗುವದು. ಆದ್ದರಿಂದ ಷಷ್ಠೀಸಮಾಸವೆ ಸರಿ. ಯಾವದರಿಂದ ಆರಿಸಬೇಕೋ ಯಾವದನ್ನು ಆರಿಸಿಕೊಳ್ಳಬೇಕೋ ಯಾವ ಕಾರಣದಿಂದ ಆರಿಸಬೇಕೋ-ಇವು ಮೂರೂ ಇರುವ ಕಡೆಯಲ್ಲಿ ಮಾತ್ರ, ಎಂದರೆ 'ನೃಣಾಂ ದ್ವಿಜಃ ಶ್ರೇಷ್ಠಃ' ಮುಂತಾದ ಕಡೆಗಳಲ್ಲಿಯೇ ನಿರ್ಧಾರಣಷಷ್ಠಿಗೆ ಸಮಾಸವಿಲ್ಲ-ಎಂದು ಅನೇಕರು ಅಭಿಪ್ರಾಯಪಡುತ್ತಾರೆ. ೨.ಅಭವತ್ (೧೦)- ಭೂಸತ್ತಾಯಾಂ (ಭೂ-ಇರು) ಎಂಬ ೧ನೆಯ ಗಣದ ಧಾತುವಿನ ಲಙ್, ಪ. ಪ್ರ. ಏ. ೩.ಅನ್ವಗಾತ್ (೨೮)-ಇಣ್ ಗತೌ ಎಂಬ ೨ನೆ ಗಣದ ಧಾತುವಿನ ಲುಙ್, ಪ. ಪ್ರ. ಏ.

ವಿಚಾರ. ಸ್ವರ್ಗವೆಂಬುದು ಯಾವ ದೋಷವೂ ಇಲ್ಲದೆ ಸಕಲ ಗುಣಗಳೂ ಇರುವ ಸ್ಥಾನವು. ಈ ಮಾತನ್ನು ವೈಕುಂಠವೆಂಬ ಅರ್ಥದಲ್ಲಿ ಕವಿಯು ಉಪಯೋಗಿಸಿದ್ದರೂ ಇರಬಹುದು. ಪರಮಾತ್ಮನು ಭೂಲೋಕದಲ್ಲಿ ಅವತರಿಸಿದ್ದರಿಂದ ಸ್ವರ್ಗವು ಅವನ ಹಿಂದೆಯೇ ಬಂದಿತೋ ಎಂಬಂತೆ ಭೂಮಿಯೆಲ್ಲ ಸ್ವರ್ಗದಂತಾ

ಯಿತು ಎಂದು ಕವಿಯು ಉತ್ಪ್ರೇಕ್ಷಿಸಿರುತ್ತಾನೆ.

ತಸ್ಯೋದಯೇ ಚತುರ್ಮೂರ್ತೇಃ ಪೌಲಸ್ತ್ಯಚಕಿತೇಶ್ವರಾಃ ।
ವಿರಜಸ್ಕೈರ್ನಭಸ್ವದ್ಭಿರ್ದಿಶ ಉಚ್ಛ್ವಸಿತಾ ಇವ ॥೭೩॥

ಅನ್ವಯ. [ಚತುರ್ಮೂರ್ತೇಃ ತಸ್ಯ ಉದಯೇ ಪೌಲಸ್ತ್ಯಚಕಿತೇಶ್ವರಾಃ ದಿಶಃ ವಿರಜಸ್ಕೈಃ ನಭಸ್ವದ್ಭಿಃ ಉಚ್ಛ್ವಸಿತಾ ಇವ.]

ಅರ್ಥ. ಚತುರ್ಮೂರ್ತೇಃ-ನಾಲ್ಕುರೂಪಗಳುಳ್ಳ ತಸ್ಯ-ಆತನ ಉದಯೇ - ಹುಟ್ಟುವಿಕೆಯಲ್ಲಿ ಪೌಲಸ್ತ್ಯಚಕಿತೇಶ್ವರಾಃ- (ಪೌಲಸ್ತ್ಯ-ರಾವಣನ ದೆಸೆಯಿಂದ ಚಕಿತ-ಹೆದರಿದ ಈಶ್ವರಾಃ-ಒಡೆಯರುಳ್ಳ) ರಾವಣನಿಗೆ ದಿಕ್ಪಾಲಕರು ಇದುವರೆಗೆ ಹೆದರಿಕೊಂಡಿದ್ದ ದಿಶಃ-ದಿಕ್ಕುಗಳು ವಿರಜಸ್ಕೈಃ-ಧೂಳಿಲ್ಲದ ನಭಸ್ವದ್ಭಿಃ-ವಾಯುಗಳಿಂದ ಉಚ್ಛ್ವಸಿತಾ ಇವ-ಉಸಿರುಬಿಟ್ಟವೋ ಎಂಬಂತೆ (ಇತ್ತು.)

ತಾತ್ಪರ್ಯ. ಇದುವರೆಗೆ ರಾವಣನಿಗೆ ಹೆದರಿಕೊಂಡಿದ್ದ ತಮ್ಮ ಒಡೆಯರಾದ ಇಂದ್ರಾದಿದಿಕ್ಪಾಲಕರಿಗೆ ಈಗ ರಕ್ಷಕನಾಗಿ ಚತುರ್ಮೂರ್ತಿಯಾದ ವಿಷ್ಣುವು ಅವತರಿಸಿದನೆಂಬುದರ ಮೇಲೆ ನಾಲ್ಕುದಿಕ್ಕುಗಳೂ ಧಾರಾಳವಾಗಿ ಉಸಿರುಬಿಡುತ್ತವೆಯೊ ಎಂಬಂತೆ ಗಾಳಿಯು ಬೀಸಿತು.

ವಿಗ್ರಹವಾಕ್ಯಗಳು. ೧.ಚತಸ್ರಃ ಮೂರ್ತಯಃ ಯಸ್ಯ ಸಃ-ಚತುರ್ಮೂರ್ತಿಃ (ಷ.ಬ.); ತಸ್ಯ-ಚತುರ್ಮೂರ್ತೇಃ. ೨.ಪೌಲಸ್ತ್ಯಾತ್ ಚಕಿತಾಃ-ಪೌಲಸ್ತ್ಯಚಕಿತಾಃ (ಪಂ.ತ.); ಪೌಲಸ್ತ್ಯಚಕಿತಾಃ ಈಶ್ವರಾಃ ಯಾಸಾಂ ತಾಃ-ಪೌಲಸ್ತ್ಯಚಕಿತೇಶ್ವರಾಃ (ಷ.ತ.). ೩.ವಿಗತಂ ರಜಃ ಯಾಭ್ಯಃ ತಾಃ-ವಿರಜಸ್ಕಾಃ (ಪ್ರಾ.ಬ.).

ವ್ಯಾಕರಣವಿಶೇಷ. ೧.ಚತುರ್ಮೂರ್ತೇಃ-ಮೂರ್ತಿಶಬ್ದ ಸ್ತ್ರೀಲಿಂಗ; ಚತುರ್ಮೂರ್ತಿಶಬ್ದವು ವಿಷ್ಣುವಿಗೆ ವಿಶೇಷಣವಾದ್ದರಿಂದ ಪುಲ್ಲಿಂಗ. ೨.ದಿಶಃ-ಶಕಾರಾನ್ತಸ್ತ್ರೀಲಿಂಗ; (ದಿಕ್, ದಿಶೌ, ದಿಶಃ). ೩.ಉಚ್ಛ್ವಸಿತಾಃ-(ಶ್ವಸ್-ಉಸಿರುಬಿಡು) ಎಂಬ ಧಾತುವಿಗೆ ಕರ್ತ್ರರ್ಥದಲ್ಲಿ (active) ಕ್ತ(=ತ) ಪ್ರತ್ಯಯವು ಬಂದಿದೆ. ಅಕರ್ಮಕಧಾತುಗಳ ಭೂತಕೃದಂತಗಳು ಹೀಗೆ ಕರ್ತ್ರರ್ಥದಲ್ಲಿ ಪ್ರಯೋಗವಾಗುತ್ತವೆ.

ವಿಚಾರ. ಪೂರ್ವಕ್ಕೆ ಇಂದ್ರ, ದಕ್ಷಿಣಕ್ಕೆ ಯಮ, ಪಶ್ಚಿಮಕ್ಕೆ ವರುಣ, ಉತ್ತರಕ್ಕೆ ಕುಬೇರ-ಇವರೇ ಪಾಲಕರು. ವಿಷ್ಣುವು ನಾಲ್ಕು ಮೂರ್ತಿಗಳುಳ್ಳವನಾಗಿ ಅವತರಿಸಿದ್ದಕ್ಕೆ ನಾಲ್ಕು ದಿಕ್ಕುಗಳನ್ನು ಕಾಪಾಡುವದೇ ಪ್ರಯೋಜನವೆಂದು ಭಾವವು.

ಕೃಶಾನುರಪಧೂಮತ್ವಾತ್ಪ್ರಸನ್ನತ್ವಾತ್ಪ್ರಭಾಕರಃ ।
ರಕ್ಷೋವಿಪ್ರಕೃತಾವಾಸ್ತಾಮಪವಿದ್ಧಶುಚಾವಿವ ॥೭೪॥

ಅನ್ವಯ. [ರಕ್ಷೋವಿಪ್ರಕೃತೌ ಕೃಶಾನುಃ ಪ್ರಭಾಕರಃ ಅಪಧೂಮತ್ವಾತ್ ಪ್ರಸನ್ನತ್ವಾತ್ ಅಪವಿದ್ಧಶುಚೌ ಇವ ಆಸ್ತಾಮ್.]

ಅರ್ಥ. ರಕ್ಷೋವಿಪ್ರಕೃತೌ-(ರಕ್ಷಃ-ರಾಕ್ಷಸನಿಂದ ವಿಪ್ರಕೃತೌ-ಅಪಕಾರ ಮಾಡಲ್ಪಟ್ಟ) ರಾವಣನಿಂದ ತೊಂದರೆಗೊಳಿಸಲ್ಪಟ್ಟ ಕೃಶಾನುಃ-ಅಗ್ನಿಯು ಪ್ರಭಾಕರಃ - ಸೂರ್ಯನು ಅಪಧೂಮತ್ವಾತ್-ಹೊಗೆಯಿಲ್ಲದ್ದರಿಂದಲೂ ಪ್ರಸನ್ನತ್ವಾತ್ - ನಿರ್ಮಲನಾಗಿರುವದರಿಂದಲೂ ಅಪವಿದ್ಧಶುಚೌ ಇವ-(ಅಪವಿದ್ಧ-ಹೋಗಲಾಡಿಸಲ್ಪಟ್ಟ ಶುಚೌ ಇವ - ದುಃಖವುಳ್ಳವರೋ ಎಂಬ ಹಾಗೆ) ದುಃಖವನ್ನು ಪರಿಹಾರಮಾಡಿಕೊಂಡರೋ ಎಂಬಂತೆ ಆಸ್ತಾಮ್-ಇದ್ದರು.

ತಾತ್ಪರ್ಯ. ಅಗ್ನಿಯಲ್ಲಿ ಹೊಗೆಯಿಲ್ಲದ್ದರಿಂದಲೂ ಸೂರ್ಯನು ನಿರ್ಮಲನಾಗಿ ಪ್ರಕಾಶಿಸುತ್ತಿದ್ದದ್ದರಿಂದಲೂ ಅವರಿಬ್ಬರೂ ಇನ್ನು ಮೇಲೆ ರಾವಣನ ಕಾಟವಿಲ್ಲವೆಂದು ಶೋಕವನ್ನು ಬಿಟ್ಟರೋ ಎಂಬಂತೆ ಇತ್ತು.

ವಿಗ್ರಹವಾಕ್ಯಗಳು. ೧. ಅಪಗತಃ ಧೂಮಃ ಯಸ್ಮಾತ್ ಸಃ-ಅಪಧೂಮಃ (ಪ್ರಾ.ಬ.); ಅಪಧೂಮಸ್ಯ ಭಾವಃ-ಅಪಧೂಮತ್ವಮ್(ತ.ವೃ.); ತಸ್ಮಾತ್ - ಅಪಧೂಮತ್ವಾತ್. ೨. ಪ್ರಸನ್ನಸ್ಯ ಭಾವಃ-ಪ್ರಸನ್ನತ್ವಮ್ (ತ.ವೃ.); ತಸ್ಮಾತ್ - ಪ್ರಸನ್ನತ್ವಾತ್. ೩. ಪ್ರಭಾಂ ಕರೋತೀತಿ-ಪ್ರಭಾಕರಃ (ಕೃ.ವೃ.). ೪. ರಕ್ಷಸಾ ವಿಪ್ರಕೃತೌ-ರಕ್ಷೋವಿಪ್ರಕೃತೌ (ತೃ.ತ.). ೫. ಅಪವಿದ್ಧಾ ಶುಕ್ ಯಯೋಃ ತೌ-ಅಪವಿದ್ಧಶುಚೌ (ಷ.ಬ.).

ವ್ಯಾಕರಣವಿಶೇಷ. ೧.ಅಪವಿದ್ಧಶುಚೌ-ಚಕಾರಾನ್ತ ಪುಲ್ಲಿಂಗ; ಶುಕ್‌ಶಬ್ದವು ಚಕಾರಾನ್ತ ಸ್ತ್ರೀಲಿಂಗ; (೦ಶುಕ್, ೦ಶುಚೌ, ೦ಶುಚಃ). ೨. ಆಸ್ತಾಂ (೯)-ಅಸಭೂವಿ (ಅಸ್-ಇರು) ಎಂಬ ೨ನೆಯ ಗಣದ ಧಾತುವಿನ ಲಙ್, ಪ. ಪ್ರ. ದ್ವಿ.

ವಿಚಾರ. ೭೨ನೆಯ ಶ್ಲೋಕದಿಂದ ಈ ಶ್ಲೋಕದವರೆಗೆ ರಾಮಾವತಾರ ಕಾಲಕ್ಕೆ ಆದ ಶುಭಶಕುನಗಳನ್ನು ವರ್ಣಿಸಿರುತ್ತದೆ.

ದಶಾನನಕಿರೀಟೇಭ್ಯಸ್ತತ್ಕ್ಷಣಂ ರಾಕ್ಷಸಶ್ರಿಯಃ ।
ಮಣಿವ್ಯಾಜೇನ ಪರ್ಯಸ್ತಾಃ ಪೃಥಿವ್ಯಾಮಶ್ರುಬಿನ್ದವಃ ॥೭೫॥

ಅನ್ವಯ. [ತತ್ಕ್ಷಣಂ ರಾಕ್ಷಸಶ್ರಿಯಃ ಅಶ್ರುಬಿನ್ದವಃ ದಶಾನನಕಿರೀಟೇಭ್ಯಃ ಮಣಿವ್ಯಾಜೇನ ಪೃಥಿವ್ಯಾಂ ಪರ್ಯಸ್ತಾಃ]

ಅರ್ಥ. ತತ್ಕ್ಷಣಂ-ಆ ಕ್ಷಣದಲ್ಲಿಯೆ ರಾಕ್ಷಸಶ್ರಿಯಃ- ರಾಕ್ಷಸಲಕ್ಷ್ಮಿಯ ಅಶ್ರುಬಿನ್ದವಃ-ಕಣ್ಣೀರಿನ ತೊಟ್ಟುಗಳು ದಶಾನನಕಿರೀಟೇಭ್ಯಃ-(ಹತ್ತು ತಲೆಯ)

ರಾವಣನ ಕಿರೀಟಗಳಿಂದ ಮಣಿವ್ಯಾಜೇನ-ರತ್ನಗಳ ನೆಪದಿಂದ ಪೃಥಿವ್ಯಾಂ-ಭೂಮಿಯಲ್ಲಿ ಪರ್ಯಸ್ತಾಃ-ಬಿದ್ದವು.

ವಿಗ್ರಹವಾಕ್ಯಗಳು. ೧.ದಶ ಆನನಾನಿ ಯಸ್ಯ ಸಃ-ದಶಾನನಃ (ಷ.ಬ.); ತಸ್ಯ-ದಶಾನನಸ್ಯ; ದಶಾನನಸ್ಯ ಕಿರೀಟಾನಿ- ದಶಾನನಕಿರೀಟಾನಿ (ಷ.ತ.); ತೇಭ್ಯಃ - ದಶಾನನಕಿರೀಟೇಭ್ಯಃ. ೨. ರಾಕ್ಷಸಾನಾಂ ಶ್ರೀಃ-ರಾಕ್ಷಸಶ್ರೀಃ (ಷ.ತ.); ತಸ್ಯಾಃ-ರಾಕ್ಷಸಶ್ರಿಯಃ. ೩.ಮಣೇಃ ವ್ಯಾಜಃ-ಮಣಿವ್ಯಾಜಃ (ಷ.ತ.); ತೇನ-ಮಣಿವ್ಯಾಜೇನ. ೪.ಅಶ್ರೂಣಾಂ ಬಿನ್ದವಃ-ಅಶ್ರುಬಿನ್ದವಃ (ಷ.ತ.).

ವ್ಯಾಕರಣವಿಶೇಷ. ೧.ಕಿರೀಟೇಭ್ಯಃ-ಅಗಲುವಿಕೆಯನ್ನು (separation) ತೋರಿಸುವ ಪಂಚಮೀ; ಯಾವದನ್ನು ಬಿಟ್ಟು ಅಗಲುವಿಕೆಯು ತೋರುವದೋ ಆದರ ಹೆಸರಿಗೆ ಪಂಚಮಿಯು ಬರುವದು. ೨. ಬಿನ್ದವಃ-ಉಕಾರಾನ್ತ ಪುಲ್ಲಿಂಗ.

ವಿಚಾರ. ೧.ರಾವಣನು ಹತ್ತು ತಲೆಗಳ ಮೇಲೂ ಕಿರೀಟವನ್ನು ಧರಿಸಿದ್ದನೆಂಬುದನ್ನು ಸೂಚಿಸುವದಕ್ಕೆ 'ಕಿರೀಟೇಭ್ಯಃ' ಎಂಬ ಬಹುವಚನವನ್ನು ಉಪಯೋಗಿಸಿದೆ. ೨.ಮುಂದೆ ರಾಕ್ಷಸರಿಗೆ ತೊಂದರೆಯಾಗುವದೆಂಬುದನ್ನು ಕಿರೀಟದ ರತ್ನಗಳು ಉದುರಿದವೆಂಬ ದುಃಶಕುನವು ಸೂಚಿಸಿತೆಂದು ಭಾವ.

ಪುತ್ರಜನ್ಮಪ್ರವೇಶ್ಯಾನಾಂ ತೂರ್ಯಾಣಾಂ ತಸ್ಯ ಪುತ್ರಿಣಃ ।
ಆರಮ್ಭಂ ಪ್ರಥಮಂ ಚಕ್ರುರ್ದೇವದುನ್ದುಭಯೋ ದಿವಿ ॥೭೬॥

ಅನ್ವಯ. [ಪುತ್ರಿಣಃ ತಸ್ಯ ಪುತ್ರಜನ್ಮಪ್ರವೇಶ್ಯಾನಾಂ ತೂರ್ಯಾಣಾಂ ಆರಮ್ಭಂ ಪ್ರಥಮಂ ದಿವಿ ದೇವದುನ್ದುಭಯಃ ಚಕ್ರುಃ.]

ಅರ್ಥ. ಪುತ್ರಿಣಃ-(ಉತ್ತಮವಾದ) ಮಕ್ಕಳುಳ್ಳ ತಸ್ಯ-ಆ (ದಶರಥನ) ಪುತ್ರಜನ್ಮಪ್ರವೇಶ್ಯಾನಾಂ-(ಪುತ್ರಜನ್ಮ-ಮಕ್ಕಳು ಹುಟ್ಟುವ ಕಾಲಕ್ಕೆ ಪ್ರವೇಶ್ಯಾನಾಂ-ಒಳಕ್ಕೆ ಬಿಡಬೇಕಾದ) ಮಕ್ಕಳು ಹುಟ್ಟಿದಾಗ ಬಾರಿಸಬೇಕಾದ ತೂರ್ಯಾಣಾಂ-ವಾದ್ಯಗಳ ಆರಮ್ಭಂ-ಪ್ರಾರಂಭವನ್ನು ಪ್ರಥಮಂ-ಮೊದಲು ದಿವಿ-ಸ್ವರ್ಗದಲ್ಲಿ ದೇವದುನ್ದುಭಯಃ-ದೇವತೆಗಳ ನಗಾರಿಗಳು ಚಕ್ರುಃ-ಮಾಡಿದವು.

ವಿಗ್ರಹವಾಕ್ಯಗಳು. ೧. ಪುತ್ರಾಣಾಂ ಜನ್ಮ-ಪುತ್ರಜನ್ಮ (ಷ.ತ.); ತಸ್ಮಿನ್ - ಪುತ್ರಜನ್ಮನಿ; ಪ್ರವೇಶಯಿತುಂ ಯೋಗ್ಯಾಃ-ಪ್ರವೇಶ್ಯಾಃ (ಕೃ.ತ.); ಪುತ್ರಜನ್ಮನಿ ಪ್ರವೇಶ್ಯಾಃ-ಪುತ್ರಜನ್ಮಪ್ರವೇಶ್ಯಾಃ (ಸ.ತ.). ೨.(ಪ್ರಶಸ್ತಾಃ) ಪುತ್ರಾಃ ಅಸ್ಯ ಸನ್ತೀತಿ - ಪುತ್ರೀ (ತ.ವೃ.); ತಸ್ಯ-ಪುತ್ರಿಣಃ. ೩.ದೇವಾನಾಂ ದುನ್ದುಭಯಃ-ದೇವದುನ್ದುಭಯಃ (ಷ.ತ.).

ವ್ಯಾಕರಣವಿಶೇಷ. ೧. ಪ್ರಥಮಂ-ಕ್ರಿಯಾವಿಶೇಷಣ, ಅವ್ಯಯ. ೨. ದುನ್ದುಭಯಃ - ಇಕಾರಾನ್ತ ಪುಲ್ಲಿಂಗ. ೩. ದಿವಿ-ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ. ೪. ಚಕ್ರುಃ (೨೦)-ಡುಕೃಞ್ ಕರಣೇ (ಕೃ-ಮಾಡು) ಎಂಬ ೮ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಬ.

ವಿಚಾರ. ಅರಮನೆಯಲ್ಲಿ ಪುತ್ರಾನಂದಸೂಚಕವಾದ ವಾದ್ಯಗಳು ಆಗುವ ದಕ್ಕೆ ಮೊದಲು ದೇವತೆಗಳು ನಗಾರಿಯನ್ನು ಬಾರಿಸಿದರು ಎಂದದ್ದರಿಂದ ದಶರಥ ನಿಗಿಂತಲೂ ದೇವತೆಗಳಿಗೆ ಹೆಚ್ಚಿನ ಆನಂದವಾಯಿತೆಂದು ಹೇಳಿದ ಹಾಗಾಯಿತು.

ಸಂತಾನಕಮಯೀವೃಷ್ಟಿರ್ಭವನೇ ಚಾಸ್ಯ ಪೇತುಷೀ ।
ಸನ್ಮಙ್ಗಲೋಪಚಾರಾಣಾಂ ಸೈವಾದಿರಚನಾಭವತ್ ॥೭೭॥

ಅನ್ವಯ. [ಅಸ್ಯ ಭವನೇ ಸನ್ತಾನಕಮಯೀ ವೃಷ್ಟಿಃ ಚ ಪೇತುಷೀ, ಸಾ ಏವ ಸನ್ಮಙ್ಗಲೋಪಚಾರಾಣಾಂ ಆದಿರಚನಾ ಅಭವತ್.]

ಅರ್ಥ. ಅಸ್ಯ-ಈ (ರಾಜನ) ಭವನೇ-ಮನೆಯಲ್ಲಿ ಸನ್ತಾನಕಮಯೀ-ಸನ್ತಾನಕುಸುಮಗಳಿಂದಾಗಿರುವ ವೃಷ್ಟಿಶ್ಚ-ಮಳೆಯೂ ಕೂಡ ಪೇತುಷೀ - ಬಿದ್ದದ್ದು (ಆಯಿತು.) ಸೈವ-ಅದೇ ಸನ್ಮಙ್ಗಲೋಪಚಾರಾಣಾಂ-(ಸನ್-ಉತ್ತಮವಾದ ಮಙ್ಗಲ-ಮಂಗಲಕರವಾದ ಉಪಚಾರಾಣಾಂ-ಉಪಚಾರಗಳಿಗೆ) ಒಳ್ಳೆಯ ಮಂಗಲ ಕರವಾದ ಕಾರ್ಯಗಳಿಗೆ ಆದಿರಚನಾ-ಮೊದಲನೆಯ ಕೆಲಸವಾಗಿ ಅಭವತ್ ಆಯಿತು.

ತಾತ್ಪರ್ಯ. ಸಂತಾನವೃಕ್ಷದ ಹೂವಿನ ಮಳೆಯನ್ನು ದೇವತೆಗಳು ಅರಮನೆ ಯಲ್ಲಿ ಕರೆದರು. ಅಲ್ಲಿಂದ ಮುಂದಕ್ಕೆ ಅನೇಕ ಮಂಗಲ ಕ್ರಿಯೆಗಳೂ ನಡೆದವು.

ವಿಗ್ರಹವಾಕ್ಯಗಳು. ೧. ಸನ್ತಾನ ಏವ-ಸನ್ತಾನಕಃ (ತ.ವೃ.); ಸನ್ತಾನಕಸ್ಯ ಅವಯವಾಃ-ಸನ್ತಾನಕಾನಿ (ತ.ವೃ.); ತೇಷಾಂ-ಸನ್ತಾನಕಾನಾಂ; ಸನ್ತಾನಕಾನಾಂ ವಿಕಾರಃ-ಸನ್ತಾನಕಮಯೀ (ತ.ವೃ.). ೨. ಸನ್ತಿ ಚ ತಾನಿ ಮಙ್ಗಲಾನಿ ಚ-ಸನ್ಮಙ್ಗಲಾನಿ (ವಿ. ಪೂ. ಕ.); ತೇಷಾಂ-ಸನ್ಮಙ್ಗಲಾನಾಮ್; ಸನ್ಮಙ್ಗಲಾನಾಂ ಉಪಚಾರಾಃ - ಸನ್ಮಙ್ಗಲೋಪಚಾರಾಃ (ಷ.ತ.); ತೇಷಾಂ - ಸನ್ಮಙ್ಗಲೋಪಚಾರಾಣಾಮ್ ೩. ಆದಿಶ್ಚ ಅಸೌ ರಚನಾ ಚ-ಆದಿರಚನಾ (ವಿ. ಪೂ. ಕ.).

ವ್ಯಾಕರಣವಿಶೇಷ. ೧. ಸನ್ತಾನಕಮಯೀ-ಸನ್ತಾನಶಬ್ದವು ಮರವೆಂದರ್ಥವಾದರೆ ಪುಲ್ಲಿಂಗ, ಹೂವೆಂದಾದರೆ ನಪುಂಸಕ; ಇಲ್ಲಿ ನಪುಂಸಕ ಮಯಟ್ (=ಮಯ) ಪ್ರತ್ಯಯವು ವಿಕಾರವೆಂಬರ್ಥದಲ್ಲಿ ಬಂದಿದೆ. ಇದಕ್ಕೆ ಸ್ತ್ರೀಲಿಂಗದಲ್ಲಿ ಯಾವಾಗಲೂ ಜೀಪ್ (ಈ) ಪ್ರತ್ಯಯವು ಬರುವದು. ೨. ಪೇತುಷೀ-ಪತ್‌ಧಾತುವಿಗೆ ಭೂತಕಾಲವನ್ನು ಹೇಳುವದಕ್ಕೆ ಕ್ವಸುಪ್ರತ್ಯಯವು ಸೇರಿ, ಆಗಿರುವ ಪೇತಿವಸ್ ಶಬ್ದಕ್ಕೆ ಸ್ತ್ರೀ

ಲಿಂಗದಲ್ಲಿ ಜೀಪ್ (ಈ) ಪ್ರತ್ಯಯವು ಬಂದಿದೆ. ಭೂತಸಾಮಾನ್ಯವನ್ನು ಹೇಳುವದಕ್ಕೆ ವೇದದಲ್ಲಿ ಲಿಟ್‌ಪ್ರಯೋಗವನ್ನು ಮಾಡುತ್ತದೆ; ಅದಕ್ಕೆ ಕ್ವಸು ಎಂಬ ಆದೇಶವೂ ಬರುತ್ತದೆ. ಕಾವ್ಯದಲ್ಲಿಯೂ ಈ ಪ್ರಯೋಗವು ಕೆಲವು ಕಡೆ ಕಂಡುಬರುತ್ತದೆ.

ವಿಚಾರ. ಸಂತಾನವೆಂಬುದು ದೇವಲೋಕದ ಕಲ್ಪವೃಕ್ಷಗಳಲ್ಲಿ ಒಂದು. ೧೧ನೆಯ ಶ್ಲೋಕದ ವಿಚಾರವನ್ನು (ಪು. ೧೭೦) ನೋಡಿ.

ಕುಮಾರಾಃ ಕೃತಸಂಸ್ಕಾರಾಸ್ತೇ ಧಾತ್ರೀಸ್ತನ್ಯಪಾಯಿನಃ ।
ಆನನ್ದೇನಾಗ್ರಜೇನೇವ ಸಮಂ ವವೃಧಿರೇ ಪಿತುಃ ॥೭೮॥

ಅನ್ವಯ. [ಕೃತಸಂಸ್ಕಾರಾಃ ಧಾತ್ರೀಸ್ತನ್ಯಪಾಯಿನಃ ತೇ ಕುಮಾರಾಃ ಅಗ್ರಜೇನ ಇವ ಪಿತುಃ ಆನನ್ದೇನ ಸಮಂ ವವೃಧಿರೇ]

ಅರ್ಥ. ಕೃತಸಂಸ್ಕಾರಾಃ-(ಕೃತ-ಮಾಡಲ್ಪಟ್ಟ ಸಂಸ್ಕಾರಾಃ-ಸಂಸ್ಕಾರಗಳುಳ್ಳ) ಸಂಸ್ಕಾರಗಳನ್ನು ಹೊಂದಿರುವವರಾಗಿಯೂ ಧಾತ್ರೀಸ್ತನ್ಯಪಾಯಿನಃ-(ಧಾತ್ರೀ-ದಾದಿಯರ ಸ್ತನ್ಯ-ಮೊಲೆಹಾಲನ್ನು ಪಾಯಿನಃ-ಕುಡಿಯುವ) ದಾದಿಯರ ಮೊಲೆಹಾಲನ್ನು ಕುಡಿಯುತ್ತಿರುವವರಾಗಿಯೂ ಇರುವ ತೇ-ಆ ಕುಮಾರಾಃ- ಹುಡುಗರು ಅಗ್ರಜೇನೇವ- ಅಣ್ಣನೊಡನೆ ಹೇಗೋ ಹಾಗೆ ಪಿತುಃ-ತಂದೆಯ ಆನನ್ದೇನ ಸಮಂ-ಆನಂದದೊಡನೆ ವವೃಧಿರೇ-ಬೆಳೆಯುತ್ತಿದ್ದರು.

ವಿಗ್ರಹವಾಕ್ಯಗಳು. ೧.ಕೃತಾಃ ಸಂಸ್ಕಾರಾಃ ಯೇಷಾಂ ತೇ-ಕೃತಸಂಸ್ಕಾರಾಃ (ಷ.ಬ.). ೨.ಧಾತ್ರೀಣಾಂ ಸ್ತನ್ಯಂ-ಧಾತ್ರೀಸ್ತನ್ಯಮ್ (ಷ.ತ.) ಧಾತ್ರೀಸ್ತನ್ಯಂ ಪಿಬನ್ತೀತಿ-ಧಾತ್ರೀಸ್ತೇನ್ಯಪಾಯಿನಃ (ಉಪ.ಸ.). ೩.ಅಗ್ರೇ ಜಾತಃ-ಅಗ್ರಜಃ (ಉಪ.ಸ.); ತೇನ-ಅಗ್ರಜೇನ.

ವ್ಯಾಕರಣವಿಶೇಷ. ೧.ಆನನ್ದೇನ, ಅಗ್ರಜೇನ-ಒಡನೆ ಎಂದರ್ಥದ 'ಸಮಂ' ಶಬ್ದದ ಯೋಗವಿರುವದರಿಂದ ತೃತೀಯಾವಿಭಕ್ತಿ ಬಂದಿದೆ. ೨.ವವೃಧಿರೇ (೨೪)-ವೃಧುವೃದ್ಧೌ (ವೃಧ್-ಬೆಳೆ) ಎಂಬ ೧ನೆಯ ಗಣದ ಧಾತುವಿನ ಲಿಟ್, ಆ. ಪ್ರ.ಬ.

ವಿಚಾರ. ೧.ಮಕ್ಕಳು ಹುಟ್ಟುವದಕ್ಕಿಂತ ಮೊದಲೆ ಆನಂದವುಂಟಾಯಿತಾದ್ದರಿಂದ ಅದು ಅವರಿಗೆ ಅಗ್ರಜ(ಅಣ್ಣ)ನಾಯಿತು. ೨.ಮಕ್ಕಳು ಬೆಳೆದ ಹಾಗೆಲ್ಲ ತಂದೆಗೆ ಆನಂದವು ಹೆಚ್ಚುತ್ತಲಿತ್ತು ಎಂದರ್ಥ. ೩.ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಾಮಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ಗೋದಾನ, ಸಮಾವರ್ತನ, ವಿವಾಹ-ಇವೇ ಹನ್ನೆರಡು ಸಂಸ್ಕಾರಗಳು ಎಂದು ಮನುಸ್ಮೃತಿಯಲ್ಲಿದೆ. ಹದಿನಾರು ಸಂಸ್ಕಾರಗಳೆಂದೂ

ನಲವತ್ತೆಂಟು ಸಂಸ್ಕಾರಗಳೆಂದೂ ಮತಾಂತರ. ಈ ಶ್ಲೋಕದಲ್ಲಿ ಹೇಳಿರುವ ಕಾಲಕ್ಕೆ ಮೊದಲನೆಯ ಆರು ಸಂಸ್ಕಾರಗಳು ಆಗಿರಬೇಕು.

ಸ್ವಾಭಾವಿಕಂ ವಿನೀತತ್ವಂ ತೇಷಾಂ ವಿನಯಕರ್ಮಣಾ ।
ಮುಮೂರ್ಛ ಸಹಜಂ ತೇಜೋ ಹವಿಷೇವ ಹವಿರ್ಭುಜಾಮ್ ॥೭೯॥

ಅನ್ವಯ. [ತೇಷಾಂ ಸ್ವಾಭಾವಿಕಂ ವಿನೀತತ್ವಂ ವಿನಯಕರ್ಮಣಾ ಹವಿರ್ಭುಜಾಂ ಸಹಜಂ ತೇಜಃ ಹವಿಷಾ ಇವ ಮುಮೂರ್ಛ.]

ಅರ್ಥ. ತೇಷಾಂ-ಅವರ ಸ್ವಾಭಾವಿಕಂ-ಸಹಜವಾದ ವಿನೀತತ್ವಂ-ವಿನಯವು ವಿನಯಕರ್ಮಣಾ-ಶಿಕ್ಷೆಯಿಂದ ಹವಿರ್ಭುಜಾಂ-ಅಗ್ನಿಗಳ ಸಹಜಂ-ಸಹಜವಾದ ತೇಜಃ- ಕಾಂತಿಯು ಹವಿಷಾ ಇವ-ಹವಿಸ್ಸಿನಿಂದ ಹೇಗೋ ಹಾಗೆ ಮುಮೂರ್ಛ - ಬೆಳೆಯುತ್ತಿತ್ತು.

ತಾತ್ಪರ್ಯ. ಅಗ್ನಿಗೆ ತುಪ್ಪವೇ ಮುಂತಾದ ಹವಿಸ್ಸನ್ನು ಹಾಕಿದರೆ ಅದರ ಕಾಂತಿಯು ಇನ್ನೂ ಹೆಚ್ಚಾಗುವಂತೆ ಸ್ವಭಾವವಾಗಿಯೇ ಅವರಲ್ಲಿದ್ದ ವಿನಯವು ವಿದ್ಯಾಭ್ಯಾಸದಿಂದ ಮತ್ತೂ ಹೆಚ್ಚುತ್ತಿತ್ತು.

ವಿಗ್ರಹವಾಕ್ಯಗಳು. ೧.ಸ್ವಶ್ಚ ಅಸೌ ಭಾವಶ್ಚ -ಸ್ವಭಾವಃ (ಷ.ತ.); ತಸ್ಮಿನ್ - ಸ್ವಭಾವೇ; ಸ್ವಭಾವೇ ಭವಮ್-ಸ್ವಾಭಾವಿಕಮ್(ತ.ವೃ.). ೨.ವಿನೀತನಾಂ ಭಾವಃ - ವಿನೀತತ್ವಮ್ (ತ.ವೃ.). ೩.ವಿನೀಯನ್ತೇ ಅನೇನೇತಿ-ವಿನಯಃ (ಕೃ. ವೃ.); ತಸ್ಯ-ವಿನಯಸ್ಯ; ವಿನಯಸ್ಯ ಕರ್ಮ-ವಿನಯಕರ್ಮ (ಷ.ತ.); ತೇನ - ವಿನಯ ಕರ್ಮಣಾ ೪.ಸಹಜಾಯತೇ ಇತಿ-ಸಹಜಮ್ (ಉಪ.ಸ.). ೫. ಹವೀಂಷಿ ಭುಞ್ಜತೇ ಇತಿ- ಹವಿರ್ಭುಜಃ (ಉಪ.ಸ.); ತೇಷಾಂ-ಹವಿರ್ಭುಜಾಮ್.

ವ್ಯಾಕರಣವಿಶೇಷ. ೧.ತೇಜಃ-ಸಕಾರಾನ್ತ ನಪುಂಸಕ. ೨.ಕರ್ಮಣಾ-ನಕಾರಾನ್ತ ನಪುಂಸಕ. ೩.ಹವಿಷಾ-ಸಕಾರಾನ್ತ ನಪುಂಸಕ; (ಹವಿಃ, ಹವಿಷೀ, ಹವೀಂಷಿ.). ೪.ಹವಿರ್ಭುಜಾಮ್-ಜಕಾರಾನ್ತ ಪುಲ್ಲಿಂಗ; (ಹವಿರ್ಭುಕ್, ಂಭುಜೌ, ಂಭುಜಃ) ೫.ಮುಮೂರ್ಛ (೧೩)- ಮುರ್ಛಾ ಮೋಹಸಮುಚ್ಛ್ರಾಯಯೋಃ (ಮೂರ್ಛ-ಮೈಮರೆ, ಹೆಚ್ಚಾಗು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಏ.

ವಿಚಾರ. ಸ್ವಾಭಾವಿಕಂ, ಸಹಜಂ-ಎಂದು ಎರಡು ಸಲ ಹೇಳಿರುವದು ಪುನರುಕ್ತಿಯಾಗಿದೆ. ಅರ್ಥಾವೃತ್ತಿ ಎಂಬ ಅಲಂಕಾರದ ಅಭಿಪ್ರಾಯದಿಂದ ಕವಿಯು ಎರಡು ಮಾತುಗಳನ್ನು ಉಪಯೋಗಿಸಿರುತ್ತಾನೆ-ಎಂದು ಒಬ್ಬ ವ್ಯಾಖ್ಯಾನಕಾರರು ಬರೆದಿರುತ್ತಾರೆ.

ಪರಸ್ಪರಾವಿರುದ್ಧಾಸ್ತೇ ತದ್ರಘೋರನಘಂ ಕುಲಮ್ ।
ಅಲಮುದ್ದ್ಯೋತಯಾಮಾಸುರ್ದೇವಾರಣ್ಯಮಿವರ್ತವಃ ॥೮೦॥

ಅನ್ವಯ. [ಪರಸ್ಪರಾವಿರುದ್ಧಾಃ ತೇ ತತ್ ಅನಘಂ ರಘೋಃ ಕುಲಮ್ ಋತವಃ ದೇವಾರಣ್ಯಂ ಇವ ಅಲಂ ಉದ್ದ್ಯೋತಯಾಮಾಸುಃ.]

ಅರ್ಥ. ಪರಸ್ಪರಾವಿರುದ್ಧಾಃ (ಪರಸ್ಪರ-ಒಬ್ಬರಿಗೊಬ್ಬರು ಅವಿರುದ್ಧಾಃ - ದ್ವೇಷವಿಲ್ಲದ)- ಒಬ್ಬರಲ್ಲೊಬ್ಬರು ಪ್ರೀತಿಯುಳ್ಳ ತೇ-ಆ (ಮಕ್ಕಳು) ತತ್-ಆ ಅನಘಂ-ಪಾಪರಹಿತವಾದ ರಘೋಃ-ರಘುವಿನ ಕುಲಂ-ವಂಶವನ್ನು ಋತವಃ-ಋತುಗಳು ದೇವಾರಣ್ಯಂ ಇವ- ದೇವತೆಗಳ ನಂದನವನವನ್ನು ಹೇಗೋ ಹಾಗೆ ಅಲಂ-ಬಹಳವಾಗಿ ಉದ್ದ್ಯೋತಯಾಮಾಸುಃ-ಬೆಳಗುತ್ತಿದ್ದರು.

ತಾತ್ಪರ್ಯ. ನಂದನವನದಲ್ಲಿ ಎಲ್ಲಾ ಋತುಗಳ ಧರ್ಮಗಳೂ ಒಂದಕ್ಕೊಂದು ವಿರೋಧವಿಲ್ಲದಂತೆ ಹೊಂದಿಕೊಂಡಿರುವ ಹಾಗೆ ಆ ಅಣ್ಣತಮ್ಮಂದಿರೆಲ್ಲರೂ ಒಬ್ಬರಲ್ಲೊಬ್ಬರು ಬಹು ಪ್ರೀತಿಯಿಂದ ಕೂಡಿದ್ದದ್ದರಿಂದ ರಘುವಂಶಕ್ಕೇ ಭೂಷಣರಾದರು.

ವಿಗ್ರಹವಾಕ್ಯಗಳು. ೧.ನ ವಿರುದ್ಧಾಃ-ಅವಿರುದ್ಧಾಃ (ನ.ತ.); ಪರಸ್ಪರಂ ಅವಿರುದ್ಧಾಃ-ಪರಸ್ಪರಾವಿರುದ್ಧಾಃ (ಸಾ.ಸ.). ೨.ಅವಿದ್ಯಮಾನಂ ಅಘಂ ಯಸ್ಯ ತತ್-ಅನಘಮ್ (ನ.ಬ.). ೩.ದೇವಾನಾಂ ಅರಣ್ಯಂ-ದೇವಾರಣ್ಯಮ್ (ಷ.ತ.).

ವ್ಯಾಕರಣವಿಶೇಷ. ೧.ಪರಸ್ಪರಾವಿರುದ್ಧಾಃ-ಪರಸ್ಪರ ಎಂಬುದು ಅನ್ಯೋನ್ಯವೆಂಬರ್ಥದ ಸರ್ವನಾಮ (reciprocal pronoun); ಈ ಅರ್ಥದಲ್ಲಿ ದ್ವಿರುಕ್ತಿ ಬರುವ ಇತರ ಶಬ್ದವು ಇತರೇತರ ಎಂಬ ಸಮಾನರೂಪವನ್ನು ಹೊಂದುವದು; ಅನ್ಯ, ಪರ-ಈ ಶಬ್ದಗಳಿಗೆ ಎಲ್ಲಾ ವಿಭಕ್ತಿಗಳಲ್ಲೂ ಹಿಂದಿನ ಪದಕ್ಕೆ 'ಅನ್ಯಃ', 'ಪರಃ' ಎಂಬ ರೂಪವು ಬರುವದು; ಪರಸ್ಪರಶಬ್ದದಲ್ಲಿ ವಿಸರ್ಗಕ್ಕೆ ಸಕಾರಾದೇಶವು ಬರುವದು. ಪರಸ್ಪರೈಃ ಅವಿರುದ್ಧಾಃ ಎಂದೂ ವಿಗ್ರಹಬಿಡಿಸಬಹುದು. ೨.ಉದ್ದ್ಯೋತಯಾಮಾಸುಃ (೧೪)-ದ್ಯುತ ದೀಪ್ತೌ (ದ್ಯುತ್-ಹೊಳೆ) ಎಂಬ ೧ನೆಯ ಗಣದ ಧಾತುವಿನ ಣಿಜನ್ತ (causative); ಉತ್ ಎಂಬ ಉಪಸರ್ಗವು ಸೇರಿ ಬೆಳಗು ಎಂದು ಅರ್ಥವಾಗಿದೆ-ಲಿಟ್, ಪ. ಪ್ರ. ಬ. ೨.ಅಲಂ-ಅವ್ಯಯ.

ಸಮಾನೇಽಪಿ ಹಿ ಸೌಭ್ರಾತ್ರೇ ಯಥೋಭೌ ರಾಮಲಕ್ಷ್ಮಣೌ ।
ತಥಾ ಭರತಶತ್ರುಘ್ನೌ ಪ್ರೀತ್ಯಾದ್ವನ್ದ್ವಂ ಬಭೂವತುಃ ॥೮೧॥

ಅನ್ವಯ. [ಸೌಭ್ರಾತ್ರೇ ಸಮಾನೇ ಅಪಿ ಹಿ ಯಥಾ ರಾಮಲಕ್ಷ್ಮಣೌ ಉಭೌ ಪ್ರೀತ್ಯಾ ದ್ವನ್ದ್ವಂ ಬಭೂವತುಃ ತಥಾ ಭರತಶತ್ರುಘ್ನೌ (ಪ್ರೀತ್ಯಾ ದ್ವನ್ದ್ವಂ ಬಭೂವತುಃ.]

ಅರ್ಥ. ಸೌಭ್ರಾತ್ರೇ-ಸಹೋದರಪ್ರೀತಿಯು ಸಮಾನೇಽಪಿ-ಸಮವಾಗಿದ್ದರೂ ಯಥಾ-ಹೇಗೆ ರಾಮಲಕ್ಷ್ಮಣೌ-ರಾಮಲಕ್ಷ್ಮಣರು ಉಭೌ-ಇಬ್ಬರು ಪ್ರೀತ್ಯಾ-ಪ್ರೀತಿಯಿಂದ ದ್ವಂದ್ವಂ-ಜೊತೆಯು ಬಭೂವತುಃ-ಆಗಿದ್ದರೋ ತಥಾ-ಹಾಗೆಯೇ ಭರತಶತ್ರುಘ್ನೌ- ಭರತಶತ್ರುಘ್ನರು (ಪ್ರೀತ್ಯಾ ದ್ವಂದ್ವಂ ಬಭೂವತುಃ-ಪ್ರೀತಿಯಿಂದ ಜೊತೆಯಾಗಿ ಇದ್ದರು)

ವಿಗ್ರಹವಾಕ್ಯಗಳು. ೧.ಶೋಭನಾಃ ಭ್ರಾತರಃ ಯೇಷಾಂ ತೇ-ಸುಭ್ರಾತರಃ (ಷ.ಬ.); ತೇಷಾಂ-ಸುಭ್ರಾತೃಣಾಂ; ಸುಭ್ರಾತೃಣಾಂ ಭಾವಃ-ಸೌಭ್ರಾತ್ರಮ್ (ತ.ವೃ.); ತಸ್ಮಿನ್-ಸೌಭ್ರಾತ್ರೇ. ೨.ರಾಮಶ್ಚ ಲಕ್ಷ್ಮಣಶ್ಚ-ರಾಮಲಕ್ಷ್ಮಣೌ (ದ್ವ.ಸ.). ೩. ಭರತಶ್ಚ ಶತ್ರುಘ್ನಶ್ಚ- ಭರತಶತ್ರುಘ್ನೌ (ದ್ವ.ಸ.).

ವ್ಯಾಕರಣವಿಶೇಷ. ೧.ಸುಭ್ರಾತರಃ-ಋಕಾರಾನ್ತವಾದ ಉತ್ತರಪದವಿರುವ ಬಹುವ್ರೀಹಿಗೆ ಕಪ್ (ಕ) ಪ್ರತ್ಯಯವು ಬರಬೇಕು. ಉದಾ: ಬಹುಕರ್ತೃಕಃ; ಮೂರ್ಖಭ್ರಾತೃಕಃ; ಆದರೆ ಪೂಜಿತವಾದ (good) ಸಹೋದರನೆಂಬರ್ಥದ ಭ್ರಾತೃಶಬ್ದಕ್ಕೆ ಈ ಪ್ರತ್ಯಯವು ಬರುವದಿಲ್ಲ. ೨.ಸೌಭ್ರಾತ್ರಮ್-ಇಲ್ಲಿ ಭಾವಾರ್ಥದಲ್ಲಿ ಅಣ್ (ಅ) ಪ್ರತ್ಯಯವು ಬಂದಿದೆ. ೩.ಉಭೌ-ನಿತ್ಯದ್ವಿವಚನ ೪.ದ್ವಂದ್ವಮ್-ದ್ವಿಶಬ್ದಕ್ಕೆ ಜೊತೆಯಾಗಿರುವದು ಎಂಬರ್ಥದಲ್ಲಿ ದ್ವಂದ್ವವೆಂಬ ರೂಪವಾಗುವದು. ೫.ಬಭೂವತುಃ (೧೩)-ಭೂ ಸತ್ತಾಯಾಂ (ಭೂ-ಇರು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ದ್ವಿ.

ತೇಷಾಂ ದ್ವಯೋರ್ದ್ವಯೋರೈಕ್ಯಂ ಬಿಭಿದೇ ನ ಕದಾಚನ ।
ಯಥಾ ವಾಯುವಿಭಾವಸ್ವೋರ್ಯಥಾ ಚನ್ದ್ರಸಮುದ್ರಯೋಃ ॥೮೨॥

ಅನ್ವಯ. [ತೇಷಾಂ ದ್ವಯೋಃ ದ್ವಯೋಃ ಯಥಾ ವಾಯುವಿಭಾವಸ್ವೋಃ ಯಥಾ ಚನ್ದ್ರಸಮುದ್ರಯೋಃ ಐಕ್ಯಂ ಕದಾಚನ ನ ಬಿಭಿದೇ.]

ಅರ್ಥ. ತೇಷಾಂ-ಅವರುಗಳಲ್ಲಿ ದ್ವಯೋಃ ದ್ವಯೋಃ-ಇಬ್ಬರಿಬ್ಬರಿಗೆ ಯಥಾ - ಹೇಗೆ ವಾಯುವಿಭಾವಸ್ವೋಃ-ಗಾಳಿಬೆಂಕಿಗಳಿಗೋ ಯಥಾ-ಹೇಗೆ ಚಂದ್ರಸಮುದ್ರಯೋಃ-ಚಂದ್ರಸಮುದ್ರಗಳಿಗೋ (ತಥಾ-ಹಾಗೆ) ಐಕ್ಯಂ-ಐಕಮತ್ಯವು ನ ಬಿಭಿದೇ- ಬೇರ್ಪಡುತ್ತಿರಲಿಲ್ಲ

ವಿಗ್ರಹವಾಕ್ಯಗಳು. ೧.ಏಕಸ್ಯ ಭಾವಃ-ಐಕ್ಯಮ್(ತ.ವೃ.).೨.ವಾಯುಶ್ಚ ವಿಭಾವಸುಶ್ಚ-ವಾಯುವಿಭಾವಸೂ (ದ್ವ.ಸ.); ತಯೋಃ- ವಾಯುವಿಭಾವಸ್ವೋಃ. ೩.ಚನ್ದ್ರಶ್ಚ ಸಮುದ್ರಶ್ಚ-ಚನ್ದ್ರಸಮುದ್ರೌ(ದ್ವ.ಸ.);ತಯೋಃ-ಚನ್ದ್ರಸಮುದ್ರಯೋಃ.

ವ್ಯಾಕರಣವಿಶೇಷ. ನ ಕದಾಚನ-ಕದಾ ಎಂದರೆ ಯಾವಾಗ; ಇದಕ್ಕೆ ಚನ, ಅಪಿ-ಎಂಬ ಮಾತುಗಳು ಸೇರಿದರೆ 'ಯಾವಾಗಲೋ' (at some time) ಯಾವಾಗಲೂ (ಇಲ್ಲ)' (at any

time, never) ಎಂಬರ್ಥಗಳು ಬರುವವು. ೨.ಬಿಭಿದೆ (೨೪)- ಭಿದಿರ್ ವಿದಾರಣೇ (ಭಿದ್-ಸೀಳು) ಎಂಬ ೭ನೆಯ ಗಣದ ಧಾತುವಿನ ಕರ್ಮ ಕರ್ತರಿ (reflexive) ಲಿಟ್, ಆ. ಪ್ರ. ಏ.

ವಿಚಾರ. ವಾಯುವಹ್ನಿಗಳ ಉಪಮಾನದಿಂದ ರಾಮಲಕ್ಷ್ಮಣರೂ ಭರತ ಶತ್ರುಘ್ನರೂ ಒಂದೇ ಕಾರ್ಯದಲ್ಲಿ ಸೇರಿದ್ದರೆಂಬ ಅರ್ಥವನ್ನೂ ಚಂದ್ರಸಮುದ್ರಗಳ ಉಪಮಾನದಿಂದ ಸಮಾನವಾದ ಸುಖದುಃಖವುಳ್ಳವರಾಗಿದ್ದರೆಂಬುದನ್ನೂ ತಿಳಿಸಿರುತ್ತದೆ.

ತೇ ಪ್ರಜಾನಾಂ ಪ್ರಜಾನಾಥಾಸ್ತೇಜಸಾ ಪ್ರಶ್ರಯೇಣ ಚ ।
ಮನೋ ಜಹ್ರುರ್ನಿದಾಘಾನ್ತೇ ಶ್ಯಾಮಾಭ್ರಾ ದಿವಸಾ ಇವ ॥೮೩॥

ಅನ್ವಯ. [ಪ್ರಜಾನಾಥಾಃ ತೇ ತೇಜಸಾ ಪ್ರಶ್ರಯೇಣ ಚ ನಿದಾಘಾನ್ತೇ ಶ್ಯಾಮಾಭ್ರಾಃ ದಿವಸಾ ಇವ ಪ್ರಜಾನಾಂ ಮನಃ ಜಹ್ರುಃ.]

ಅರ್ಥ. ಪ್ರಜಾನಾಥಾಃ-(ಪ್ರಜಾ-ಪ್ರಜೆಗಳ ನಾಥಾಃ-ಒಡೆಯರಾದ) ರಾಜಕುಮಾರರಾದ ತೇ-ಅವರು ತೇಜಸಾ-ಪ್ರಭಾವದಿಂದಲೂ ಪ್ರಶ್ರಯೇಣ ಚ-ವಿನಯದಿಂದಲೂ ನಿದಾಘಾನ್ತೇ-ಬೇಸಗೆಯ ಕೊನೆಯಲ್ಲಿ ಶ್ಯಾಮಾಭ್ರಾಃ-(ಶ್ಯಾಮ-ಕಪ್ಪಾದ ಅಭ್ರಾಃ-ಮೋಡಗಳುಳ್ಳ) ಕರಿಯ ಮೋಡಗಳಿಂದ ಕೂಡಿದ ದಿವಸಾ ಇವ-ದಿನಗಳ ಹಾಗೆ ಪ್ರಜಾನಾಂ-ಪ್ರಜೆಗಳ ಮನಃ-ಮನಸ್ಸನ್ನು ಜಹ್ರುಃ-ಅಪಹರಿಸುತ್ತಿದ್ದರು.

ತಾತ್ಪರ್ಯ. ಬೇಸಗೆಯು ಮುಗಿದ ಮೇಲೆ ಮೋಡದ ದಿನಗಳು ಹೆಚ್ಚು ಶೀತವಾಗಿಯೂ ಹೆಚ್ಚು ಉಷ್ಣವಾಗಿಯೂ ಇಲ್ಲದ್ದರಿಂದ ಜನರಿಗೆ ಹಿತವಾಗಿರುವ ಹಾಗೆ ಆ ಮಕ್ಕಳು ಪ್ರಭಾವದಿಂದಲೂ ವಿನಯದಿಂದಲೂ ಎಲ್ಲಾ ಜನರ ಮೆಚ್ಚಿಕೆಗೂ ಪಾತ್ರರಾಗಿದ್ದರು.

ವಿಗ್ರಹವಾಕ್ಯಗಳು. ೧.ಪ್ರಜಾನಾಂ ನಾಥಾಃ-ಪ್ರಜಾನಾಥಾಃ(ಷ.ತ.). ೨.ನಿದಾಘಸ್ಯ ಅನ್ತಃ-ನಿದಾಘಾನ್ತಃ(ಷ.ತ.); ತಸ್ಮಿನ್-ನಿದಾಘಾನ್ತೇ.

ವ್ಯಾಕರಣವಿಶೇಷ. ೧.ಪ್ರಜಾನಾಂ-ಆಕಾರಾನ್ತ ಸ್ತ್ರೀಲಿಂಗ. ೨.ತೇಜಸಾ, ಮನಃ - ಸಕಾರಾನ್ತ ನಪುಂಸಕಲಿಂಗ ೩.ಜಹ್ರುಃ(೨೦)-ಹೃಞ್ ಹರಣೇ (ಹೃ-ಒಯ್ಯು, ತೆಗೆದುಕೊ, ಕದಿ, ನಾಶಮಾಡು) ಎಂಬ ೧ನೆಯ ಗಣದ ಧಾತುವಿನ ಲಿಟ್, ಪ. ಪ್ರ. ಬ.

ಸ ಚತುರ್ಧಾ ಬಭೌ ವ್ಯಸ್ತಃ ಪ್ರಸವಃ ಪೃಥಿವೀಪತೇಃ ।
ಧರ್ಮಾರ್ಥಕಾಮಮೋಕ್ಷಾಣಾಮವತಾರ ಇವಾಙ್ಗವಾನ್[೧] ॥೮೪॥

ಅನ್ವಯ. [ಸಃ ಚತುರ್ಧಾ ವ್ಯಸ್ತಃ ಪೃಥಿವೀಪತೇಃ ಪ್ರಸವಃ ಅಙ್ಗವಾನ್ ಧರ್ಮಾರ್ಥಕಾಮಮೋಕ್ಷಾಣಾಂ ಅವತಾರಃ ಇವ ಬಭೌ.]

ಅರ್ಥ. ಸಃ-ಆ ಚತುರ್ಧಾ-ನಾಲ್ಕು ಬಗೆಯಾಗಿ ವ್ಯಸ್ತಃ-ವಿಂಗಡವಾಗಿದ್ದ ಪೃಥಿವೀಪತೇಃ- (ಪೃಥಿವೇ-ಭೂಮಿಯ ಪತೇಃ-ಒಡೆಯನ) ರಾಜನ ಪ್ರಸವಃ- ಸಂತಾನವು ಅಙ್ಗವಾನ್-ಶರೀರವುಳ್ಳ ಧರ್ಮಾರ್ಥಕಾಮಮೋಕ್ಷಾಣಾಂ-ಧರ್ಮಾರ್ಥಕಾಮಮೋಕ್ಷಗಳ ಅವತಾರ ಇವ-ಅವತಾರದ ಹಾಗೆ ಬಭೌ-ಹೊಳೆಯುತ್ತಿತ್ತು.

ತಾತ್ಪರ್ಯ. ದಶರಥನ ನಾಲ್ಕು ಮಕ್ಕಳನ್ನು ನೋಡಿದರೆ ನಾಲ್ಕು ಪುರುಷಾರ್ಥಗಳೂ ಶರೀರವನ್ನು ತೊಟ್ಟಿರುವವೋ ಎಂಬಂತೆ ತೋರುತ್ತಿತ್ತು.

ವಿಗ್ರಹವಾಕ್ಯಗಳು. ೧.ಚತಸ್ರೋ ವಿಧಾಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ-ಚತುರ್ಧಾ (ತ.ವ್ಯ.). ೨.ಪ್ರಸೂಯತೇ ಇತಿ-ಪ್ರಸವಃ (ಕೃ.ವ್ಯ.). ೩.ಪೃಥಿವ್ಯಾಃ ಪತಿಃ-ಪೃಥಿವೀಪತಿಃ (ಷ.ತ.). ೪.ಧರ್ಮಶ್ಚ ಅರ್ಥಶ್ಚ ಕಾಮಶ್ಚ ಮೋಕ್ಷಶ್ಚ-ಧರ್ಮಾರ್ಥಕಾಮಮೋಕ್ಷಾಃ (ದ್ವ.ಸ.). ೪.ಅವತೀರ್ಯತೇ ಇತಿ - ಅವತಾರಃ (ಕೃ.ವ್ಯ.). ೫.ಅಙ್ಗಂ ಅಸ್ಯ ಅಸ್ತೀತಿ-ಅಙ್ಗವಾನ್ (ತ.ವ್ಯ).

ವ್ಯಾಕರಣವಿಶೇಷ. ೧.ಚತುರ್ಧಾ-೨೬ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೧೩೮) ನೋಡಿ. ೨.ಪೃಥಿವೀಪತೇಃ-ಇಕಾರಾನ್ತ ಪುಲ್ಲಿಂಗ; ಸಮಾಸದಲ್ಲಿ ಪತಿಶಬ್ದವು ಹರಿಶಬ್ದದಂತೆ ನಡೆಯುವದು. ಇದರ ವಿಶೇಷರೂಪಗಳನ್ನು ಪರಿಶಿಷ್ಟದಲ್ಲಿ ನೋಡಿ. ೩.ಅವತಾರಃ-ತೄ- ಧಾತುವಿಗೆ ಅವ ಎಂಬ ಉಪಸರ್ಗವು ಸೇರಿ ಭಾವಾರ್ಥದಲ್ಲಿ ಘಞ್ (ಅ) ಪ್ರತ್ಯಯವು ಬಂದಿದೆ. ೪.ಬಭೌ (೨೧)- ಭಾ ದೀಪ್ತೌ (ಭಾ-ಹೊಳೆ) ಎಂಬ ೨ನೆಯ ಗಣದ ಧಾತುವಿನ ಲಿಟ್, ಪ.ಪ್ರ.ಏ.

ಗುಣೈರಾರಾಧಯಾಮಾಸುಸ್ತೇ ಗುರುಂ ಗುರುವತ್ಸಲಾಃ ।
ತಮೇವ ಚತುರನ್ತೇಶಂ ರತ್ನೈರಿವ ಮಹಾರ್ಣವಾಃ ॥೮೫॥

ಅನ್ವಯ. [ಗುರುವತ್ಸಲಾಃ ತೇ ಗುಣೈಃ ಗುರುಂ ಚತುರನ್ತೇಶಂ ತಂ ಏವ ಮಹಾರ್ಣವಾಃ ರತ್ನೈಃ ಇವ ಆರಾಧಯಾಮಾಸುಃ.]

ಅರ್ಥ. ಗುರುವತ್ಸಲಾಃ-(ಗುರು-ತಂದೆಯಲ್ಲಿ ವತ್ಸಲಾಃ-ಪ್ರೀತಿಯುಳ್ಳ) ಪಿತೃಭಕ್ತಿಯುಳ್ಳ ತೇ-ಅವರು ಗುಣೈಃ-ಗುಣಗಳಿಂದ ಗುರುಂ-ತಂದೆಯನ್ನು ಚತುರನ್ತೇಶಂ - (ಚತುರನ್ತ-ನಾಲ್ಕು ದಿಕ್ಕುಗಳ ಈಶಂ-ಒಡೆಯನಾದ) ನಾಲ್ಕು ದಿಕ್ಕುಗಳಿಗೂ ಒಡೆಯನಾದ ತಂ ಏವ-ಆ (ದಶರಥನನ್ನೇ) ಮಹಾರ್ಣವಾಃ-ಸಮು

[1] 'ಇವಾಙ್ಗಭಾಕ್' ಎಂದು ಪಾಠಾಂತರ

ದ್ರಗಳು ರತ್ನೈ ರಿವ-ರತ್ನಗಳಿಂದ ಹೇಗೋ ಹಾಗೆ ಆರಾಧಯಾಮಾಸುಃ- ಸಂತೋಷಗೊಳಿಸುತ್ತಿದ್ದರು.

ವಿಗ್ರಹವಾಕ್ಯಗಳು. ೧.ಗುರೌ ವತ್ಸಲಾಃ-ಗುರುವತ್ಸಲಾಃ (ಸ.ತ.). ೨.ಚತುರ್ಣಾಂ ಅನ್ತಾನಾಂ ಈಶಃ-ಚತುರನ್ತೇಶಃ- (ದ್ವಿಗು; ಷ.ತ.); ತಂ - ಚತುರನ್ತೇಶಮ್. ೩.ಮಹಾನ್ತಶ್ಚ ತೇ ಅರ್ಣವಾಶ್ಚ-ಮಹಾರ್ಣವಾಃ (ವಿ.ಪೂ.ಕ.).

ವ್ಯಾಕರಣವಿಶೇಷ. ೧.ಚತುರನ್ತೇಶಮ್- ಉತ್ತರಪದದ್ವಿಗು; ೨೨ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು (ಪು. ೧೩೩) ನೋಡಿ. ಚತ್ವಾರಃ ಅನ್ತಾಃ ಯಸ್ಯಾಃ ಸಾ-ಚತುರನ್ತಾ (ಭೂಮಿ) (ಷ.ಬ.); ತಸ್ಯಾಃ-ಚತುರನ್ತಾಯಾಃ; ಚತುರನ್ತಾಯಾಃ ಈಶಃ-ಚತುರನ್ತೇಶಃ (ಷ.ತ.)-ಎಂದೂ ವಿಗ್ರಹಬಿಡಿಸಬಹುದು. ಭೂಮಿಪತಿ, ರಾಜನು ಎಂದು ಅರ್ಥವಾಗುವದು. ೨.ಮಹಾರ್ಣವಾಃ-ಮಹತ್‌ಶಬ್ದಕ್ಕೆ ಮಹಾ ಎಂಬ ರೂಪವು ಬಂದಿದೆ. ಸಮಾನಾಧಿಕರಣವಾದ (involving the same case-relation) ಉತ್ತರಪದವಾಗಲಿ 'ಜಾತೀಯ' ಎಂಬ ಮಾತಾಗಲಿ ಪರವಾದರೆ ಮಹತ್ ಶಬ್ದಕ್ಕೆ 'ಆ' ಎಂಬುದು ಅಂತಾದೇಶವಾಗುವುದು. 'ಮಹಾನ್ತಃ ಅರ್ಣವಾಃ' ಎಂಬಲ್ಲಿ 'ಅರ್ಣವಾಃ' ಎಂಬುದು ಸಮಾನಾಧಿಕರಣವಾದ ಉತ್ತರಪದವಾದ್ದರಿಂದ ಆಕಾರಾ ದೇಶವು ಬಂದಿದೆ. ಆದರೆ 'ಮಹತಃ ಸೇವಾ' ಎಂದಿದ್ದರೆ ಮಹತ್ಸೇವಾ ಎಂದಾಗುವದು. ೩.ಆರಾಧಯಾಮಾಸುಃ(೧)- ರಾಧ ವೃದ್ಧೌ (ರಾಧ್-ಹೆಚ್ಚಾಗು) ಎಂಬ ೪ನೆಯ ಗಣದ ಧಾತುವಿಗೆ ಆ ಎಂಬ ಉಪಸರ್ಗವು ಸೇರಿ ತೃಪ್ತಿಗೊಳಿಸು ಎಂಬರ್ಥವಾಗಿದೆ. ಲಿಟ್, ಪ.ಪ್ರ.ಬ.

ವಿಚಾರ. ಸಮುದ್ರಪರ್ಯಂತವಾದ ಭೂಮಿಗೆ ಒಡೆಯನಾದ್ದರಿಂದ ನಾಲ್ಕು ಸಮುದ್ರಗಳೂ ತಮ್ಮ ತಮ್ಮ ರತ್ನಗಳನ್ನು ದಶರಥನ ಕೋಶಕ್ಕೇ ಅರ್ಪಿಸಿ ಸಂತೋಷಗೊಳಿಸುತ್ತಿದ್ದವು; ನಾಲ್ಕು ಮಕ್ಕಳೂ ಅದರಂತೆ ತಮ್ಮ ತಮ್ಮ ಗುಣಗಳಿಂದ ಅವನನ್ನೇ ಸಂತೋಷಗೊಳಿಸಿತ್ತಿದ್ದರು-ಎಂಬ ಭಾವವನ್ನು 'ಏವ' ಕಾರದಿಂದ ಕವಿಯು ಸೂಚಿಸಿರುತ್ತಾನೆ. ರಾಜನಿಗೆ ಇಂದ್ರನ ಭೋಗವಿದ್ದರೂ ಮಕ್ಕಳಿಲ್ಲದ್ದೊಂದು ಕೊರತೆಯಾಗಿತ್ತೆಂದು ಕವಿಯು ಸರ್ಗಾರಂಭದಲ್ಲಿ ಹೇಳಿದ್ದನಷ್ಟೆ; ಈಗ ಆ ಕೊರತೆಯೂ ಪೂರ್ಣವಾಯಿತೆಂದು ತಿಳಿಸಿರುತ್ತಾನೆ.

ಸುರಗಜ ಇವ ದನ್ತೈರ್ಭಗ್ನದೈತ್ಯಾಸಿಧಾರೈ-
ರ್ನಯ ಇವ ಪಣಬನ್ಧವ್ಯಕ್ತಯೋಗೈರುಪಾಯೈಃ ॥
ಹರಿರಿವ ಯುಗದೀರ್ಘೈರ್ದೋರ್ಭಿರಂಶೈಸ್ತದೀಯೈಃ
ಪತಿರವನಿಪತೀನಾಂ ತೈಶ್ಚಕಾಶೇ ಚತುರ್ಭಿಃ ॥೮೬॥

ಅನ್ವಯ. [ಭಗ್ನದೈತ್ಯಾಸಿಧಾರೈಃ ಚತುರ್ಭಿಃ ದನ್ತೈಃ ಸುರಗಜಃ ಇವ, ಪಣಬನ್ಧವ್ಯಕ್ತಯೋಗೈಃ ಉಪಾಯೈಃ ನಯಃ ಇವ, ಯುಗದಿರ್ಘೈಃ ದೋರ್ಭಿಃ

ಹರಿಃ ಇವ, ತದೀಯೈಃ ಅಂಶೈಃ ತೈಃ ಅವನಿಪತೀನಾಂ ಪತಿಃ ಚಕಾಶೇ.]

ಅರ್ಥ. ಭಗ್ನದೈತ್ಯಾಸಿಧಾರೈಃ-(ಭಗ್ನ-ಮುರಿದ ದೈತ್ಯ-ರಾಕ್ಷಸರ ಅಸಿ - ಕತ್ತಿಗಳ ಧಾರೈಃ ಅಲುಗುಗಳುಳ್ಳ) ದೈತ್ಯರ ಕತ್ತಿಗಳ ಅಲುಗುಗಳನ್ನು ಮೊಂಡು ಮಾಡಿರುವ ಚತುರ್ಭಿಃ-ನಾಲ್ಕು ದನ್ತೈಃ-ದಂತಗಳಿಂದ ಸುರಗಜಃ ಇವ-ದೇವತೆಗಳ ಆನೆ (ಯಾದ ಐರಾವತವು) ಹೇಗೋ, ಪಣಬನ್ಧವ್ಯಕ್ತಯೋಗ್ಯೈಃ-(ಪಣಬನ್ಧ-ಫಲಸಿದ್ಧಿಯಿಂದ ವ್ಯಕ್ತ-ತೋರಿಕೊಂಡ ಯೋಗ್ಯೈಃ-ಪ್ರಯೋಗವುಲ್ಲ ಫಲಸಿದ್ಧಿಯ ಇಂದ ಇಂಥ ಉಪಾಯವನ್ನುಪಯೋಗಿಸಿದೆ ಎಂದೂಹಿಸಬೇಕಾದ ಉಪಾಯೈಃ - ಉಪಾಯಗಳಿಂದ ನಯಃ-ನೀತಿಯು ಹೇಗೋ, ಯುಗದೀರ್ಘೈಃ-(ಯುಗ - ನೊಗದಂತೆ ದೀರ್ಘೈಃ-ಉದ್ದವಾದ) ಗಾಡಿಯ ನೊಗದಂತೆ ಉದ್ದವಾಗಿರುವ ದೋರ್ಭಿಃ - ಭುಜಗಳಿಂದ ಹರಿಃ ಇವ-ವಿಷ್ಣುವು ಹೇಗೋ ತದೀಯೈಃ-ಆ ವಿಷ್ಣು ವಿನ ಅಂಶೈಃ- ಅಂಶಗಳಾದ ತೈಃ-ಆ(ಮಕ್ಕಳಿಂದ) ಅವನಿಪತೀನಾಂ-ರಾಜರುಗಳ ಪತಿಃ-ಒಡೆಯನು ಚಕಾಶೇ-ಪ್ರಕಾಶಿಸುತ್ತಿದ್ದನು.

ತಾತ್ಪರ್ಯ. ಮೇಲುಬಿದ್ದ ದೈತ್ಯರ ಕತ್ತಿಗಳ ಅಲುಗನ್ನು ಮೊಂಡುಮಾಡಿ ರುವ ಚೌದಂತಗಳಿಂದೊಪ್ಪುವ ಐರಾವತದಂತೆಯೂ ಕಾರ್ಯಸಿದ್ಧಿಯಿಂದ ಹೊರ ತೋರುವ ನಾಲ್ಕು ಉಪಾಯಗಳಿಂದೊಪ್ಪುವ ರಾಜನೀತಿಯಂತೆಯೂ ಉದ್ದನೆಯ ನಾಲ್ಕು ತೋಳುಗಳಿಂದೊಪ್ಪುವ ವಿಷ್ಣುವಿನಂತೆಯೂ ವಿಷ್ಣುವಿನ ಅಂಶದಿಂದ ಉತ್ಪ ನ್ನರಾಗಿರುವ ರಾಮನೇ ಮುಂತಾದ ನಾಲ್ಕು ಮಕ್ಕಳಿಂದ ದಶರಥನು ಒಪ್ಪುತ್ತಿದ್ದನು.

ವಿಗ್ರಹವಾಕ್ಯಗಳು. ೧.ಸುರಾಣಾಂ ಗಜಃ-ಸುರಗಜಃ (ಷ.ತ.). ೨. ದೈತ್ಯಾನಾಂ ಅಸಯಃ - ದೈತ್ಯಾಸಯಃ (ಷ.ತ.); ತೇಷಾಂ-ದೈತ್ಯಾಸೀನಾಂ; ದೈತ್ಯಾಸೀನಾಂ ಧಾರಃ - ದೈತ್ಯಾಸಿಧಾರಾಃ (ಷ.ತ.); ಭಗ್ನಾಃ ದೈತ್ಯಾಸಿಧಾರಾಃ ಯೈಃ ತೇ-ಭಗ್ನದೈತ್ಯಾ ಸಿಧಾರಾಃ (ತೃ.ಬ.); ತೈಃ-ಭಗ್ನದೈತ್ಯಾಸಿಧಾರೈಃ. ೩. ಪಣಸ್ಯ ಬನ್ಧಃ-ಪಣಬನ್ಧಃ (ಷ.ತ.); ತೇನ-ಪಣಬನ್ಧೇನ; ಪಣಬನ್ಧೇನ ವ್ಯಕ್ತಾಃ-ಪಣಬನ್ಧವ್ಯಕ್ತಾಃ (ತೃ.ತ.); ಪಣಬನ್ಧವ್ಯಕ್ತಾಃ ಯೋಗಾಃ ಯೇಷಾಂ ತೇ-ಪಣಬನ್ಧವ್ಯಕ್ತಯೋಗಾಃ(ಷ.ಬ.); ತೈಃ-ಪಣಬನ್ಧವ್ಯಕ್ತಯೋಗ್ಯೈಃ. ೪.ಯುಗ ಇವ ದೀರ್ಘಾಃ-ಯುಗದೀರ್ಘಾಃ (ಉ. ಪೂ. ಕ.); ತೈಃ-ಯುಗದೀರ್ಘೈಃ. ೫.ತಸ್ಯ ಇಮೇ-ತದೀಯಾಃ (ತ.ವೃ.); ತೈಃ - ತದೀಯೈಃ. ೬. ಅವನೇಃ ಪತಯಃ- ಅವನಿಪತಯಃ (ಷ.ತ.); ತೇಷಾಂ-ಅವನಿಪತೀನಾಮ್.

ವ್ಯಾಕರಣವಿಶೇಷ. ೧.ದೋರ್ಭಿಃ-ಷಕಾರಾನ್ತಪುಲ್ಲಿಂಗ; ಇದರ ವಿಶೇಷರೂಪಗಳನ್ನು ಪರಿಸಿಷ್ಟದಲ್ಲಿ ನೋಡಿ. ೨.ಚತುರ್ಭಿಃ-ರೇಫಾನ್ತನಿತ್ಯಬಹುವಚನ; ಪರಿಶಿಷ್ಟವನ್ನು ನೋಡಿ. ೩.ಚಕಾಶೇ (೨೪)-ಕಾಶೃ ದೀಪ್ತೌ (ಕಾಶ್-ಹೊಳೆ) ಎಂಬ ೪ನೆಯ ಗಣದ ಧಾತುವಿನ ಲಿಟ್, ಆ. ಪ್ರ. ಏ.

೩.ಉಪಮಾನಗಳನ್ನೆಲ್ಲ ಮೊದಲು ಹೇಳಿ ಆಮೇಲೆಯೆ ‘ಅವನಿಪತೀನಾಂ ಪತಿಃ ಚಕಾಶೇ’ ಎಂಬ ಮಾತುಗಳನ್ನು ಹೇಳಬೇಕು. ಹಾಗಿಲ್ಲದೆ ‘ಅವನಿಪತೀನಾಂ ಪತಿಃ ತದೀಯೈಃ ಅಂಶೈಃ.... ಎಂದು ಹೇಳಿದರೆ ‘ತದೀಯೈಃ’ ಎಂಬುದಕ್ಕೆ ಪೂರ್ವಪರಾಮರ್ಶಿತ್ವವಿಲ್ಲದೆ ಹೋಗುವದು, ಎಂದರೆ ಹಿಂದೆ ತೋರಿಸಬೇಕಾದ ಶಬ್ದವು (antecedent) ಇಲ್ಲದೆ ಹೋಗುವದು- ಎಂದು ಒಬ್ಬ ವ್ಯಾಖ್ಯಾನಕಾರರು ಹೇಳಿರುತ್ತಾರೆ.

ವಿಚಾರ. ಐರಾವತವು ಇಂದ್ರನ ಪಟ್ಟದಾನೆಯಾದ್ದರಿಂದ ದೈತ್ಯರ ಸಂಗಡ ಯುದ್ಧಮಾಡುವಾಗ ಅದರ ನಾಲ್ಕು ದಂತಗಳ ಮೇಲೆಯೂ ಕತ್ತಿಯ ಏಟುಗಳು ಬೀಳುತ್ತಿದ್ದವು; ಆದರೆ ಕತ್ತಿಯ ಅಲುಗೇ ಮೊಂಡಾಗುತ್ತಿತ್ತೇ ಹೊರತು ಆನೆಗೇನೂ ಬಾಧೆಯಾಗುತ್ತಿರಲಿಲ್ಲ. ೨.ಸಾಮ, ದಾನ, ಭೇದ, ದಂಡ-ಇವು ನಾಲ್ಕು ನಯದ (statecraft policy)ಉಪಾಯಗಳು. ೩.ಪಣಬನ್ಧವೆಂಬ ಶಬ್ದಕ್ಕೆ ‘ಧನದ ಸಿದ್ಧಿ’ ಎಂದು ಅಕ್ಷರಾರ್ಥವು; ಕಾರ್ಯಸಿದ್ಧಿ ಎಂದು ಮಲ್ಲಿನಾಥವ್ಯಾಖ್ಯಾನದಂತೆ ತಾತ್ಪರ್ಯವನ್ನು ಹೇಳಿದೆ. ಪಣಬಂಧವೆಂದರೆ ಸಂಧಿಯೆಂಬ ನೀತಿಯ ಗುಣವೆಂದು ಎಂಟನೆಯ ಸರ್ಗದ ೨೧ನೆಯ ಶ್ಲೋಕದಿಂದ ಗೊತ್ತಾಗುತ್ತದೆ. ಇಲ್ಲಿಯೂ ಅದೇ ಅರ್ಥವನ್ನು ಇಟ್ಟುಕೊಂಡರೆ ‘ಮಾಡಿಕೊಂಡ ಸಂಧಿಯ (ಕೌಲಿನ peace) ಸ್ವಭಾವದಿಂದ ಉಪಾಯಗಳನ್ನು ಯಾವ ರೀತಿಯಲ್ಲಿ ಉಪಯೋಗಿಸುತ್ತನೆಂದು ಗೊತ್ತಾಗುವದು’ ಎಂದು ತಾತ್ಪರ್ಯವನ್ನು ಕಲ್ಪಿಸಬೇಕು. ಸಂಧಿ ಎಂಬರ್ಥವನ್ನೂ ಒಬ್ಬ ವ್ಯಾಖ್ಯಾನಕಾರರು ಈ ಮಾತಿಗೆ ಕೊಟ್ಟಿರುತ್ತಾರೆ. ೩.ಇಲ್ಲಿ ಕೊಟ್ಟಿರುವ ಉಪಮಾನಗಳಿಂದ ರಾಜಕುಮಾರರ ಶಕ್ತಿಯೂ, ನೀತಿವಿಶಾರದತೆಯೂ, ಮತ್ತೊಬ್ಬರು ಸಲುಗೆಯನ್ನು ತೆಗೆದುಕೊಳ್ಳದಂಥ ಮನಃಶಕ್ತಿಯೂ ವ್ಯಕ್ತವಾಗುವವು.

---

# ಪರಿಶಿಷ್ಟ

೧ ಈ ಸರ್ಗದಲ್ಲಿರುವ ವಿಷಯಗಳ ವಿಂಗಡ

ಸೂಚನೆ: ಇಲ್ಲಿರುವ ಸಂಖ್ಯೆಗಳೆಲ್ಲ ಶ್ಲೋಕವನ್ನು ಸೂಚಿಸುವವು.

[ಹಿಂದಿನ ಕಥಾಸಂದರ್ಭ. ಅಜ ಮಹಾರಾಜನ ಮಗನಾದ ದಶರಥನು ಸುಖದಿಂದ ರಾಜ್ಯವಾಳುತ್ತಿದ್ದು ವಸಂತಋತುವಿನಲ್ಲಿ ಒಂದಾನೊಂದು ದಿನ ಬೇಟೆಗೆ ತಮಸಾನದಿಯ ಕಡೆಗೆ ಕುದುರೆಯ ಮೇಲೆ ಒಬ್ಬನೇ ಹೋಗುತ್ತಿರುವಲ್ಲಿ ಪಾತ್ರೆಯಲ್ಲಿ ಯಾರೋ ನೀರುತುಂಬುವ ಧ್ವನಿಯು ಕೇಳಬರಲು ಆನೆಯ ಘೀಂಕಾರ ಅವೆಂದು ಭ್ರಮಿಸಿ ಶಬ್ದವೇಧಿಯಾದ ಬಾಣವನ್ನು ಬಿಟ್ಟನು. ಇಷ್ಟರಲ್ಲಿ ಮನುಷ್ಯನ ಆರ್ತಧ್ವನಿಯನ್ನು ಕೇಳಿ ಅಲ್ಲಿಗೆ ಗಾಬರಿಯಿಂದ ಹೋಗಿ ನೋಡಲು ಬಾಣದ ಪೆಟ್ಟು ತಗಲಿದವನು ಮುನಿಪುತ್ರನಾಗಿದ್ದನು. ದಶರಥನು ಆತನ ಇಷ್ಟದಂತೆ ತಾಯಿತಂದೆ ಗಳ ಬಳಿಗೆ ಅವನನ್ನು ಕರೆದುಕೊಂಡು ಹೋಗಿ ತಾನು ಅರಿಯದೆ ಮಾಡಿದ್ದ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಆದರೆ ತಂದೆಯು ಪುತ್ರಶೋಕದಿಂದುಂಟಾದ ಕೋಪದಿಂದ 'ನನ್ನಂತೆ ನಿನಗೂ ಮುಪ್ಪಿನಲ್ಲಿ ಪುತ್ರಶೋಕದಿಂದ ಮರಣವಾಗಲಿ' ಎಂದು ಶಾಪವಿತ್ತು ಪ್ರಾಣವನ್ನು ಬಿಟ್ಟನು. ದಶರಥನು ತನ್ನ ದುರವಸ್ಥೆಗೆ ಪಶ್ಚಾ ತ್ತಾಪಪಟ್ಟರೂ 'ತನಗೆ ಈ ಶಾಪಕಾರಣದಿಂದಾದರೂ ಮಕ್ಕಳಾಗುವರಲ್ಲ' ಎಂದು ಸಂತೋಷಪಡುತ್ತಾ ಪರಿವಾರಸಮೇತನಾಗಿ ತನ್ನ ರಾಜಧಾನಿಗೆ ಹಿಂತಿರುಗಿದನು.]

೧-೪.ದಶರಥನು ಸುಮಾರು ಹತ್ತು ಸಾವಿರ ವರ್ಷದವರೆಗೆ ರಾಜ್ಯವಾಳುತ್ತಿ ದ್ದರೂ ಪುತ್ರೋತ್ಪತ್ತಿಯೇನೂ ಆಗಲಿಲ್ಲವಾದ್ದರಿಂದ ಋಷ್ಯಶೃಂಗನೇ ಮುಂತಾದ ಋತ್ವಿಕ್ಕರ ಸಹಾಯದಿಂದ ಪುತ್ರಕಾಮೇಷ್ಟಿಯನ್ನು ಮಾಡಿದನು. ೫-೧೫. ಇಷ್ಟರಲ್ಲಿ ದೇವತೆಗಳು ರಾವಣನ ಉಪಟಳವನ್ನು ತಾಳಲಾರದೆ ವಿಷ್ಣುವನ್ನು ಶರಣುಹೊಕ್ಕರು. ೭-೧೪ರವರೆಗೆ ವಿಷ್ಣುವಿನ ವರ್ಣನೆ. ೧೬-೩೨.ವಿಷ್ಣುಸ್ತುತಿ. ೩೩-೪೮. ಸ್ತೋತ್ರದಿಂದ ಪ್ರಸನ್ನನಾದ ವಿಷ್ಣುವು 'ಬ್ರಹ್ಮನು ಕೊಟ್ಟವರಕ್ಕನುಸಾರ ಅವಾಗಿ ರಾವಣನನ್ನು ಕೊಲ್ಲುವದಕ್ಕಾಗಿ ದಶರಥಪುತ್ರನಾಗಿ ಅವತರಿಸುವೆನು. ಆಗ ನಿಮ್ಮ ತೊಂದರೆಗಳನ್ನು ಪರಿಹರಿಸುವೆನು' ಎಂದು ಅಭಯವಿತ್ತನು. ೪೯. ಇಂದ್ರಾದಿಗಳೂ ತಮ್ಮ ತಮ್ಮ ಅಂಶದಿಂದ ಭೂಮಿಯಲ್ಲಿ ಅವತರಿಸಿದರು. ೫೦-೫೭. ಇತ್ತ ದಶರಥನ ಯಜ್ಞಕುಂಡದಿಂದ ದಿವ್ಯಪಾಯಸವನ್ನು ಒಬ್ಬ ಪು ರುಷನು ತಂದುಕೊಟ್ಟನು. ದಶರಥನು ಅದನ್ನು ಕೌಸಲ್ಯೆ, ಕೈಕೇಯಿ-ಇವರಿಬ್ಬರಿಗೂ ಸಮಪಾಲಾಗಿ ಹಂಚಿಕೊಟ್ಟನು; ಅವರು ಆತನ ಅಭಿಪ್ರಾಯವನ್ನರಿತು ತಮ್ಮ ಪಾಲಿನಲ್ಲಿ ಅರ್ಧಾರ್ಧವನ್ನು ಸುಮಿತ್ರೆಗೆ ಕೊಟ್ಟರು. ೫೮-೬೫. ಮೂವರು ಪತಿ ್ನಯರೂ ಗರ್ಭವನ್ನು ಧರಿಸಿದರು. ವಿಷ್ಣುವು ತಮ್ಮ ಗರ್ಭದಲ್ಲಿದ್ದಾನೆಂದು

ಸೂಚಿಸುವ ಸುಸ್ವಪ್ನಗಳನ್ನು ಆಗಾಗ್ಗೆ ಅವರು ಕಾಣುತ್ತಿದ್ದರು. ಇದನ್ನು ಕೇಳಿ ದಶರಥನು ಹಿಗ್ಗಿದನು. ವಿಷ್ಣುವೆ ಅವರ ಗರ್ಭದಲ್ಲಿ ನಾಲ್ಕು ಪಾಲಾಗಿ ವಿಂಗಡವಾಗಿ ವಾಸಮಾಡುತ್ತಿದ್ದನು. ೬೬-೭೧. ಕೌಸಲ್ಯೆಯಲ್ಲಿ ರಾಮನು ಹುಟ್ಟಿದನು. ಕೈಕೇಯಿಯಲ್ಲಿ ಭರತನು ಜನಿಸಿದನು. ಸುಮಿತ್ರೆಯಲ್ಲಿ ಲಕ್ಷ್ಮಣಶತ್ರುಘ್ನರು ಹುಟ್ಟಿದರು. ೭೨-೭೭. ಅವರು ಹುಟ್ಟಿದ ಕಾಲದಲ್ಲಿ ಅಯೋಧ್ಯೆಯಲ್ಲಿ ಶುಭಶಕುನಗಳೂ ಲಂಕೆಯಲ್ಲಿ ದುಃಶಕುನಗಳೂ ಆದವು. ೭೮-೮೦. ಮಕ್ಕಳಿಗೆ ಜಾತಕರ್ಮವೇ ಮುಂತಾದ ಸಂಸ್ಕಾರವಾಯಿತು. ಅವರು ಬೆಳೆಯುತ್ತಿದ್ದ ಹಾಗೆ ತಂದೆಗೂ ಹೆಚ್ಚು ಹೆಚ್ಚು ಸಂತೋಷವಾಯಿತು. ಅವರ ತೇಜಸ್ಸು ಹೆಚ್ಚುತ್ತಿತ್ತು, ರಘುಕುಲಕ್ಕೇ ಅವರು ಭೂಷಣರಾಗಿದ್ದರು. ೮೧-೮೨. ಅವರಲ್ಲಿ ರಾಮಲಕ್ಷ್ಮಣರೂ, ಭರತಶತ್ರುಘ್ನರೂ ಜೊತೆಜೊತೆಯಾಗಿಯೇ ಇದ್ದು ಒಬ್ಬರಲ್ಲೊಬ್ಬರು ಹೆಚ್ಚುಪ್ರೇಮವನ್ನು ತೋರಿಸುತ್ತಿದ್ದರು. ೮೩-೮೬. ಆ ನಾಲ್ಕು ಮಕ್ಕಳೂ ಪ್ರಜೆಗಳಿಗೂ ದಶರಥನಿಗೂ ಪರಮಾನಂದವನ್ನುಂಟುಮಾಡುತ್ತಾ ಬೆಳೆಯುತ್ತಿದ್ದರು.

## ೨ ಶಬ್ದರೂಪಗಳು

ಏಕ (೨೦) ಅ. ಪು. ಒಬ್ಬ. ನಿತ್ಯೈಕವಚನ. ಸ್ವ (೪೧) 'ತಾನು, ತನ್ನ' ತಾನು ಎಂಬರ್ಥದಲ್ಲಿ ಪುಲ್ಲಿಂಗ; ತನ್ನ ಎಂಬರ್ಥದಲ್ಲಿ ಮೂರು ಲಿಂಗದಲ್ಲಿಯೂ ನಡೆಯುವದು.

ಪುಲ್ಲಿಂಗದಲ್ಲಿ ಸ್ವಃ ಸ್ವೌ ಸ್ವೇ-ಸ್ವಾಃ। ಸ್ವ ಸ್ವೌ ಸ್ವೇ-ಸ್ವಾಃ.. ಸ್ತ್ರೀಲಿಂಗದಲ್ಲಿ ಸ್ವಾ ಸ್ವೇ ಸ್ವಾಃ। .. ನಪುಂಸಕಲಿಂಗದಲ್ಲಿ ಸ್ವಮ್ ಸ್ವೇ ಸ್ವಾನಿ। ಸ್ವ ಸ್ವೇ ಸ್ವಾನಿ। ಸ್ವಮ್ ಸ್ವೇ ಸ್ವಾನಿ। ..

ಪೂರ್ವ (೨) 'ಪಿತೃಗಳು, ಹಿಂದಿನವರು' (ancestors) ಪುಲ್ಲಿಂಗ ಬಹುವಚನ ಮಾತ್ರ. ಪೂರ್ವೇ-ಪೂರ್ವಾಃ। ಪೂರ್ವಾನ್। ಪೂರ್ವೈಃ। ಪೂರ್ವೇಭ್ಯಃ। ಪೂರ್ವೇಭ್ಯಃ। ಪೂರ್ವೇಷಾಮ್। ಪೂರ್ವೇಷು 'ಮೊದಲನೆಯ ಮೂಡಲ' (first, eastern) ಎಂಬರ್ಥದಲ್ಲಿ ಮೂರು ಲಿಂಗವೂ ಉಂಟು. ಪೂರ್ವಃ, ಪೂರ್ವಾ, ಪೂರ್ವಂ;.. ಮೂಡಲ ದಿಕ್ಕು (east) ಎಂಬರ್ಥದಲ್ಲಿ ಸ್ತ್ರೀಲಿಂಗ ಮಾತ್ರ. ಪೂರ್ವಾ..

ಪ್ರಥಮ (೩೮-೬೭) ಅ.ಪು. ಮೊದಲನೆಯುವ. ಪ್ರಥಮಃ ಪ್ರಥಮೌ ಪ್ರಥಮೇ-ಪ್ರಥಮಾಃ। ಪ್ರಥಮ ಪ್ರಥಮೌ ಪ್ರಥಮೇ-ಪ್ರಥಮಾಃ। ಮಿಕ್ಕದ್ದು ರಾಮಶಬ್ದದಂತೆ.

ಉಭ(೩೮,೫೬,೫೭) ಅ. ಪು. ನಿತ್ಯದ್ವಿವಚನ. ಉಭೌ । ಉಭೌ । ಉಭಾಭ್ಯಾಮ್ । ಉಭಾಭ್ಯಾಮ್ । ಉಭಯೋಃ । ಉಭಯೋಃ ॥ ಅ.ಸ್ತ್ರೀ. ನಿತ್ಯದ್ವಿವಚನ. ಉಭೇ । ಉಭೇ । ಉಭಾಭ್ಯಾಮ್ । ಉಭಾಭ್ಯಾಮ್ । ಉಭಯೋಃ । ಉಭಯೋಃ ॥

ದ್ವಿ (೮೨) ಇ. ಪು. 'ಇಬ್ಬರು' ನಿತ್ಯದ್ವಿವಚನ. ದ್ವೌ । ದ್ವೌ । ದ್ವಾಭ್ಯಾಮ್ । ದ್ವಾಭ್ಯಾಮ್ । ದ್ವಯೋಃ । ದ್ವಯೋಃ ॥

ಪತಿ (೫೬,೮೬) ಇ. ಪು. 'ಗಂಡ, ಒಡೆಯ'. ಇದು ಹರಿ ಶಬ್ದದಂತೆ. ತೃತೀಯೆಯಿಂದ ಹಿಡಿದು ಏಕವಚನದಲ್ಲಿ ವಿಶೇಷವುಂಟು; ಪತ್ಯಾ । ಪತ್ಯೇ । ಪತ್ಯುಃ । ಪತ್ಯೌ ॥ ಆದರೆ ಅವನಿಪತಿ (೮೬) ಅಹರ್ಪತಿ (೫೪)- ಮುಂತಾದ ಸಮಾಸಗಳನ್ನು ಹರಿಶಬ್ದದಂತೆಯೇ ಪೂರ ನಡೆಸಬೇಕು.

ಶ್ರೀ (೮,೭೦,೭೫) ಈ. ಸ್ತ್ರೀ. 'ಲಕ್ಷ್ಮಿ, ಸಂಪತ್ತು' ಶ್ರೀಃ ಶ್ರಿಯೌ ಶ್ರಿಯಃ । ಶ್ರೀಃ ಶ್ರಿಯೌ ಶ್ರಿಯಃ । ಶ್ರಿಯಮ್ ಶ್ರಿಯೌ ಶ್ರಿಯಃ । ಶ್ರಿಯಾ ಶ್ರೀಭ್ಯಾಮ್ ಶ್ರೀಭಿಃ । ಶ್ರಿಯೈ-ಶ್ರಿಯೇ ಶ್ರೀಭ್ಯಾಮ್ ಶ್ರೀಭ್ಯಃ । ಶ್ರಿಯಾಃ-ಶ್ರಿಯಃ ಶ್ರೀಭ್ಯಾಮ್ ಶ್ರೀಭ್ಯಃ । ಶ್ರಿಯಾಃ-ಶ್ರಿಯಃ ಶ್ರಿಯೋಃ ಶ್ರೀಣಾಮ್-ಶ್ರಿಯಾಮ್ । ಶ್ರಿಯಾಮ್- ಶ್ರಿಯಿ ಶ್ರಿಯೋಃ ಶ್ರೀಷು ॥

ಆತ್ಮಭೂಃ (೨೦) ಊ. ಪು. 'ತನ್ನಿಂದಲೆ ಉಂಟಾಗಿರುವವನು, ಸ್ವತಃ ಸಿದ್ಧನು' ಆತ್ಮಭೂಃ ಆತ್ಮಭುವೌ ಆತ್ಮಭುವಃ । ಆತ್ಮಭೂಃ ಆತ್ಮಭುವೌ ಆತ್ಮಭುವಃ । ಆತ್ಮಭುವಮ್ ೦ಭುವೌ ೦ಭುವಃ । ೦ಭುವಾ ೦ಭೂಭ್ಯಾಮ್ ೦ಭೂಭಿಃ । ೦ಭುವೇ ೦ಭೂಭ್ಯಾಮ್, ೦ಭೂಭ್ಯಃ । ೦ಭುವಃ ಭೂಭ್ಯಾಮ್ ೦ಭೂಭ್ಯಃ । ೦ಭುವಃ ೦ಭುವೋಃ ೦ಭುವಾಮ್ । ೦ಭುವಿ ೦ಭುವೋಃ ೦ಭೂಷು.

ಋತ್ವಿಜ್ (೪) ಜಕಾರಾನ್ತ ಪುಲ್ಲಿಂಗ. ಋತ್ವಿಕ್ ಋತ್ವಿಜೌ ಋತ್ವಿಜಃ । ಋತ್ವಿಕ್ ಋತ್ವಿಜೌ ಋತ್ವಿಜಃ । ಋತ್ವಿಜಮ್ ಋತ್ವಿಜೌ ಋತ್ವಿಜಃ । ಋತ್ವಿಜಾ ಋತ್ವಿಗ್ಭ್ಯಾಮ್ ಋತ್ವಿಗ್ಭಿಃ । ಋತ್ವಿಜೇ ಋತ್ವಿಗ್ಭ್ಯಾಮ್ ಋತ್ವಿಗ್ಭ್ಯಃ । ಋತ್ವಿಜಃ ಋತ್ವಿಗ್ಭ್ಯಾಮ್ ಋತ್ವಿಗ್ಭ್ಯಃ । ಋತ್ವಿಜಃ ಋತ್ವಿಜೋಃ ಋತ್ವಿಜಾಂ । ಋತ್ವಿಜಿ ಋತ್ವಿಜೋಃ ಋತ್ವಿಕ್ಷು ॥ ಹೀಗೇ ಸರ್ವರೂಪಭಾಕ್ (೨೦) ಹವಿರ್ಭುಕ್ (೭೯)

ವಿಶ್ವಸೃಜ್ (೧೬) ಜ. ಪು. ಎಲ್ಲವನ್ನು ಸೃಷ್ಟಿಸುವವ. ವಿಶ್ವಸೃಟ್ ವಿಶ್ವಸೃಜೌ ವಿಶ್ವಸೃಜಃ । ವಿಶ್ವಸೃಟ್ ವಿಶ್ವಸೃಜೌ ವಿಶ್ವಸೃಜಃ । ವಿಶ್ವಸೃಜಮ್ ೦ಸೃಜೌ ೦ಸೃಜಾ ೦ಸೃಡ್ಭ್ಯಾಮ್ ೦ಸೃಡ್ಭಿಃ । ೦ಸೃಜೇ ೦ಸೃಡ್ಭ್ಯಾಮ್ ೦ಸೃಡ್ಭ್ಯಃ । ೦ಸೃಜಃ ೦ಸೃಡ್ಭ್ಯಾಂ ೦ಸೃಡ್ಭ್ಯಃ । ೦ಸೃಜಃ ೦ಸೃಜೋಃ ೦ಸೃಜಾಮ್ । ೦ಸೃಜಿ ೦ಸೃಜೋಃ ೦ಸೃಟ್ಸು, ೦ಸೃಟ್ತ್ಸು ॥

ಬಿಭ್ರತ್ (೧೭) ತ. ಪು. 'ಧರಿಸಿರುವವ'. ಬಿಭ್ರತ್ ಬಿಭ್ರತೌ

ಬಿಭ್ರತಃ । ಬಿಭ್ರತ್ ಬಿಭ್ರತೌ ಬಿಭ್ರತಃ । ಬಿಭ್ರತಂ ಬಿಭ್ರತೌ ಬಿಭ್ರತಃ । ಬಿಭ್ರತಾ ಬಿಭ್ರದ್ಭ್ಯಾಮ್ ಬಿಭ್ರದ್ಭಿಃ । ಇತ್ಯಾದಿ ॥ (ಮೂರನೆಯ ಗಣದ ಧಾತುಗಳಿಂದ ಬಂದಿರುವ ಕೃದಂತಗಳಿಗೆ ಹೀಗೆ ರೂಪಗಳಾಗುವವು.)

ಬೃಹತ್ (೧೦) ತ. ನ. 'ದೊಡ್ಡದು' ಪ್ರ. ಸ. ದ್ವಿ-ಬೃಹತ್ ಬೃಹತೀ ಬೃಹನ್ತಿ । ಬೃಹತಾ ಬೃಹದ್ಭ್ಯಾಮ್ ಬೃಹದ್ಭಿಃ । ಇತ್ಯಾದಿ ॥

ಇದು ಪುಲ್ಲಿಂಗದಲ್ಲಿ-ಬೃಹನ್ ಬೃಹನ್ತೌ ಬೃಹನ್ತಃ । .. ಸ್ತ್ರೀಲಿಂಗದಲ್ಲಿ - ಬೃಹತೀ ಬೃಹತ್ಯೌ ಬೃಹತ್ಯಃ । ಇತ್ಯಾದಿಯಾಗಿ ನಡೆಯುವದು.

ತ್ವತ್ಸಮರ್ಪಿತಕರ್ಮನ್ (೨೭) ನ. ಪು. 'ನಿನ್ನಲ್ಲಿ ಸಮರ್ಪಿಸಿದ ಕರ್ಮ ವುಳ್ಳವರು'. ೦ಕರ್ಮಾ ೦ಕರ್ಮಾಣೌ ೦ಕರ್ಮಾಣಃ । ೦ಕರ್ಮನ್ ೦ಕರ್ಮಾಣೌ ೦ಕರ್ಮಾಣಃ । ೦ಕರ್ಮಾಣಮ್ ೦ಕರ್ಮಾಣೌ ೦ಕರ್ಮಣಃ) । ೦ಕರ್ಮಣಾ ೦ಕರ್ಮಭ್ಯಾಮ್ ೦ಕರ್ಮಭಿಃ । ಇತ್ಯಾದಿ ॥ ಇದರಂತೆ ಕುಲಿಶವ್ರಣಲಕ್ಷ್ಮನ್ (೧೩) ಮೂರ್ಧಾ (೪೧)

ಮಹಿಮನ್ (೨೮,೩೨) ನ. ಪು. 'ಹೆಚ್ಚಿಗೆ.' ಮಹಿಮಾ ಮಹಿಮಾನೌ ಮಹಿಮಾನಃ । ಮಹಿಮನ್ ಮಹಿಮಾನೌ ಮಹಿಮಾನಃ । ಮಹಿಮಾನಮ್ ಮಹಿಮಾನೌ ಮಹಿಮ್ನಃ । ಮಹಿಮ್ನಾ ಮಹಿಮಭ್ಯಾಮ್ ಮಹಿಮಭಿಃ । ಮಹಿಮ್ನೇ ಇತ್ಯಾದಿ ॥ ಹೀಗೆಯೆ ವೃಷಾ(೫೨)

ಸಪ್ತನ್ (೭೩) ನ. ಪು. 'ಏಳು ಜನ' ನಿತ್ಯಬಹುವಚನ. ಸಪ್ತ । ಸಪ್ತ । ಸಪ್ತಭಿಃ । ಸಪ್ತಭ್ಯಃ । ಸಪ್ತಭ್ಯಃ । ಸಪ್ತಾನಾಮ್ । ಸಪ್ತಸು ॥

ಪಥಿನ್ (೨೬,೪೬) ನ. ಪು. 'ದಾರಿ' ಪನ್ಥಾಃ ಪನ್ಥಾನೌ ಪನ್ಥಾನಃ ಪನ್ಥಾಃ ಪನ್ಥಾನೌ ಪನ್ಥಾನಃ । ಪನ್ಥಾನಮ್ ಪನ್ಥಾನೌ ಪಥಃ । ಪಥಾ ಪಥಿಭ್ಯಾಮ್ ಪಥಿಭಿಃ । ಪಥೇ ಪಥಿಭ್ಯಾಮ್ ಪಥಿಭ್ಯಃ । ಪಥಃ ಪಥಿಭ್ಯಾಮ್ ಪಥಿಭ್ಯಃ । ಪಥಃ ಪಥೋಃ ಪಥಾಮ್ । ಪಥಿ ಪಥೋಃ ಪಥಿಷು ॥

ಅಪ್ (೧೦,೬೫) ಪ. ಸ್ತ್ರೀ. 'ನೀರು' ನಿತ್ಯಬಹುವಚನ. ಆಪಃ । ಆಪಃ । ಅಪಃ । ಅದ್ಭಿಃ । ಅದ್ಭ್ಯಃ । ಅದ್ಭ್ಯಃ । ಅಪಾಮ್ । ಅಪ್ಸು ॥

ಚತುರ್ (೮೬) ರೇಫಾನ್ತ ಪು-ನಿತ್ಯಬಹುವಚನ. 'ನಾಲ್ಕು ಜನ.' ಚತ್ವಾರಃ । ಚತುರಃ । ಚತುರ್ಭಿಃ । ಚತುರ್ಭ್ಯಃ । ಚತುರ್ಭ್ಯಃ । ಚತುರ್ಣಾಮ್ । ಚತುರ್ಷು ॥

ದಿವ್ (೫೪,೭೬) ವ. ಸ್ತ್ರೀ. 'ಸ್ವರ್ಗ'. ದ್ಯೌಃ ದಿವೌ ದಿವಃ । ದ್ಯೌಃ ದಿವೌ ದಿವಃ । ದಿವಮ್ ದಿವೌ ದಿವಃ । ದಿವಾ ದ್ಯುಭ್ಯಾಮ್ ದ್ಯುಭಿಃ । ದಿವೇ ದ್ಯುಭ್ಯಾಮ್ ದ್ಯುಭ್ಯಃ । ದಿವಃ ದ್ಯುಭ್ಯಾಮ್ ದ್ಯುಭ್ಯಃ । ದಿವಃ ದಿವೋಃ ದಿವಾಮ್ । ದಿವಿ ದಿವೋಃ ದ್ಯುಷು ॥

ವಿಶ್ (೫೦) ಶ. ಪು. 'ಜನ'. ವಿಟ್, ವಿಡ್ ವಿಶೌ ವಿಶಃ । ವಿಟ್ ವಿಡ್

ವಿಶೌ ವಿಶಃ । ವಿಶಮ್ ವಿಶೌ ವಿಶಃ । ವಿಶಾ ವಿಡ್ಭ್ಯಾಮ್ ವಿಡ್ಭಿಃ । ವಿಶೇ ವಿಡ್ಭ್ಯಾಮ್ ವಿಡ್ಭ್ಯಃ । ವಿಶಃ ವಿಡ್ಭ್ಯಾಮ್ ವಿಡ್ಭ್ಯಃ । ವಿಶಃ ವಿಶೋಃ ವಿಶಾಮ್ । ವಿಶಿ ವಿಶೋಃ ವಿಟ್ಸು-ವಿಟ್ತ್ಸು ॥

ದಿಶ್ (೭೩) ಶ. ಸ್ತ್ರೀ. 'ದಿಕ್ಕು' ದಿಕ್ ದಿಶೌ ದಿಶಃ । ದಿಕ್ ದಿಶೌ ದಿಶಃ । ದಿಶಮ್ ದಿಶೌ ದಿಶಃ । ದಿಶಾ ದಿಗ್ಭ್ಯಾಮ್ ದಿಗ್ಭಿಃ । ದಿಶೇ ದಿಗ್ಭ್ಯಾಮ್ ದಿಗ್ಭ್ಯಃ । ದಿಶಃ ದಿಗ್ಭ್ಯಾಮ್ ದಿಗ್ಭ್ಯಃ । ದಿಶಃ ದಿಶೋಃ ದಿಶಾಮ್ । ದಿಶಿ ದಿಶೋಃ ದಿಕ್ಷು ॥

ಸುರದ್ವಿಷ್ (೧೫) ಷ. ಪು. 'ದೇವತೆಗಳ ದ್ವೇಷಿ, ದೈತ್ಯ ಸುರದ್ವಿಟ್ ಸುರದ್ವಿಷೌ ಸುರದ್ವಿಷಃ । ಂದ್ವಿಟ್ ಂದ್ವಿಷೌ ಂದ್ವಿಷಃ । ಂದ್ವಿಷಮ್ ಂದ್ವಿಷೌ ಂದ್ವಿಷಃ । ಂದ್ವಿಷಾ ಂದ್ವಿಡ್ಭ್ಯಾಮ್ ಂದ್ವಿಡ್ಭಿಃ । ಂದ್ವಿಷೇ ಂದ್ವಿಡ್ಭ್ಯಾಮ್ ಂದ್ವಿಡ್ಭ್ಯಃ । ಂದ್ವಿಷಃ ಂದ್ವಿಡ್ಭ್ಯಾಮ್ ಂದ್ವಿಡ್ಭ್ಯಃ । ದ್ವಿಷಃ ಂದ್ವಿಷೋಃ ಂದ್ವಿಷಾಮ್ । ಂದ್ವಿಷಿ ಂದ್ವಿಷೋಃ ಂದ್ವಿಟ್ಸು-ಂದ್ವಿಟ್ತ್ಸು ॥ ಹೀಗೆಯೆ ಹತದ್ವಿಷ್ (೨೪) ಆಪಾಂಡುರತ್ವಿಷ್ (೫೯)

ದೋಷ್ (೫೧) ಷ. ಪು.... 'ತೋಳು'. ದೋಃ ದೋಷೌ ದೋಷಃ । ದೋಃ ದೋಷೌ ದೋಷಃ । ದೋಷಮ್ ದೋಷೌ ದೋಷಃ ದೋಷ್ಣಃ । ದೋಷಾ-ದೋಷ್ಣಾ ದೋರ್ಭ್ಯಾಮ್-ದೋಷಭ್ಯಾಮ್ ದೋರ್ಭಿಃ-ದೋಷಭಿಃ । ದೋಷೇ-ದೋಷ್ಣೇ ದೋರ್ಭ್ಯಾಮ್-ದೋಷಭ್ಯಾಮ್ ದೋರ್ಭ್ಯಃ-ದೋಷಭ್ಯಃ । ದೋಷಃ-ದೋಷ್ಣಃ ದೋರ್ಭ್ಯಾಮ್-ದೋಷಭ್ಯಾಮ್ ದೋರ್ಭ್ಯಃ-ದೋಷಭ್ಯಃ । ದೋಷಃ-ದೋಷ್ಣಃ ದೋಷೋಃ-ದೋಷ್ಣೋಃ ದೋಷಾಮ್-ದೋಷ್ಣಾಮ್ । ದೋಷಿ-ದೋಷ್ಣಿ-ದೋಷಣಿ ದೋಷೋಃ-ದೋಷ್ಣೋಃ ದೋಷ್ಷು ದೋಃಷು - ದೋಷಸು ॥

ಪುಂಸ್ (೫೧)ಸ. ಪು. ಪುಮಾನ್ ಪುಮಾಂಸೌ ಪುಮಾಂಸಃ । ಪುಮನ್ ಪುಮಾಂಸೌ ಪುಮಾಂಸಃ । ಪುಮಾಂಸಂ ಪುಮಾಂಸೌ ಪುಂಸಃ । ಪುಂಸಾ ಪುಮ್ಭ್ಯಾಮ್ ಪುಮ್ಭಿಃ । ಪುಂಸೇ ಪುಮ್ಭ್ಯಾಮ್ ಪುಮ್ಭ್ಯಃ । ಪುಂಸಃ ಪುಮ್ಭ್ಯಾಮ್ ಪುಮ್ಭ್ಯಃ । ಪುಂಸಃ ಪುಂಸೋಃ ಪುಂಸಾಮ್ । ಪುಂಸಿ ಪುಂಸೋಃ ಪುಂಸು ॥

ವಪುಸ್ (೬೭) ಸ. ನ. 'ಶರೀರ' ವಪುಃ ವಪುಷೀ ವಪೂಂಷಿ । ವಪುಃ ವಪುಷೀ ವಪೂಂಷಿ । ವಪುಷಾ ವಪುರ್ಭ್ಯಾಮ್ ವಪುರ್ಭಿಃ । ವಪುಷೇ ವಪುರ್ಭ್ಯಾಮ್ ವಪುರ್ಭ್ಯಃ । ವಪುಷಃ ವಪುರ್ಭ್ಯಾಮ್ ವಪುರ್ಭ್ಯಃ । ವಪುಷಃ ವಪುಷೋಃ ವಪುಷಾಮ್ । ವಪುಷಿ ವಪುಷೋಃ ವಪುಷ್ಷು, ವಪುಃಷು ॥

ತ್ರಿಸ್ರೋತಸ್ (೭೩) ಸ. ಸ್ತ್ರೀ. 'ಗಂಗೆ' ತ್ರಿಸ್ರೋತಾಃ ತ್ರಿಸ್ರೋತಸೌ ತ್ರಿಸ್ರೋತಸಃ । ತ್ರಿಸೋತಃ ತ್ರಿಸ್ರೋತಸೌ ತ್ರಿಸ್ರೋತಸಃ । ತ್ರಿಸ್ರೋತಸಮ್ ತ್ರಿಸ್ರೋತಸೌ ತ್ರಿಸ್ರೋತಸಃ । ತ್ರಿಸ್ರೋತಸಾ ತ್ರಿಸ್ರೋತೋಭ್ಯಾಮ್ ತ್ರಿಸ್ರೋತೋಭಿಃ

॥ ತ್ರಿಸ್ರೋತಸೇ ಇತ್ಯಾದಿ ॥

ಉದರ್ಚಿಸ್ (೭) ಸ. ಪು. 'ಎದ್ದು ಬೆಳಗುವ' ಉದರ್ಚಿಃ ಉದರ್ಚಿಷೌ ಉದರ್ಚಿಷಃ..... ಉದರ್ಚಿಷಾ ಉದರ್ಚಿರ್ಭ್ಯಾಮ್ ಉದರ್ಚಿರ್ಭಿಃ ಉದರ್ಚಿಷೇ ಉದರ್ಚಿರ್ಭ್ಯಾಮ್ ಉದರ್ಚಿರ್ಭ್ಯಃ। ....... ಉದರ್ಚಿಷ್ಷು-ಉದರ್ಚಿಸ್ಸು ॥

ದಿವೌಕಸ್ (೭) 'ದೇವತೆ'. ದಿವೌಕಾಃ ದಿವೌಕಸೌ ದಿವೌಕಸಃ। ದಿವೌಕಃ ಇತ್ಯಾದಿ ॥ ಹೀಗೇ ಪಾಕಶಾಸನತೇಜಸ್ (೧)

## ೩ ಕ್ರಿಯಾಪದಗಳ ರೂಪಗಳು[1]

### ಲಟ್-ವರ್ತಮಾನಕಾಲ (Present tense)

೧.ಅಸ್ತಿ (೨೫) ಸ್ತಃ ಸನ್ತಿ। ಅಸಿ ಸ್ಥಃ ಸ್ಥ। ಅಸ್ಮಿ (೪೦) ಸ್ವಃ ಸ್ಮಃ

೨.ಪತತಿ ಪತತಃ ಪತನ್ತಿ (೨೬)। ಪತಸಿ ಪತಥಃ ಪತಥ। ಪತಾಮಿ ಪತಾವಃ ಪತಾಮಃ ॥

೩.ವಿದ್ಯತೇ (೩೧) ವಿದ್ಯೇತೇ ವಿದ್ಯನ್ತೇ। ವಿದ್ಯಸೇ ವಿದ್ಯೇಥೇ ವಿದ್ಯಧ್ವೇ। ವಿದ್ಯೇ ವಿದ್ಯಾವಹೇ ವಿದ್ಯಾಮಹೇ ॥ ಹೀಗೆ ವ್ಯತಿರಿಚ್ಯತೇ (೩೦) ಸಂಹ್ರಿಯತೇ (೩೨) ಪ್ರತಿಪದ್ಯತೇ (೪೦) ಉಹ್ಯನ್ತೇ (೬೧)

೪.ವೇದ (೨೪) ವಿದತುಃ ವಿದುಃ (೧೯) ವೇತ್ಥ ವಿದಥುಃ ವಿದ। ವೇದ ವಿದ್ವಃ ವಿದ್ಮಃ ॥ ಇದಕ್ಕೆ ರೂಪಾಂತರ: ವೇತ್ತಿ ವಿತ್ತಃ ವಿದನ್ತಿ। ವೇತ್ಸಿ ವಿತ್ಥಃ ವಿತ್ಥ। ವೇದ್ಮಿ ವಿದ್ವಃ ವಿದ್ಮಃ ॥

೫.ಚಿನೋತಿ ಚಿನುತಃ ಚಿನ್ವನ್ತಿ (೧೩)। ಚಿನೋಷಿ ಚಿನುಥಃ ಚಿನುಥ। ಚಿನೋಮಿ ಚಿನುವಃ-ಚಿನ್ವಃ ಚಿನುಮಃ-ಚಿನ್ಮಃ ॥

೬.ಅಶ್ನುತೇ (೧೭) ಅಶ್ನುವಾತೇ ಅಶ್ನುವತೇ। ಅಶ್ನುಷೇ ಅಶ್ನುವಾಥೇ ಅಶ್ನುಧ್ವೇ। ಅಶ್ನುವೇ ಅಶ್ನುವಹೇ ಅಶ್ನುಮಹೇ ॥

೭.ಪುನಾತಿ ಪುನೀತಃ ಪುನನ್ತಿ। ಪುನಾಸಿ (೨೯) ಪುನೀಥಃ ಪುನೀಥ। ಪುನಾಮಿ ಪುನೀವಃ ಪುನೀಮಃ ॥

೮.ಜಾನೀತೇ ಜಾನಾತೇ ಜಾನತೇ। ಜಾನೀಷೇ ಜಾನಾಥೇ ಜಾನೀಧ್ವೇ। ಜಾನೇ(೩೮) ಜಾನೀವಹೇ ಜಾನೀಮಹೇ ॥

### ಲಙ್=ಅನದ್ಯತನಭೂತ (Past Indefinite)

---

[1] ಲಡ್ ವರ್ತಮಾನೇ ಲೇಟ್ ವೇದೇ ಭೂತೇ ಲುಙ್ ಲಙ್ ಲಿಟಸ್ತಥಾ।
ವಿಧ್ಯಾಶಿಷೋಸ್ತು ಲಿಙ್ ಲೋಟೌ ಲೃಙ್ ಲುಟೌ ಲೃಟ್ ಭವಿಷ್ಯತಿ ॥

